# ಶ್ರೀ ನೃಸಿಂಹ ಸಹಸ್ರನಾಮಾವಳೀ

## ನಾಮಾನುಕ್ರಮದಲ್ಲಿ ಅರ್ಥ ತಾತ್ಪರ್ಯ ವ್ಯಾಖ್ಯಾನಗಳು

## ಸಂಪುಟ - ಎರಡು



*ಲಕ್ಷ್ಮೀನೃಸಿಂಹ ಮಮದೇಹಿ ಕರಾವಲಂಬಮ್*

ಲೇಖಕರು: ಹೆಚ್. ಎನ್. ನರಸಿಂಹಮೂರ್ತಿ

# ಶ್ರೀ ನೃಸಿಂಹ ಸಹಸ್ರನಾಮಾವಳೀ

ನಾಮಾನುಕ್ರಮದಲ್ಲಿ ಅರ್ಥ ತಾತ್ಪರ್ಯ ವ್ಯಾಖ್ಯಾನಗಳು

## ಸಂಪುಟ - ಎರಡು


ಲೇಖಕರು:

ಹೆಚ್. ಎನ್. ನರಸಿಂಹಮೂರ್ತಿ ಬಿ.ಇ., ಐ.ಆರ್.ಎಸ್.ಇ,

ನಿವೃತ್ತ ಡೆಪ್ಯೂಟಿ ಚೀಫ್ ಇಂಜನೀಯರ್, ಎಸ್.ಇ. ರೈಲ್ವೆ,



ಪ್ರಕಾಶಕರು

ನೃಸಿಂಹ ಪ್ರಕಾಶನ

21 ನೇ ಅಡ್ಡರಸ್ತೆ,

ಎಸ್. ಐ. ಟಿ. ಬಡಾವಣೆ,

ತುಮಕೂರು - 572102

Sree Nrusimha Sahasra Namavalee
Namanukramadalli - Artha - Thathparya
Vyakhyanagalu - Samputa Eradu (2)

Written by
*H. N. Narasimha Murthy* BE, IRSE,
*Retired Deputy Chief Engineer, SE Rly,*

Published by
Nrusimha Prakashana
21st Cross, SIT Extension - TUMKUR - 572102
Ph : 73073



| | |
|---|---|
| Samputa one - | First Edition 1000 Copies Oct, 1996. |
| Samputa two - | First Edition 1000 Copies May 1997. |



**Rate 80/-**

This Book is published with the financial assistance of TIRUMALA TIRUPATI DEVASTHANAMS under their Scheme "AID TO PUBLISH RELIGIOUS BOOKS".

Printed at
Sainath Graphics
205/2, Cottonpet (Aralepete)
Bangalore - 560 053
Ph : 6700650

# ಸಮರ್ಪಣೆ

ಅಸಂಖ್ಯಾತ ತೇಜಶ್ಶಕ್ತಿಗಳಾದ ಆತ್ಮಗಳನ್ನು
ಭವಸಾಗರದಲ್ಲಿ ಹಾಕಿ, ಜನ್ಮ ಜನ್ಮಾಂತರಗಳಲ್ಲಿ
ಅಂಟಿರುವ ಸಂಸ್ಕಾರಗಳನ್ನು ನಿರ್ಮೂಲಮಾಡಿ
ಅಪಾರ ಕರುಣಾಸಮುದ್ರ ಪ್ರೇಮದಿಂದ
ತನ್ನಲ್ಲಿಯೇ ಅಡಗಿಸಿಕೊಳ್ಳುತ್ತಿರುವ ಆನಂದಮಯನೂ
ಪರಮ ದಯಾಮಯನೂ ಆದ ಪರಬ್ರಹ್ಮನ
ಪಾದಾರವಿಂದಗಳಲ್ಲಿ
ಸಮರ್ಪಣೆ

ಪುಟಸಂಖ್ಯೆ

ಎರಡನೆಯ ಸಂಪುಟಕ್ಕೆ -

A. ಅನುಗ್ರಹ ಪತ್ರಗಳು

(i) ಜಗದ್ಗುರು ಶ್ರೀ ಶ್ರೀ ಭಾರತೀ ತೀರ್ಥ
ಮಹಾಸ್ವಾಮಿಗಳವರ ಆಪ್ತ ಕಾರ್ಯದರ್ಶಿಗಳು
ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯ
ಮಹಾಸಂಸ್ಥಾನಂ,
ದಕ್ಷಿಣಾಮ್ನಾಯ ಶ್ರೀ ಶಾರದಾ ಪೀಠಂ
ಶೃಂಗೇರಿ - 577139 (ಕರ್ನಾಟಕ) ಅವರಿಂದ vii

(ii) ಶ್ರೀ ಶ್ರೀ ಶ್ರೀನಾರಾಯಣಾಶ್ರಮ ಸ್ವಾಮಿಗಳವರು
ಶ್ರೀ ಕಾಮಾಕ್ಷೀ ಶಾರದಾಂಬಾ ಮಹಾಸನ್ನಿಧಾನಂ
ಶ್ರೀ ಘನಪುರೀ ಸಂಸ್ಥಾನ, ಶ್ರೀ ಕೋದಂಡಾಶ್ರಮ ಮಠ
ಹೆಬ್ಬೂರು - ಅಂಚೆ - ತುಮಕೂರು ಜಿಲ್ಲೆ-572120
ಅವರಿಂದ ix-x

B. 23-10-96 ರಲ್ಲಿ ನಡೆದ ಮೊದಲನೆ ಸಂಪುಟದ ಬಿಡುಗಡೆ
ಸಮಾರಂಭದ -

a. ಸಂಕ್ಷೇಪ ಪರಿಚಯ xi-xiii

b. ಅನುಗ್ರಹ ವಚನಗಳು xv-xviii

(i) ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನಂ,
ದಕ್ಷಿಣಾಮ್ನಾಯ ಶ್ರೀ ಶಾರದಾಪೀಠಂ, ಶೃಂಗೇರಿಯ
ಜಗದ್ಗುರು ಶ್ರೀ ಶ್ರೀ ಭಾರತೀ ತೀರ್ಥ
ಮಹಾಸ್ವಾಮಿಯವರ ಆಪ್ತಕಾರ್ಯದರ್ಶಿಗಳಿಂದ xv

(ii) ಶ್ರೀ ರಾಮಕೃಷ್ಣ ಶಾರದಾಶ್ರಮ, ಪೊನ್ನಂಪೇಟೆಯ
ಶ್ರೀ ಶ್ರೀ ಸ್ವಾಮಿ ಪುರುಷೋತ್ತಮಾನಂದ ರಿಂದ xvi

(iii) ಶ್ರೀ ಧರ್ಮಸ್ಥಳದ ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರಿಂದ xvii

(iv) ಶ್ರೀ ವಿ. ಕೃಷ್ಣಸ್ವಾಮಿ Spl. Grade Deputy Executive Officer,
TIRUMALA TIRUPATI DEVASHANAMS, Tirupati
ಯವರಿಂದ xviii

C. ಎರಡನೆ ಸಂಪುಟಕ್ಕೆ ಕಿರು ಪೀಠಿಕೆ xix-xx

D. ಶ್ರೀ ನೃಸಿಂಹ ಸಹಸ್ರನಾಮಾವಳಿ -
ಅರ್ಥ, ತಾತ್ಪರ್ಯ ಮತ್ತು ವ್ಯಾಖ್ಯಾನಗಳು
ಐದು ನೂರ ಒಂದನೆಯ ನಾಮದಿಂದ ಒಂದು ಸಾವಿರದನೆಯ
ನಾಮದವರೆಗೆ (ಎರಡೂ ಸೇರಿ), ಬ್ರಹ್ಮ ದೇವರ
ಪ್ರಪತ್ತಿ, ಶ್ರೀ ನರಸಿಂಹನ ವಾಣಿ, ಫಲಶೃತಿ, ಇತ್ಯಾದಿಗಳು 311 - 597

E. ಸ್ತೋತ್ರಗಳು

(i) ಶ್ರೀ ಲಕ್ಷ್ಮೀನೃಸಿಂಹ ಕರಾವಲಂಬನ ಸ್ತೋತ್ರ, ಅರ್ಥ,
ತಾತ್ಪರ್ಯಗಳು ೧-೧೪
(ii) ಶ್ರೀ ಲಕ್ಷ್ಮೀ ನರಸಿಂಹ ಕವಚ ೧೪-೧೭
(iii) ಋಣ ವಿಮೋಚನ ಶ್ರೀ ಲಕ್ಷ್ಮೀನೃಸಿಂಹ ಸ್ತೋತ್ರ ೧೭-೧೮
(iv) ಶ್ರೀ ಲಕ್ಷ್ಮೀನೃಸಿಂಹ ಹಂಸ ಗಾಯತ್ರಿ ಮಂತ್ರ - ತಾತ್ಪರ್ಯ ೧೯-೨೩

F. ಸಮರ್ಪಣೆ - ಶರಣಾಗತಿ - ಪ್ರಪತ್ತಿ
ನಮನ ೨೪

---

## ಈ ಪುಸ್ತಕ ದೊರೆಯುವ ಸ್ಥಳಗಳು

**1.ನೃಸಿಂಹ ಪ್ರಕಾಶನ**
C/o H. N. ನರಸಿಂಹಮೂರ್ತಿ
21 ನೇ ಅಡ್ಡರಸ್ತೆ, S. I. T. ಬಡಾವಣೆ
ತುಮಕೂರು - 572 102
Phone No. (0816) 73073

**2.ಶ್ರೀ ಶ್ರೀನಿವಾಸ ಮೂರ್ತಿ**
No. 30, 1 ನೇ ಮೈನ್, 2ನೇ ಕ್ರಾಸ್,
ಶ್ರೀನಿವಾಸನಗರ, ಬಿ.ಎಸ್.ಕೆ. 1ನೇ ಘಟ್ಟ,
ಬೆಂಗಳೂರು - 560 050.
Phone No. 6697071

**3. ಶ್ರೀ ಬಿ. ಎಸ್. ರಾಮಶಾಸ್ತ್ರಿ**
5/2 ಶಂಕರಮಠ ರಸ್ತೆ
ಬೆಂಗಳೂರು - 560 004.
Phone No. 622131

**4.ಸರಸ್ವತಿ ಬುಕ್ ಹೌಸ್,**
No. 71, ಮಾಸ್ತಿ ವೆಂಕಟೇಶ
ಐಯ್ಯಂಗಾರ್ ರಸ್ತೆ
ಗವೀಪುರಂ ಬಡಾವಣೆ
ಬೆಂಗಳೂರು - 560 019.

**5.ಸಾಯಿನಾಥ್ ಗ್ರಾಫಿಕ್ಸ್**
No. 205/1, ಕಾಟನ್ ಪೇಟೆ
ಬೆಂಗಳೂರು - 560 019.
Ph : 6700650

**6.ಕರ್ಣಿಕ್ ಪ್ರಿಂಟರ್ಸ್**
No. 170, 1 ನೇ 'ಎನ್' ಬ್ಲಾಕ್
6 ನೇ ಅಡ್ಡರಸ್ತೆ, ರಾಜಾಜಿನಗರ
ಬೆಂಗಳೂರು - 560 019.
Ph : 3323042

**Sri Sri Jagadguru Shankaracharya Mahasamsthanam,**
**Dakshinamnaya Sri Sharada Peetham, Sringeri.**

*PRIVATE SECRETARY*
To His Holiness
Sri Jagadguru Shankaracharya
Dakshinamnaya
Sri Sharada Peetham
SRINGERI 577139 (Karnataka)

Ref : D7
Camp : ಶೃಂಗೇರಿ
Date : 21-03-1997

ಗೆ,
ಶ್ರೀ ಹೆಚ್. ಎನ್. ನರಸಿಂಹಮೂರ್ತಿ
ನಿವೃತ್ತ ಡೆಪ್ಯೂಟಿ ಚೀಫ್ ಇಂಜಿನೀಯರ್
21 ನೇ ಕ್ರಾಸ್, SIT ಬಡಾವಣೆ
ತುಮಕೂರು - 572 162

ಶ್ರೀಯುತ ಹೆಚ್. ಎನ್. ನರಸಿಂಹಮೂರ್ತಿಯವರಿಗೆ,

ದಿನಾಂಕ 17.3.97 ರ ನಿಮ್ಮ ಪತ್ರವು ತಲುಪಿ ಶ್ರೀಶ್ರೀಗಳವರ ಚರಣಾರವಿಂದಗಳಲ್ಲಿ ಪ್ರಣಾಮಗಳೊಂದಿಗೆ ಸಮರ್ಪಿಸಲಾಯಿತು.

ನಿಮ್ಮ "ನೃಸಿಂಹ ಸಹಸ್ರನಾಮವಳಿ - ನಾಮಾನುಕ್ರಮದಲ್ಲಿ - ಅರ್ಥ ತಾತ್ಪರ್ಯ ಮತ್ತು ವ್ಯಾಖ್ಯಾನಗಳು" ಎಂಬ ಪುಸ್ತಕದ ಎರಡನೆಯ ಸಂಪುಟದ ಮುದ್ರಣ ಕಾರ್ಯವು ಪೂರ್ಣಗೊಂಡು, ಪುಸ್ತಕವು ಶೀಘ್ರದಲ್ಲೇ ಹೊರಬರಲಿರುವ ವಿಷಯ ತಿಳಿದು ಶ್ರೀಶ್ರೀಗಳವರು ಸಂತೋಷಪಟ್ಟಿದ್ದಾರೆ. ಇದರಿಂದ ಸಕಲ ಜನರಿಗೂ ಮಹದುಪಕಾರವಾಗಲೆಂದು ಆಶೀರ್ವದಿಸಿರುತ್ತಾರೆ.

ಶ್ರೀಶ್ರೀಗಳವರು ಅನುಗ್ರಹಿಸಿರುವ ಆಶೀರ್ಮಂತ್ರಾಕ್ಷತೆಗಳನ್ನು, ಶ್ರೀ ಶಾರದಾ ಚಂದ್ರಮೌಳೀಶ್ವರರ ಪ್ರಸಾದವನ್ನು ಇದರೊಂದಿಗೆ ಕಳುಹಿಸುತ್ತಿದ್ದೇನೆ.

ಅಡಕ : ಪ್ರಸಾದ,

ಇಂತು,

**(Dr. N. S. Dakshinamurthy)**

# ಶ್ರೀ ಕಾಮಾಕ್ಷೀ ಶಾರದಾಂಬಾ ಮಹಾ ಸನ್ನಿಧಾನಂ
# ಶ್ರೀ ಘನಪುರೀ ಸಂಸ್ಥಾನ
## ಶ್ರೀ ಕೋದಂಡಾಶ್ರಮ ಮಠ
ಹೆಬ್ಬೂರು ಅಂಚೆ - ತುಮಕೂರು ಜಿಲ್ಲೆ - 572 120

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥

ಎಂದು ಭಗವದ್ಗೀತೆಯಲ್ಲಿ ಶ್ರೀ ಕೃಷ್ಣಪರಮಾತ್ಮನು ತಿಳಿಸಿರುವಂತೆ ಪರಮಾತ್ಮನ ಲೀಲಾವತಾರಗಳು ಜಗತ್ತಿನಲ್ಲಿ ದುಷ್ಟ ಶಕ್ತಿಗಳನ್ನು ನಾಶಮಾಡಲಿಕ್ಕಾಗಿಯೇ ಉಂಟಾಗಿರುವುವು. ಸ್ವತಃ ಅವನು ಗುಣರಹಿತನಾಗಿಯೂ, ಜನ್ಮಾದಿ ಶೂನ್ಯನಾಗಿಯೂ, ಇಂದ್ರಿಯಾಗೋಚರನಾಗಿಯೂ ಮಾಯಾತೀತನಾಗಿ ಇದ್ದರೂ ತನ್ನ ಮಾಯೆಯ ಅಂಶಗಳಾದ ಸತ್ವಾದಿ ಗುಣಗಳನ್ನು ಅಧಿಕರಿಸಿ ಶಿಷ್ಟರಾದ ದೇವತೆಗಳನ್ನು ಸಲಹುವುದಕ್ಕೂ, ದುಷ್ಟರಾದ ರಾಕ್ಷಸರನ್ನು ಸಂಹರಿಸುವುದಕ್ಕೂ ಕಾರಣನೆನಿಸುವನು.

ಶ್ರೀಮದ್ಭಾಗವತದ ಊತಿಸ್ಕಂಧವೆಂದು ಪ್ರಸಿದ್ಧವಾದ ಏಳನೆಯ ಸ್ಕಂಧದಲ್ಲಿ ನರಸಿಂಹನ ಅವತಾರದ ವಿಷಯವು ಸ್ಪಷ್ಟವಾಗಿ ವಿವರಿಸಲ್ಪಟ್ಟಿರುವುದು.

ಸನಕಾದಿಗಳಿಂದ ಶಾಪಗ್ರಸ್ತರಾದ ಜಯ ವಿಜಯರು ಹಿರಣ್ಯಾಕ್ಷ ಹಿರಣ್ಯಕಶಿಪುಗಳಾಗಿ ಹುಟ್ಟಿದರು. ಇಂತಹ ವಂಶದಲ್ಲಿ ಪ್ರಹ್ಲಾದನಂತಹ ಮಹಾಭಾಗವತೋತ್ತಮನು ಜನ್ಮವನ್ನು ತಾಳಿದನು. ವಿದ್ಯುತ್ತು ಎಲ್ಲೆಡೆಯಲ್ಲಿಯೂ ಇರುವುದು. ಆದರೆ ಅದು ಬಲ್ಬಿನಲ್ಲಿ ಅಭಿವ್ಯಕ್ತವಾದಾಗ ಪ್ರಕಾಶವನ್ನು ಕೊಡುವುದು. ಅಂತೆಯೆ ಪಂಖದಲ್ಲಿ ಅಭಿವ್ಯಕ್ತವಾದಾಗ ಬೀಸುತ್ತಿರುವುದು. ಅದರಂತೆಯೇ ಭಗವಚ್ಛಕ್ತಿಯೆ ಸರ್ವತ್ರ ಸೃಷ್ಟಿಯಲ್ಲಿ ವ್ಯಾಪಿಸಿ ಸರ್ವ ಕಾರ್ಯಗಳಿಗೂ ಮೂಲಕಾರಣವಾಗಿರುವುದು. ಪರಮಾತ್ಮನಿಗೆ ಸಂಬಂಧಿಸಿದ ಸಗುಣ ನಿರ್ಗುಣಗಳ ವಿಶೇಷ ವರ್ಣನೆಗಳೇ ಸಹಸ್ರನಾಮವೆನಿಸಿಕೊಳ್ಳುವುದು. ಅಂತಹ ಸಹಸ್ರನಾಮಗಳಲ್ಲಿ ನರಸಿಂಹ ಸಹಸ್ರನಾಮಾವಳಿಯು ವಿಶೇಷ ಸ್ಥಾನವನ್ನು ಪಡೆದಿರುವುದು. ಇದರ ಆರಂಭದ ನಾಮವು ''ನರಸಿಂಹಾಯ ನಮಃ'', ಕೊನೆಯ ನಾಮವು ''ನರಸಿಂಹರೂಪಾಯ ನಮಃ'' ಎಂದು ಬರುವುದು ಅದನ್ನು ಅರ್ಚಿಸುವವರಿಗೆ ತಿಳಿದ ವಿಷಯ. ಆದ್ಯಂತ ನಾಮಗಳಲ್ಲಿ ನರಸಿಂಹಾವತಾರದ ಮುಖ್ಯ ಉದ್ದೇಶಗಳೆಲ್ಲವೂ ತಿಳಿಸಿದಂತೆ ಆಗಿರುವುದು. ಒಂದೊಂದು ನಾಮದಲ್ಲಿಯೂ ವಿಶೇಷ ಅರ್ಥಗಳಿದ್ದು ಸಾಧಕರು ಒಂದೊಂದನ್ನೇ ಜಪಿಸಿ ಸಿದ್ಧ ಪುರುಷರಾಗುವರು. ಅಂತಹವರಲ್ಲಿ ಆರಂಭದಲ್ಲಿ ಅನೇಕ ಲೌಕಿಕ ಉದ್ಯಮಗಳಲ್ಲಿದ್ದು ನಿವೃತ್ತರಾದ ಮೇಲೆ ದಿನದ ಇಪ್ಪತ್ತನಾಲ್ಕು ಗಂಟೆಗಳಲ್ಲಿಯೂ

ಶ್ರೀ ನರಸಿಂಹ ಸ್ವಾಮಿಯೇ ತನ್ನ ಜೀವನದ ಉಸಿರು ಎಂದು ತಿಳಿದ ಹೆಚ್. ಎನ್. ನರಸಿಂಹಮೂರ್ತಿಯವರು ಬರೆದಿರುವ ನರಸಿಂಹ ಸಹಸ್ರನಾಮದ ಭಾಷ್ಯ ವಿವರಣೆಯು ವಿದ್ವಜ್ಜನರಿಗೆ ವಿಶೇಷ ಅನುಭವಕ್ಕೆ ಬೇಕಾದ ಸಾಧನವನ್ನು ನಿರ್ಮಿಸುತ್ತದೆ. ಸಾರಸ್ವತ ಸೇವೆಯಿಂದ ತಮ್ಮ ಜೀವನವನ್ನು ಸಾರ್ಥಕ ಮಾಡಿಕೊಳ್ಳಲು ಬಯಸುತ್ತಿರುವ ಇವರು ನಿಜವಾಗಿಯೂ ಶ್ರೀ ಲಕ್ಷ್ಮೀ ನರಸಿಂಹ ದೇವರ ಕೃಪೆಗೆ ಪಾತ್ರರಾಗಿದ್ದಾರೆ ಎಂಬುದು ಸಿದ್ಧ ಪುರುಷರಿಗೆ ಮಾತ್ರ ತಿಳಿಯಲು ಸಾಧ್ಯವಾಗಿದೆ.

563. ಕೃಪಾನಿಧಯೇ ನಮಃ

568. ಅಕಾರಾದಿಹಕಾರಾಂತಾಯ ನಮಃ

610. ಗುರುವೇ ನಮಃ

632. ಧಾಮ್ನೇ ನಮಃ

719. ಸಪ್ತಾಬ್ಧಿಮೇಖಲಾಯ ನಮಃ

722. ಸಪ್ತ ಛಂದೋಮಯಾಯ ನಮಃ

780. ನರಸಿಂಹಾಯ ನಮಃ

821. ರಕ್ತಮಾಲ್ಯವಿಭೂಷಾಯ ನಮಃ

1000. ನರಸಿಂಹರೂಪಾಯ ನಮಃ

ಈ ನಾಮಗಳಿಗೆ ಲೇಖಕರು ನೀಡಿರುವ ವಿವರಣೆಗಳನ್ನು ಪರಿಶೀಲಿಸಿದಲ್ಲಿ ಇವರು ಇವರಾಗಿಯೇ ಅದನ್ನು ಬರೆದಿಲ್ಲ. ಶ್ರೀ ನರಸಿಂಹ ಸ್ವಾಮಿಯೇ ಇವರ ಕೈಯಿಂದ ಅದನ್ನು ಬರೆಸಿರುವನು ಎಂಬುದು ವಿದ್ವಜ್ಜನ ವೇದ್ಯವಾಗುವುದು. ಶ್ರೀಯುತರ ಎರಡು ಭಾಗಗಳಿಂದ ಮುದ್ರಿಸಲ್ಪಟ್ಟಿರುವ ಈ ಸಹಸ್ರನಾಮಭಾಷ್ಯವು ಇನ್ನು ಹೆಚ್ಚಿನ ರೀತಿಯಲ್ಲಿ ಇತರ ಸಹಸ್ರನಾಮಗಳಿಗೂ ವಿಶೇಷ ಅರ್ಥವುಳ್ಳ ಭಾಷ್ಯಗಳನ್ನು ಬರೆಯುವ ಶಕ್ತಿಯನ್ನು ನೀಡಲಿ ಎಂದು ಸರ್ವದೇವತಾಧಿಷ್ಠಿತಳಾದ ಶ್ರೀ ಚಕ್ರೇಶ್ವರೀ ಕಾಮಾಕ್ಷೀ ಶಾರದಾಂಬೆಯನ್ನು ಪ್ರಾರ್ಥಿಸಿ ಶ್ರೀಯುತರಿಗೆ ಸುವರ್ಣ ಮಂತ್ರಾಕ್ಷತೆಗಳನ್ನು ನೀಡಿರುವೆವು.

ಧಾತೃ ಸಂವತ್ಸರ
ಫಾಲ್ಗುಣ ಕೃಷ್ಣ
ಏಕಾದಶಿ ಗುರುವಾರ
03 - 4 - 1997

ಶ್ರೀ ನಾರಾಯಣಾಶ್ರಮಸ್ವಾಮಿಗಳವರು
ಕಾಮಾಕ್ಷೀ ಶಾರದಾ ಪೀಠ
ಶ್ರೀ ಕೋದಂಡಾಶ್ರಮ ಮಠ
ಘನಪುರೀ ಮಹಾಸಂಸ್ಥಾನ
ಹೆಬ್ಬೂರು - ತುಮಕೂರು

# "ಶ್ರೀ ನರಸಿಂಹ ಸಹಸ್ರನಾಮಾವಳಿ" ನಾಮಾನುಕ್ರಮದಲ್ಲಿ ಅರ್ಥ, ತಾತ್ಪರ್ಯ ಮತ್ತು ವ್ಯಾಖ್ಯಾನಗಳು ಪುಸ್ತಕದ ಬಿಡುಗಡೆ ಸಮಾರಂಭ.

ತುಮಕೂರು : ನಿವೃತ್ತ ಡೆಪ್ಯೂಟಿ ಚೀಫ್ ಇಂಜನೀಯರ್ (ರೈಲ್ವೆ), ಹೆಚ್. ಎನ್. ನರಸಿಂಹಮೂರ್ತಿ ಅವರು ಬರೆದಿರುವ ಅರ್ಥ, ತಾತ್ಪರ್ಯ, ವ್ಯಾಖ್ಯಾನಗಳನ್ನೊಳಗೊಂಡ "ಶ್ರೀ ನರಸಿಂಹ ಸಹಸ್ರನಾಮಾವಳಿ" ಪುಸ್ತಕದ ಬಿಡುಗಡೆಯ ಸಮಾರಂಭ ಬ್ರಾಹ್ಮಣ ಸೇವಾ ಸಂಘ - ವಿದ್ಯಾರ್ಥಿಮಂದಿರದಲ್ಲಿ ದಿನಾಂಕ 23-10-96ನೇ ಬುಧವಾರ ನಡೆಯಿತು.

ಕಾರ್ಯಕ್ರಮದ ಪ್ರಾರಂಭದಲ್ಲಿ ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮ ತುಮಕೂರಿನ ಪರಮ ಪೂಜ್ಯ ಶ್ರೀ ಶ್ರೀ ಶ್ರೀ ನಿರ್ಭಯಾನಂದ ಸರಸ್ವತಿ ಸ್ವಾಮೀಜಿ, ಪರಮ ಪೂಜ್ಯ ಶ್ರೀ ಶ್ರೀ ಶ್ರೀ ವೀರೇಶಾನಂದ ಸರಸ್ವತಿ ಸ್ವಾಮೀಜಿ, ಪರಮ ಪೂಜ್ಯ ಶ್ರೀ ಶ್ರೀ ಶ್ರೀ ಶಾಂತಾನಂದ ಸರಸ್ವತಿ ಸ್ವಾಮೀಜಿ ಮತ್ತು ಬೆಂಗಳೂರಿನ ಓಂಕಾರಾಶ್ರಮದ ಪರಮ ಪೂಜ್ಯ ಶ್ರೀ ಶ್ರೀ ಶ್ರೀ ವಿನಯಾನಂದ ಸರಸ್ವತಿ ಸ್ವಾಮೀಜಿಯವರು ಮತ್ತು ಚಿಕ್ಕಬಳ್ಳಾಪುರದ ಯೋಗೀಶ್ವರ ಜ್ಞಾನಪೀಠದ ಪರಮ ಪೂಜ್ಯ ಶ್ರೀ ಶ್ರೀ ಶ್ರೀ ನಿತ್ಯಾನಂದ ತೀರ್ಥ ಸ್ವಾಮೀಜಿಯವರುಗಳಿಗೆ ಪೂರ್ಣಕುಂಭ ಸ್ವಾಗತ ನೀಡಲಾಯಿತು.

ಶ್ರೀಮತಿ ಹೆಚ್. ಎನ್. ಜಯಶ್ರೀಯವರಿಂದ ಪ್ರಾರ್ಥನೆಯಾದ ನಂತರ ಲೇಖಕರು ಸ್ವಾಗತ ಭಾಷಣ ಮಾಡಿ ಅನುಗ್ರಹ ಪತ್ರಗಳನ್ನು ಓದಿದರು.

ಪರಮ ಪೂಜ್ಯ ಶ್ರೀ ಶ್ರೀ ಶ್ರೀ ವೀರೇಶಾನಂದ ಸರಸ್ವತಿ ಸ್ವಾಮೀಜಿಯವರು ಜ್ಯೋತಿ ಬೆಳಗಿಸಿ ಸುಶ್ರಾವ್ಯ ಸುಮಧುರ ಭಜನೆಯನ್ನು ನಡೆಸಿಕೊಟ್ಟರು.

ಶ್ರೀ ಶ್ರೀ ಶ್ರೀ ನಿರ್ಭಯಾನಂದ ಸರಸ್ವತಿ ಸ್ವಾಮೀಜಿಯವರು ಪುಸ್ತಕದ ಬಿಡುಗಡೆಮಾಡಿ, ವಿಶ್ವದ ಅನೇಕ ಧರ್ಮಗಳ ಬಗ್ಗೆ ವಿವರಿಸಿ ಹಿಂದೂ ಧರ್ಮವು ಹೇಗೆ ಸನಾತನ ಕಾಲದಿಂದ ನಡೆದು ಬಂದಿದೆ, ಭಗವನ್ನಾಮಗಳ ವಿವಿಧ ರೀತಿಗಳು, ಸಹಸ್ರನಾಮಗಳ ವಿವರಣೆ ತಿಳಿಸಿ ಪ್ರಸ್ತುತ "ಶ್ರೀ ನರಸಿಂಹ ಸಹಸ್ರನಾ ಮವಳಿ" ಹೇಗೆ ಈ ಪುಸ್ತಕದಲ್ಲಿ ವಾಖ್ಯಾನಿಸಲಾಗಿದೆ ಎಂಬುದನ್ನು ಹೇಳಿದರು.

ಶ್ರೀ ವೀರೇಶಾನಂದ ಸ್ವಾಮೀಜಿಯವರು ಮಾತನಾಡಿ ಭಗವಚ್ಚಿಂತನೆಗೆ ಸಹಸ್ರನಾಮದ ಅವಶ್ಯಕತೆ, ವಾಸ್ತು ಪುರುಷನನ್ನು ಹೊರಗೆ ಹುಡುಕುವ ಬದಲು ನಮ್ಮಲ್ಲಿಯೇ ಹುಡುಕಿ ಅರಿತುಕೊಳ್ಳುವುದು, ನಾಮಗಳಲ್ಲಿ ಅಡಗಿರುವ ಅಮೂಲ್ಯ ವಿಚಾರಗಳ ಮನನ ಮಾಡುವುದು, ಮುಂತಾದವುಗಳನ್ನು ವಿವರಿಸಿದರು. ಆಧ್ಯಾತ್ಮಿಕ ವಿಚಾರಗಳನ್ನೊಳಗೊಂಡ

ಈ ಪುಸ್ತಕದ ಬೆಲೆಗೆ (ಎರಡೂ ಸಂಪುಟಗಳ ಬೆಲೆ ಒಟ್ಟು ೨೦೦ ರೂಪಾಯಿಗಳು) ಕೊಂಡು ಎಲ್ಲ ಆಧ್ಯಾತ್ಮಿಕರೂ ಬಹಳ ಪ್ರಯೋಜನ ಹೊಂದಲಿ ಎಂದು ಭಕ್ತವೃಂದಕ್ಕೆ ಆಶೀರ್ವದಿಸಿದರು.

ಶ್ರೀ ಶ್ರೀ ಶ್ರೀ ನಿತ್ಯಾನಂದ ತೀರ್ಥ ಸ್ವಾಮೀಜಿಯವರು ಪುಸ್ತಕದ ವಿಚಾರವಾಗಿ ಹೇಳುತ್ತಾ ಪರಮಾತ್ಮನನ್ನು ನಾವು ಯಾವ ಭಾವದಿಂದ ಮನ ಒಪ್ಪುವುದೋ ಅದೇ ಭಾವದಲ್ಲಿ ಮನನ ಮಾಡಿ ಒಲಿಸಿಕೊಳ್ಳಬಹುದು ಎಂದರು. ಉದಾಹರಣೆಗೆ ಕೃಷ್ಣನು ಒಬ್ಬನೇ ಆದರೂ ಬಾಲಕೃಷ್ಣ, ಯಶೋದಾಕೃಷ್ಣ, ರಾಧಾಕೃಷ್ಣ, ಬೆಣ್ಣೆಕೃಷ್ಣ, ಗೀತೆಯ ಕೃಷ್ಣ ಈ ರೀತಿ ವಿವಿಧ ಕೃಷ್ಣರಲ್ಲಿ ಯಾವುದು ಮನಸ್ಸಿನಲ್ಲಿ ನಿಲ್ಲುವುದೋ ಅದನ್ನೇ ಮನನ ಮಾಡಿದರೆ ಒಳ್ಳೆಯದು ಎಂದು ಹೇಳಿದರು ಮತ್ತು ಗ್ರಂಥಕರ್ತ ಶ್ರೀ ಹೆಚ್. ಎನ್. ನರಸಿಂಹ ಮೂರ್ತಿ ಅವರಿಗೆ ಪುಷ್ಪಹಾರ ಹಾಕಿ, ಶಾಲು ಹೊದಿಸಿ ಸನ್ಮಾನಿಸಿದರು.

''ಶಂಕರ ಭಾಸ್ಕರ'' ತ್ರೈಮಾಸಿಕ ಪತ್ರಿಕೆಯ ಸಂಪಾದಕರಾದ ಬೆಂಗಳೂರಿನ ವೇ||ಬ್ರ||ಶ್ರೀ|| ಸುಬ್ರಾಯಶರ್ಮರು ಮಾತನಾಡಿ ಉಗ್ರ ನರಸಿಂಹನು ಉಗ್ರನಲ್ಲ, ನಮ್ಮಲ್ಲಿರುವ ಉಗ್ರತೆಯನ್ನು ಹೋಗಲಾಡಿಸುತ್ತಾನೆ. ಅವನು ಪರಮ ಶಾಂತ ನರಸಿಂಹನು ಎಂದೆಲ್ಲ ವಿವರಿಸಿದರು ಮತ್ತು ಪುಸ್ತಕದ ವಿಚಾರವಾಗಿ ಭಾಷಣಮಾಡುತ್ತಾ ಇದರಲ್ಲಿರುವ ನಾಮಗಳಿಗೆ ವ್ಯಾಖ್ಯಾನಿಸಿರುವ ರೀತಿ, ಅದರಲ್ಲಿರುವ ವಿವಿಧ ಅರ್ಥಗಳು, ಅನೇಕ ವೇದಾಂತ ಪುರಾಣೇತಿಹಾಸ ವಿಚಾರಗಳು, ಇತ್ಯಾದಿಗಳು ಓದುಗರ ಮನವನ್ನು ಅಧ್ಯಾತ್ಮಿಕದ ಭಾವನೆಗೆ ಒಯ್ಯುತ್ತದೆ ಎಂಬುದನ್ನು ತಿಳಿಸಿದರು. ಪುಸ್ತಕವು ಸರ್ವ ಭಕ್ತ ಬಾಂಧವರಿಗೆ ಉಪಯುಕ್ತವೂ ಮತ್ತು ಇದನ್ನು ಅನೇಕ ಉಪನಯನ, ವಾರ್ಷಿಕ ಸಮಾರಂಭಗಳು, ಹುಟ್ಟು ಹಬ್ಬಗಳು, ವಿವಾಹ - ಇತ್ಯಾದಿ ಸಮಯಗಳಲ್ಲಿ ಕೊಟ್ಟು (Presentation and Gift) ಅಧ್ಯಾತ್ಮಿಕ ಜ್ಞಾನವೃದ್ಧಿಗೆ ದಾರಿ ಮಾಡಿಕೊಡಬಹುದು ಎಂದು ವಿವರಿಸಿದರು. ಮತ್ತು ಇದರಲ್ಲಿರುವ ಅಪರಿಮಿತ ಜ್ಞಾನಕ್ಕೆ ಪುಸ್ತಕದ ಬೆಲೆಯು (ಸಂಪುಟ ಒಂದು ಮತ್ತು ಸಂಪುಟ ಎರಡು - ರ ಒಟ್ಟು ಬೆಲೆಯು ೨೦೦/- ರೂಗಳು) ತೀರಾ ಅತ್ಯಲ್ಪ ಮತ್ತು ಎಲ್ಲರೂ ಪುಸ್ತಕವನ್ನು ವಿಶಾಲ ಮನಸ್ಸಿನಿಂದ ಕೊಂಡು ಉಪಯೋಗಿಸಿಕೊಂಡು ಅಧ್ಯಾತ್ಮಿಕ ಸಾಧನೆಯನ್ನು ಬೆಳಸಿಕೊಳ್ಳಲಿ ಎಂದು ಹಾರೈಸಿದರು.

ಶ್ರೀ ವಿನಯಾನಂದರು ಮತ್ತು ಶ್ರೀ ಶಾಂತಾನಂದರು ಆಶೀರ್ವದಿಸಿದರು.

ನಂತರ ಪರಮ ಪೂಜ್ಯ ಸ್ವಾಮೀಜಿಯವರುಗಳಿಗೆ ಫಲ ಪುಷ್ಪ ಹಾರಗಳನ್ನು ಅರ್ಪಿಸಲಾಯಿತು. ಶ್ರೀ ಸುಬ್ರಾಯಶರ್ಮರನ್ನು, ಪುಸ್ತಕ ಮುದ್ರಿಸಿರುವ ರಾಜಕಮಲ್ ಪ್ರೆಸ್ಸಿನ ಮಾಲಿಕ ಶ್ರೀ ಕೆ. ಎನ್. ನರಸಿಂಗರಾಯರನ್ನು ಮತ್ತು ಅವರ ಮಕ್ಕಳು ಶ್ರೀ ಕೆ. ಎನ್. ನಾಗರಾಜರನ್ನು ಸನ್ಮಾನಿಸಲಾಯಿತು.

ಅನೇಕ ವಿಚಾರಧಾರೆಗಳನ್ನೊಳಗೊಂಡ ಈ ಪುಸ್ತಕವನ್ನು ಬರೆದು

ಹೊರತಂದಿರುವುದಕ್ಕಾಗಿ ಲೇಖಕರಾದ ಹೆಚ್. ಎನ್. ನರಸಿಂಹ ಮೂರ್ತಿಯವರನ್ನು ಸ್ವಾಮಿಜಿಯವರುಗಳು ಮತ್ತು ಶ್ರೀ ಸುಬ್ರಾಯ ಶರ್ಮರು ಅಭಿನಂದಿಸಿ ಇದೇ ರೀತಿ ಇನ್ನೂ ಹಲವು ಪುಸ್ತಕಗಳು ಲೇಖಕರಿಂದ ಹೊರಬರಲಿ ಎಂದು ಆಶೀರ್ವದಿಸಿದರು.

ಶ್ರೀ ನರಸಿಂಹ ಸ್ವಾಮಿಯ ಭಕ್ತ ಸಂಘಗಳ ಪರವಾಗಿ ಶ್ರೀ ಕೆ. ಎನ್. ಲಕ್ಷ್ಮೀ ನಾರಾಯಣಗುಪ್ತ, ಶ್ರೀ ಕೆ. ಎನ್. ಪ್ರಭಾಕರ ಶೆಟ್ಟಿ ಯವರು ಮತ್ತು ಶ್ರೀ ಶೀಬೀ ನರಸಿಂಹ ಸ್ವಾಮಿ ಸೇವಾ ಸಮಿತಿ ಟ್ರಸ್ಟಿನ ಪರವಾಗಿ ಶ್ರೀ ಕೆ. ನರಸಿಂಹ ಮೂರ್ತಿಯವರು (ಆಡಿಟರ್) ಮಾತನಾಡಿ ಲೇಖಕರನ್ನು ಅಭಿನಂದಿಸಿದರು.

ನಂತರ ಪುಸ್ತಕವನ್ನು ಹೊರತರುವಲ್ಲಿ ಅಪಾರ ಕೃಪೆ ಮಾಡಿದ ಶ್ರೀ ನರಸಿಂಹ ಸ್ವಾಮಿಯವರಿಗೆ ಮತ್ತು ಅಪಾರ ಧನ ಸಹಾಯ ಮಾಡಿದ ತಿರುಪತಿ ವೆಂಕಟೇಶ್ವರ ಸ್ವಾಮಿಯವರಿಗೆ ಭಕ್ತಿ ಪೂರ್ವಕ ನಮನ ಸಲ್ಲಿಸಲಾಯಿತು. ಅಪಾರ ಭಕ್ತವೃಂದಕ್ಕೆ ಕೃತಜ್ಞತೆ ಸಲ್ಲಿಸಿ ವಂದಿಸಲಾಯಿತು.

ನಂತರ ಶ್ರೀ ಅರೆಯೂರು ನರಸಿಂಹ ಮೂರ್ತಿಯವರು ವಂದನಾರ್ಪಣೆಯನ್ನು ಸಲ್ಲಿಸಿದರು.

ನಂತರ ಮಂಗಳಾರತಿ, ಪ್ರಸಾದದೊಡನೆ ಸಮಾರಂಭವು ಮುಕ್ತಾಯವಾಯಿತು.

**Sri Sri Jagadguru Shankaracharya Mahasamsthanam,**
Dakshinamnaya Sri Sharada Peetham, Sringeri.

*PRIVATE SECRETARY*
To His Holiness
Sri Jagadguru Shankaracharya
Dakshinamnaya
Sri Sharada Peetham
Sringeri 577139 (Karnataka)

Ref : D7 - 8367
Camp : ಶೃಂಗೇರಿ
Date : 20-10-1996

ಗೆ,
ಶ್ರೀ ಹೆಚ್. ಎನ್. ನರಸಿಂಹಮೂರ್ತಿ
ರಿ|| ಡೆಪ್ಯೂಟಿ ಚೀಫ್ ಇಂಜಿನೀಯರ್
21 ನೇ ಕ್ರಾಸ್, SIT ಬಡವಾಣೆ
ತುಮಕೂರು - 572 162

ಶ್ರೀಯುತ ಹೆಚ್. ಎನ್. ನರಸಿಂಹಮೂರ್ತಿಯವರಿಗೆ,

ದಿನಾಂಕ 11-10-96 ರ ನಿಮ್ಮ ಪತ್ರವು ಅದರೊಂದಿಗೆ ಲಗತ್ತಿಸಿದ ಪುಸ್ತಕ ಬಿಡುಗಡೆ ಸಮಾರಂಭದ ಆಮಂತ್ರಣ ಪತ್ರಿಕೆಯು ತಲುಪಿ ಶ್ರೀಶ್ರೀಗಳವರ ಚರಣಾರವಿಂದಗಳಲ್ಲಿ ಸಮರ್ಪಿಸಿರುತ್ತೇನೆ.

ನಿಮ್ಮ "ಶ್ರೀ ನೃಸಿಂಹ ಸಹಸ್ರನಾಮವಳೀ - ನಾಮಾನುಕ್ರಮದಲ್ಲಿ - ಅರ್ಥ, ತಾತ್ಪರ್ಯ, ಮತ್ತು ವ್ಯಾಖ್ಯಾನಗಳು" ಎಂಬ ಪುಸ್ತಕದ ಬಿಡುಗಡೆ ಸಮಾರಂಭವು ಯಶಸ್ವಿಯಾಗಿ ನೆರವೇರಲೆಂದು, ಪುಸ್ತಕವು ಉತ್ತಮ ಪುಸ್ತಕವಾಗಿ ಪ್ರಚಾರಗೊಳ್ಳಲೆಂದು ಶ್ರೀಶ್ರೀಗಳವರು ತಮ್ಮ ಆಶೀರ್ವಾದಗಳನ್ನು ತಿಳಿಸಿರುತ್ತಾರೆ.

ಶ್ರೀಶ್ರೀಗಳವರು ನಿಮ್ಮ ಶ್ರೇಯಸ್ಸಿಗಾಗಿ ಆಶೀರ್ವದಿಸಿ ಅನುಗ್ರಹಿಸಿರುವ ಆಶೀರ್ಮಂತ್ರಾಕ್ಷತೆಗಳನ್ನು, ಶ್ರೀ ಶಾರದಾ ಚಂದ್ರಮೌಳೀಶ್ವರರ ಪ್ರಸಾದವನ್ನು ಇದರೊಂದಿಗೆ ಕಳುಹಿಸುತ್ತಿದ್ದೇನೆ.

ಅಡಕ : ಪ್ರಸಾದ,

ಇಂತು,

**(Dr. N. S. Dakshinamurthy)**

Phone : 240
STD (Code) 08273

# Sri Ramakrishna Sharadashrama

PONNAMPET - 571 216
Kodagu (Karnataka)



Ref :

Date : 17-10-96

ಪ್ರಿಯ ಶ್ರೀ H. N. ನರಸಿಂಹಮೂರ್ತಿಯವರಿಗೆ,

ನಿಮ್ಮ ಆಹ್ವಾನ ಪತ್ರಿಕೆಯೊಂದಿಗೆ ನಿಮ್ಮ ವಿಶ್ವಾಸವೂ ಬಂದು ತಲುಪಿತು.

ಶ್ರೀ ನರಸಿಂಹ ನಾಮವು ಶಕ್ತಿಮಂತ್ರ. ಅಂತಹ ಸಹಸ್ರ ಶಕ್ತಿಮಂತ್ರಗಳ ಮನನ ಮಾಡಿದ ನಿಮ್ಮ ವ್ಯಕ್ತಿತ್ವವು ಮಂತ್ರಪೂತವಾಯಿತು. ನಿಮ್ಮಿಂದ ರಚಿತವಾದ ನರಸಿಂಹ ಸಹಸ್ರನಾಮಾವಳಿಯ ವ್ಯಾಖ್ಯಾನವು ಆಸ್ತಿಕರ, ಅದರಲ್ಲೂ ನರಸಿಂಹ ಭಕ್ತರ ಹೃನ್ಮನಗಳಿಗೆ ತಲುಪಿ ಅವರೂ ಪಾವನರಾಗಲಿ.

ನಿಮ್ಮ ನೆಚ್ಚಿನ ಗ್ರಂಥ ಬಿಡುಗಡೆಯ ಸಮಾರಂಭಕ್ಕೆ ಶ್ರೇಷ್ಠ ಯುವಯತಿ ಸಮುದಾಯವೇ ಆಗಮಿಸುವುದು ನನ್ನನ್ನು ರೋಮಾಂಚಿತನನ್ನಾಗಿಸಿದೆ. ಮತ್ತು ವೇದ ಬ್ರಹ್ಮರಾದ ಶ್ರೀ ಸುಬ್ರಾಯ ಶರ್ಮರ ಭಾಷಣವು ಕಾರ್ಯಕ್ರಮಕ್ಕೆ ಮೆರುಗು ಕೊಡುವುದರಲ್ಲಿ ಸಂದೇಹವಿಲ್ಲ.

ಜಯವಾಗಲಿ, ಶುಭವಾಗಲಿ

ಇತಿ

ಶ್ರೀ ರಾಮಕೃಷ್ಣ ಸ್ಮರಣೆಗಳೊಂದಿಗೆ
ಸ್ವಾಮಿ ಪುರುಷೋತ್ತಮಾನಂದ

ದೂರವಾಣಿ: ಕಛೇರಿ: 77121

# ಡಿ. ವೀರೇಂದ್ರ ಹೆಗ್ಗಡೆಯವರು

ಶ್ರೀ ಧರ್ಮಸ್ಥಳ-574 216

ಕರ್ನಾಟಕ

ಕ್ರಮ ಸಂಖ್ಯೆ 19712 / 12-10-96 O. R. No. 14330

ಶ್ರೀ ಹೆಚ್. ಎನ್. ನರಸಿಂಹಮೂರ್ತಿ
ತುಮಕೂರು

ಆಹ್ವಾನ ಪತ್ರಿಕೆ ತಲುಪಿರುತ್ತದೆ. ಶ್ರೀ ನರಸಿಂಹ ಸಹಸ್ರನಾಮಾವಳಿ ಪುಸ್ತಕದ ಬಿಡುಗಡೆಯ ಸಮಾರಂಭ ಕಾರ್ಯಕ್ರಮಗಳ ವಿಷಯ ತಿಳಿದು ಸಂತೋಷವಾಯಿತು.

ನಿಯೋಜಿತ ಕಾರ್ಯಕ್ರಮಗಳು ಆಮಂತ್ರಿತರ ಸಾಹಿತ್ಯಾಭಿಮಾನಿಗಳ ಉಪಸ್ಥಿತಿಯಲ್ಲಿ ಯಶಸ್ವಿಯಾಗಿ ಜರುಗಿ ಪುಸ್ತಕವು ಓದುಗರಿಂದ ಮೆಚ್ಚುಗೆಯನ್ನು ಪಡೆಯುವಂತಾಗಲೆಂದು ಶುಭ ಹಾರೈಕೆಗಳು

ಇತಿ

ಡಿ. ವೀರೇಂದ್ರ ಹೆಗ್ಗಡೆಯವರು

*V. KRISHNASWAMY*
Spl. Gr. Deputy Executive Officer
Tirumala Tirupati Devasthanams

Station : Tirupathi,
Date : 19-10-1996

Dear Sri Narasimha Murthy,

Thank you very much for your kind invitation on the occassion of the function connected to the release of the Book 'Narasimha Sahasranamavali' on 23-10-1996 at Tumkur.

I Pray Lord Venkateswara and His Consort Goddess Padmavathi to bless the august occassion with Success.

Srivari Akshathas are enclosed herewith blessing the occassion.

With regards.

Yours Sincerely,
**V. Krishnaswamy**

To,

H. N. Narasmiha Murthy,
Retd. Dy. Chief Engineer,
21st Cross, SIT, Badavani,
Tumkur - 2.

# ಎರಡನೆಯ ಸಂಪುಟಕ್ಕೆ ಕಿರು ಪೀಠಿಕೆ

ಪರಮಾತ್ಮನ ದಿವ್ಯಾನುಗ್ರಹದಿಂದ ಈ ಎರಡನೆಯ ಸಂಪುಟದ ಮುದ್ರಣ ಕಾರ್ಯವು ಮುಂದುವರೆದು 23-10-96 ರಂದು ಬಿಡುಗಡೆಯಾದ ಮೊದಲ ಸಂಪುಟದ ನಂತರ ಸುಮಾರು ಆರು ತಿಂಗಳ ಅತ್ಯಲ್ಪ ಅವಧಿಯಲ್ಲಿ ಹೊರ ತರಲು ಸಾಧ್ಯವಾಗಿರುತ್ತೆ.

ಮೊದಲನೆಯ ಸಂಪುಟದ 309ನೇ ಪುಟದಲ್ಲಿ ಕೊಟ್ಟಿರುವ ಪೀಠಿಕೆಯಲ್ಲಿ ಉಲ್ಲೇಖಿಸಿರುವಂತೆ, ಈ ಸಂಪುಟವು ಮುಂದುವರೆದು ಐದುನೂರ ಒಂದನೆಯ ನಾಮದಿಂದ ಒಂದು ಸಾವಿರದನೇ ನಾಮಗಳವರೆಗೆ (ಎರಡೂ ಸೇರಿ) ಅರ್ಥ, ತಾತ್ಪರ್ಯ, ವ್ಯಾಖ್ಯಾನಗಳು, ನಂತರ ಬ್ರಹ್ಮ ದೇವರ ಪ್ರಪತ್ತಿ, ಶ್ರೀ ನರಸಿಂಹ ಸ್ವಾಮಿಯವರು ನೀಡಿದ ವರ ರೂಪದ ದಿವ್ಯವಾಣಿಗಳು, ಮತ್ತು ಬ್ರಹ್ಮ ದೇವರಿಂದ ಹೊರಬಂದ ಈ ಸಹಸ್ರನಾಮವು ನಮ್ಮವರೆಗೆ ಹರಿದು ಬಂದ ದಾರಿ, ಇತ್ಯಾದಿಗಳು ಈ ಸಂಪುಟದಲ್ಲಿವೆ.

ಮತ್ತು ಪ್ರಿಯ ಭಕ್ತರ ಇಚ್ಛೆಯಂತೆ ಈ ಪ್ರಸ್ತುತ ಸಂಪುಟದಲ್ಲಿ -
ಶ್ರೀ ಲಕ್ಷ್ಮೀ ನರಸಿಂಹ ಕರಾವಲಂಬನ ಸ್ತೋತ್ರ, ಅದರ ಅರ್ಥ, ತಾತ್ಪರ್ಯಗಳು,
ಶ್ರೀ ನೃಸಿಂಹ ಕವಚ ಸ್ತೋತ್ರ,
ಋಣ ವಿಮೋಚನ ಶ್ರೀ ಲಕ್ಷ್ಮೀ ನೃಸಿಂಹ ಸ್ತೋತ್ರ,
ಮತ್ತು ಶ್ರೀ ನೃಸಿಂಹ ಹಂಸ ಗಾಯತ್ರಿ ಮಂತ್ರ ಮತ್ತು ಅದರ ಭಾವಾರ್ಥಗಳು- ಸೇರಿವೆ.

ಈ ಬೃಹದ್ಗ್ರಂಥವನ್ನು ಅವಲೋಕಿಸಿ ಅನುಗ್ರಹಾಶೀರ್ವಚನಗಳನ್ನು ದಯಪಾಲಿಸಿ ಗ್ರಂಥವು ಅಪಾರ ಭಕ್ತವೃಂದವನ್ನು ಸೇರಲು ಅನುಗ್ರಹಿಸಿರುವ

ಶ್ರೀ ಶ್ರೀ ಭಾರತೀ ತೀರ್ಥ ಮಹಾಸ್ವಾಮಿಗಳು,
ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನಂ,
ದಕ್ಷಿಣಾಮ್ನಾಯ ಶ್ರೀ ಶಾರದಾ ಪೀಠಂ, ಶೃಂಗೇರಿ,
ಮತ್ತು
ಶ್ರೀ ಶ್ರೀ ಶ್ರೀನಾರಾಯಣಾಶ್ರಮ ಸ್ವಾಮಿಗಳು,
ಶ್ರೀ ಕಾಮಾಕ್ಷೀ ಶಾರದಾ ಮಹಾಸಂಸ್ಥಾನಂ
ಶ್ರೀ ಘನಪುರೀ ಸಂಸ್ಥಾನಂ, ಶ್ರೀ ಕೋದಂಡಾಶ್ರಮ,
ಹೆಬ್ಬೂರು, ತುಮಕೂರು ಜಿಲ್ಲೆ

- ಇವರುಗಳ ಪಾದ ಪದ್ಮಗಳಲ್ಲಿ ಶಿರಸಾಷ್ಟಾಂಗ ನಮಸ್ಕಾರಗಳನ್ನು ಈ ಮೂಲಕ ಸಲ್ಲಿಸುತ್ತಿದ್ದೇನೆ.

ತದನಂತರ ಈ ಬೃಹದ್ಗ್ರಂಥವು ಹಸ್ತ ಪ್ರತಿಯಿಂದ ಮುದ್ರಿತ ಪ್ರತಿಗಳಾಗಿ ಭಕ್ತವೃಂದವನ್ನು ಸೇರಲು ಪೂರ್ಣಾನುಗ್ರಹವನ್ನು ನೀಡಿರುವ ಶ್ರೀ ಶೀಬಿ ನರಸಿಂಹ ದೇವರಿಗೂ ಮತ್ತು ತಿರುಮಲ ತಿರುಪತಿಯ ಶ್ರೀ ವೆಂಕಟೇಶ್ವರ ದೇವರಿಗೂ ಭಕ್ತಿಪೂರ್ವಕ ಶಿರಸಾಷ್ಟಾಂಗ ನಮನಗಳನ್ನು ಸಲ್ಲಿಸುತ್ತಿದ್ದೇನೆ. ಹಾಗೂ ತಿರುಮಲ ತಿರುಪತಿ ದೇವಸ್ಥಾನಂ ಆಡಳಿತವರ್ಗದವರು ನೀಡಿರುವ ಶ್ರೀ ವೆಂಕಟೇಶ್ವರ ದೇವರ ಅನುಗ್ರಹ ಮತ್ತು ಆರ್ಥಿಕ ಸಹಾಯಗಳಿಗೂ ಅಪಾರ ಹೃತ್ಪೂರ್ವಕ ನಮನಗಳನ್ನು ಅರ್ಪಿಸುತ್ತಿದ್ದೇನೆ.

ಈ ಗ್ರಂಥವನ್ನು ಅತ್ಯಂತ ಸುಂದರವಾಗಿ ಅತ್ಯಲ್ಪ ಕಾಲದಲ್ಲಿ ಮುದ್ರಣಮಾಡಿ ಹೊರತಂದಿರುವ ಶ್ರೀ ಕೆ. ಎನ್. ನರಸಿಂಗರಾಯರು ಮತ್ತು ಅವರ ಮಕ್ಕಳು ಶ್ರೀ ಕೆ. ಎನ್. ನಾಗರಾಜರು, ಸಾಯಿನಾಥ್ ಗ್ರಾಫಿಕ್ಸ್, ಬೆಂಗಳೂರು ರವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಈ ಮೂಲಕ ಅರ್ಪಿಸುತ್ತೇನೆ.

ಹಾಗೂ ಸುಂದರವಾಗಿಯೂ ಆಕರ್ಶಕವಾಗಿಯೂ ವಿನ್ಯಾಸ (ಡಿ.ಟಿ.ಪಿ.) ಮಾಡಿಕೊಟ್ಟಿರುವ ಶ್ರೀ ಅಶೋಕ್ ಕಾರ್ಣಿಕ್ ಮತ್ತು ಶ್ರೀ ಆರ್. ಶ್ರೀನಿವಾಸ್, ಶ್ರೀಶಾ ಗ್ರಾಫಿಕ್ಸ್, ಬೆಂಗಳೂರು ರವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ನಂತರ ಪಾರಮಾರ್ಥಿಕವಾಗಿ, ಪರಮ ಪವಿತ್ರವಾದ ಆತ್ಮಗಳನ್ನೊಳಗೊಂಡ ಭಗವದ್ಭಕ್ತರೇಣ್ಯರಿಗೆ ಈ ಕೃತಿಯನ್ನು ಅರ್ಪಿಸಿ ಸೇವೆ ಮಾಡುವ ಭಾಗ್ಯವನ್ನು ಕರುಣಿಸಿದ ಆ ಕರುಣಾಮಯ ಪರಮಾತ್ಮನನ್ನು ಎಷ್ಟು ಬಾರಿ ಭಾವಿಸಿದರೂ ಅಲ್ಪವೇ ಎಂದು ಅವನನ್ನು ಸ್ಮರಿಸುತ್ತಾ ಪರಮಾತ್ಮನ ಕರುಣೆಯು ಅನವರತ ಅವಿಚ್ಛಿನ್ನವಾಗಿ ಹರಿಯಲಿ ಎಂದು ಪ್ರಾರ್ಥಿಸುತ್ತಾ ಈ ಪೀಠಿಕೆಯನ್ನು ಇಲ್ಲಿಗೆ ಅರ್ಪಿಸಿ ಭಕ್ತವರೇಣ್ಯರು ಸಂಪುಟದಲ್ಲಿ ಪ್ರವೇಶಿಸಿ ಅಪಾರ ಆನಂದವನ್ನು ಪಡೆಯಲಿ ಎಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

08.04.97

ಈಶ್ವರ ಸಂವತ್ಸರ,
ಚೈತ್ರ ಶುದ್ಧ ಪಾಡ್ಯಮಿ ಯುಗಾದಿಯಂದು
ತುಮಕೂರು

ಇಂತು ಪರಮ ಪವಿತ್ರ
ಭಕ್ತವರೇಣ್ಯರ ಸೇವಾಕಾಂಕ್ಷಿ
**ಹೆಚ್. ಎನ್. ನರಸಿಂಹಮೂರ್ತಿ**

501. ನಾರಾಯಣ ನಾರಸಿಂಹಾಯ ನಮಃ

ಇಲ್ಲಿ ನರಸಿಂಹನೇ ಸಾಕ್ಷಾತ್ ನಾರಾಯಣನೆಂದು ಬ್ರಹ್ಮದೇವರು ಸ್ತುತಿಸುತ್ತಾರೆ. ನಾರಾಯಣ, ನರಸಿಂಹರು ಬೇರೆ ಬೇರೆಯಲ್ಲ. ನಾರಾಯಣನೇ ನರಸಿಂಹನ ಅವತಾರದಲ್ಲಿ ಕಂಬದಿಂದ ಬಂದು ಅವತಾರ ಕಾರ್ಯವಾದ ಹಿರಣ್ಯಕಶಿಪುವಿನ ಸಂಹಾರ ಮಾಡಿರುತ್ತಾನೆ ಎಂದು ಸ್ತೋತ್ರ ಮಾಡುತ್ತಾರೆ. ಸ್ತೋತ್ರ ಮಾಡಿದ ಸಂದರ್ಭವೇನೆಂದರೆ - ನರಸಿಂಹ ಸ್ವಾಮಿಯು ತಾನು ಕಂಬದಿಂದ ಉದ್ಭವಿಸಿ ಹಿರಣ್ಯಕಶಿಪುವನ್ನು ಬಹಳ ಉಗ್ರರೂಪದಲ್ಲಿ ಸಂಹರಿಸಿ, ತನ್ನ ಸಿಂಹದ ರೂಪಕ್ಕೆ ತಕ್ಕಂತೆ ಕರುಳಿನ ಮಾಲೆಯನ್ನು ಹಾಕಿಕೊಂಡು ರಕ್ತಪಾನಮಾಡಿ ವಿಕಾರ ರೀತಿಯಲ್ಲಿ ಮೈ ಎಲ್ಲ ರಕ್ತ ಹರಿಸಿಕೊಂಡು ಹೊಸಲಿನ ಮೇಲೆ ಕುಳಿತು ಹಿರಣ್ಯಕಶಿಪುವಿನ ದೇಹವನ್ನು ತನ್ನ ತೊಡೆಯ ಮೇಲೆ ಇರಿಸಿಕೊಂಡಿರುತ್ತಾನೆ. ಬಹಳ ಉಗ್ರರೂಪ, ಭಯಂಕರ ರೂಪ, ವಿಕಾರ ರೂಪ, ಕ್ರೋಧದ ರೂಪ, ಪ್ರಹ್ಲಾದ ಸ್ತೋತ್ರ ಮಾಡುತ್ತಾ ದಿಗ್ಭ್ರಮೆಯಿಂದ ಇದ್ದಾನೆ. ಬ್ರಹ್ಮ ದೇವರು ಲಕ್ಷ್ಮಿಯೊಡನೆ ಮುಂದೆ ನಿಂತಿದ್ದಾರೆ. ಸಕಲ ದೇವ ದೇವತೆಗಳು, ಯಕ್ಷ ಕಿನ್ನರ ಕಿಂಪುರುಷರು, ಇಂದ್ರ, ದಿಕ್ಪಾಲಕರು ಎಲ್ಲರೂ ವಿಸ್ಮಯದಿಂದ ನಿಂತಿದ್ದಾರೆ. ಮತ್ತು ಬ್ರಹ್ಮ ದೇವರು ಮುಂದೆ ಬಂದು ಶ್ರೀ ನರಸಿಂಹ ಸ್ವಾಮಿಯನ್ನು ಉಗ್ರರೂಪದಿಂದ ಶಾಂತ ರೂಪಕ್ಕೆ ಬರಲು ಪ್ರಾರ್ಥಿಸುತ್ತಿದ್ದಾರೆ. ಸಕಲ ಬ್ರಹ್ಮಾಂಡವೇ ನಡುಗುತ್ತಿದೆ ಎನ್ನುತ್ತಿದ್ದಾರೆ.

ಹೇ ನರಸಿಂಹನೇ, ನೀನು ಅನೇಕ ಕೆಲಸಗಳನ್ನು ಮಾಡಿರುತ್ತೀಯೆ. ಈಗ ನೀನು ಸಾಕ್ಷಾತ್ ನಾರಾಯಣ ಸ್ವರೂಪನೇ, ಸಿಂಹರೂಪನಾದರೂ ಈ ರೂಪದಲ್ಲಿ ಅನೇಕ ಭಾವನೆಗಳನ್ನು ಹೊಂದಿರುತ್ತೀಯೆ, ನಾರಾಯಣನೇ ಸ್ವಯಂ ನೀನು, ನೀನು ಬೇರೆ ಅಲ್ಲ - ನಾರಾಯಣನು ಬೇರೆ ಅಲ್ಲ. ಈ ಉಗ್ರರೂಪವನ್ನು ತ್ಯಜಿಸಿ ಶಾಂತರೂಪವನ್ನು ಹೊಂದು. ಯೋಗ, ಭೋಗದ ಸಿಂಹನಾಗು ಎಂದೆಲ್ಲ ಪ್ರಾರ್ಥಿಸುತ್ತಿದ್ದಾರೆ. ಈ ನಾಮವು ನಾರಾಯಣನೇ ನರಸಿಂಹ ಎಂದು ತೋರಿಸುತ್ತದೆ.

ಭಾವನೆಗಳು ಭಾವಿಸುವವರ ಮೇಲೆ ಅವಲಂಬಿಸಿರುತ್ತದೆ. ಸಾಕ್ಷಾತ್ ಬ್ರಹ್ಮ ದೇವರೇ ಹೇಳುತ್ತಿರುವುದರಿಂದ ಇವರಿಗಿಂತ ಬೇರೆ ಯಾರೂ ಉದಾತ್ತ ಭಾವನೆಗಳನ್ನು ಕೊಡಲಾರರು. ಬ್ರಹ್ಮ ದೇವರು ಸಾಮಾನ್ಯರಲ್ಲ - ಸಾಕ್ಷಾತ್ ಮಹಾವಿಷ್ಣುವಿನ ನಾಭೀಕಮಲದಲ್ಲಿ ಸ್ವಯಂಭೂತರಾದ ಮೊದಲಿನ ಸೃಷ್ಟಿ - ನಾರಾಯಣನ ಕಾಮನೆಯಲ್ಲಿ ಹೊರ ಬಂದ ಮೊಟ್ಟ ಮೊದಲಿಗರು - ಅದರಿಂದ ಅಗ್ರರು, ಮಹಾವಿಷ್ಣುವಿನ ಪುತ್ರರು, ಎಂದ ಮೇಲೆ ಸಾಮಾನ್ಯರಲ್ಲ. ಅವರು ಸ್ತುತಿಸಿರುವ ಈ ಸಹಸ್ರನಾಮವು ಸಾಮಾನ್ಯವಲ್ಲ.

502. ನಾರಾಯಣ ವೀರಸಿಂಹಾಯ ನಮಃ

ನರಸಿಂಹನನ್ನು ವೀರಸಿಂಹ ಎಂದಿದ್ದಾರೆ. ಶೂರನು, ಬಲಿಷ್ಠನು ಎನ್ನಬೇಕು, ಪ್ರಬಲವಾದ ವರವನ್ನು ಬ್ರಹ್ಮದೇವರಿಂದ ಪಡೆದ ಹಿರಣ್ಯಕಶಿಪುವನ್ನು ಸಂಹರಿಸಬೇಕಾದರೆ ಮಹಾವಿಷ್ಣುವಿನ ಅವತಾರವಾದ ನರಸಿಂಹಾವತಾರದಲ್ಲಿ ಬ್ರಹ್ಮರ ವರವನ್ನು ಪಾಲಿಸುವ ಮತ್ತು ಅದನ್ನು ಮುರಿಯದೇ ಸಂಹರಿಸುವ ಶಕ್ತಿ, ಯುಕ್ತಿ ಇರಲೇ ಬೇಕಲ್ಲವೇ? ಸಾಮಾನ್ಯ ಸಿಂಹದ ತಲೆಯಿರುವ ನರನ ದೇಹದ ಆಕಾರದಿಂದ ಬ್ರಹ್ಮ ದೇವರ ವರದ ಒಂದು ಅಂಶವನ್ನು ದಾಟಿದ್ದಾಯಿತು. ವೀರನೂ ಬಲಿಷ್ಠನೂ ಯುಕ್ತಿ ಯುಕ್ತನೂ ಆದ ನರಸಿಂಹನು ವೀರಸಿಂಹನಾಗಬೇಕಾಯಿತು. ನಾರಾಯಣನನ್ನು ವೀರಸಿಂಹನೆಂದು ಪೊಗಳಿದ್ದರಿಂದ ಉಗ್ರತೆಯು ಕೊಂಚ ಕಡಿಮೆಯಾಯಿತೇನೋ! ನಾರಾಯಣ ವೀರಸಿಂಹಾಯ ನಮೋನ್ನಮಃ.

*ನಮೋऽಸ್ತು ನಾರಾಯಣ ದಿವ್ಯಸಿಂಹ ನಮೋऽಸ್ತು ನಾರಾಯಣ ವ್ಯಾಘ್ರಸಿಂಹ।*
*ನಮೋऽಸ್ತು ನಾರಾಯಣ ಪುಚ್ಛಸಿಂಹ ನಮೋऽಸ್ತು ನಾರಾಯಣ ಪೂರ್ಣಸಿಂಹ।*
*॥82॥ (503-506)*

503. ನಾರಾಯಣ ದಿವ್ಯಸಿಂಹಾಯ ನಮಃ

ನಾರಾಯಣನೇ ದಿವ್ಯಸಿಂಹನಾಗಿದ್ದಾನೆ, ನರಸಿಂಹನೇ ಮೂಲ ನಾರಾಯಣನಾಗಿ ದಿವ್ಯಸಿಂಹನಾಗಿದ್ದಾನೆ. ಎರಡೂ ಅರ್ಥಗಳು ಸಮಂಜಸವೇ ಸರಿ.

ದಿವ್ಯ - ಎಂದರೆ ದೇವಲೋಕಕ್ಕೆ ಸೇರಿದ ವಸ್ತು, ಅತ್ಯಂತ ಸ್ವಾತಿಕಗುಣವುಳ್ಳದ್ದು, ಹೊಳೆಯುವಂತಹದು, ಆಕಾಶದಲ್ಲಿರುವಂತಹದು, ಆಕಾಶಗುಣವುಳ್ಳದ್ದು, ಆಕಾಶ ವರ್ಣದ್ದು ಎಂದರೆ ಬಣ್ಣವೇ ಇಲ್ಲದ್ದು.

ಇವೆಲ್ಲ ಗುಣಗಳನ್ನು ಹೊಂದಿರುವ ಸಿಂಹದ ತಲೆಯುಳ್ಳ ನರಸಿಂಹ ಸ್ವಾಮಿಯು ಸಾಕ್ಷಾತ್ ನಾರಾಯಣನೇ! ಮಹಾವಿಷ್ಣುವೇ. ಸರಿ, ನರಸಿಂಹ ಸ್ವಾಮಿಯು ಕಂಬದಿಂದ ಬಂದಾಗಿನ ದೃಶ್ಯ, ರೂಪವು ಇದರಲ್ಲಿ ಅಡಗಿದೆ. ಹಿರಣ್ಯಕಶಿಪುವಿನ ಸಂಹಾರದ ನಂತರ ಶಾಂತನಾದ ನರಸಿಂಹನ ವರ್ಣನೆ ಇಲ್ಲಿದೆ. ನರಸಿಂಹ ಸ್ವಾಮಿಯು ಅವತಾರ ಕಾರ್ಯ ಸಮಾಪ್ತಿ ಮಾಡಿದ ನಂತರ ವೈಕುಂಠಕ್ಕೆ ಹೋಗಿ ಲಕ್ಷ್ಮೀನರಸಿಂಹನಾಗಿ ವಿರಾಜಮಾನನಾದ ರೂಪ ಇಲ್ಲಿದೆ. ದೇವ, ದೇವತೆಗಳು ಆದಿಯಾಗಿ ಎಲ್ಲರೂ ಮಾಡಿದ ಸ್ತೋತ್ರದಿಂದ ಸಂತುಷ್ಟನಾದ ರೂಪ ಇಲ್ಲಿದೆ. ಭಕ್ತ ಪ್ರಹ್ಲಾದನನ್ನು ಪ್ರೀತಿಯಿಂದ ಅಕ್ಕರೆಯಿಂದ ನೋಡಿದ ರೂಪ ಇಲ್ಲಿದೆ. ಹೆದರಿದ ಕಂದ ಪ್ರಹ್ಲಾದನನ್ನು ಸಂತೈಸಿದ ರೂಪ ಇಲ್ಲಿದೆ. ಕಂಬದಿಂದ ಬಂದ ರೂಪ, ಅದರ ಉಗ್ರರೂಪ, ಉಗ್ರರೀತಿಯ

ತನ್ನ ತಂದೆಯ ಸಂಹಾರಗಳನ್ನು ನೋಡಿದ ನಂತರ ಕಂದ ಪ್ರಹ್ಲಾದನು ಭಯ ಭೀತನಾಗಿ ಹೆದರಿರಬಹುದು. ಅಂತಹವನನ್ನು ಸಂತೈಸಿದ ಸೌಮ್ಯ ಸಂತೋಷ ಮತ್ತು ತೃಪ್ತಿ ತೋರಿಸುವ ರೂಪ ಇಲ್ಲಿದೆ. ಇಂತಹ ನಾರಾಯಣ ದಿವ್ಯಸಿಂಹನನ್ನೇ ನಾವೂ ಸಹ ಸೇವಿಸೋಣ. ಭಕ್ತಿಯನ್ನುಕ್ಕಿಸುವ ಮತ್ತು ಪ್ರಸರಿಸುವ ದಿವ್ಯಸಿಂಹನನ್ನೇ ನೋಡೋಣ!

504. ನಾರಾಯಣ ವ್ಯಾಘ್ರಸಿಂಹಾಯ ನಮಃ

ವ್ಯಾಘ್ರ ಎಂದರೆ ಹುಲಿ, ಹುಲಿಯಷ್ಟು ಕ್ರೂರತೆ, ಕಾಠಿಣ್ಯವಿದೆ ಎಂದು ತೋರಿಸುತ್ತದೆ. ಸಿಂಹವು ವನಗಳ ಪ್ರಾಣಿಗಳ ರಾಜ, ಶ್ರೀಮದ್ಗಾಂಭೀರ್ಯವಿರುತ್ತದೆ, ಆದರೆ ಹಿರಣ್ಯಕಶಿಪುವಿನಂಥ ರಾಕ್ಷಸನನ್ನು ಸಂಹರಿಸಲು ಹುಲಿಯಂತಹ ಕ್ರೂರತೆ ಮತ್ತು ನಿಷ್ಕರುಣೆಯನ್ನು ತೋರಿಸಬೇಕಾಗಿತ್ತು. ಇದನ್ನು ಮಾಡಿದ್ದರಿಂದ ವ್ಯಾಘ್ರಸಿಂಹ ಎಂದು ಕರೆದಿರುತ್ತಾರೆ.

ನರಸಿಂಹನು ಸಿಂಹದ ಮತ್ತು ವ್ಯಾಘ್ರದ ಗುಣಗಳನ್ನು ಹೊಂದಿದ ನಾರಾಯಣನ ಅವತಾರ, ಇವೆಲ್ಲವನ್ನೂ ತೋರಿಸಲು ಮತ್ತು ಪ್ರಕಟಿಸಲು ನಾರಾಯಣನು ವ್ಯಾಘ್ರಸಿಂಹನಾದನೆಂದು ಬ್ರಹ್ಮದೇವರು ಸ್ತೋತ್ರ ಮಾಡಿರುತ್ತಾರೆ.

505. ನಾರಾಯಣ ಪುಚ್ಛಸಿಂಹಾಯ ನಮಃ

ಪುಚ್ಛ - ಎಂದರೆ ಬಾಲ; ತುದಿ ಎಂದರ್ಥ.

ಎಲ್ಲ ಪ್ರಾಣಿಗಳಿಗೂ ಬಾಲವೇ ಉತ್ತಮವಾದ ಮತ್ತು ಶೋಭಿಸುವ ಭಾಗ. ಅನೇಕ ಪ್ರಾಣಿಗಳು (ಬಾಲವಿರುವವು) ಅದರಿಂದ ಮತ್ತೂ ಶೋಭಿಸುತ್ತವೆ. ಸಿಂಹವು ಮೃಗಗಳ ರಾಜ. ಸಿಂಹಕ್ಕೆ ಬಾಲವಿದೆ. ಅದು ಬಹಳ ಶ್ರೇಷ್ಠತೆಯನ್ನು ಕೊಡುತ್ತದೆ. ಇದು ಪರಮಾತ್ಮನ ಸೃಷ್ಟಿ ವಿಶೇಷ. ಸಿಂಹದ ತಲೆಯನ್ನು ಮಾತ್ರವಿರುವ ನರಸಿಂಹನಿಗೆ ಆ ಸಿಂಹದ ತಲೆಯಲ್ಲಿಯೇ ಸಿಂಹದ ಸಕಲ ಗುಣಗಳು, ಗಂಭೀರತೆ, ಶೋಭೆಗಳು ಅಡಕವಾಗಿವೆ. ಈ ಕಾರಣದಿಂದ ನರಸಿಂಹನ ಗಂಭೀರತೆ ಹೆಚ್ಚಿದೆ. ಅದರಿಂದ ನಾರಾಯಣ ಪುಚ್ಛಸಿಂಹ ಎಂದು ಕರೆದಿದೆ.

506. ನಾರಾಯಣ ಪೂರ್ಣಸಿಂಹಾಯ ನಮಃ

ಪೂರ್ಣಸಿಂಹ - ಸಂಪೂರ್ಣನಾಗಿ ಸಿಂಹದ ಲಕ್ಷಣಗಳನ್ನು ಮತ್ತು ಸ್ವಭಾವಗಳನ್ನು ಹೊಂದಿದವನು - ನರಸಿಂಹಸ್ವಾಮಿ. ನಾರಾಯಣ ಸ್ವರೂಪಿ ನರಸಿಂಪಸ್ವಾಮಿಯು ಎಲ್ಲ ರೀತಿಯಲ್ಲಿಯೂ ಪರಿಪೂರ್ಣನಾಗಿದ್ದಾನೆ. ನರಸಿಂಹನನ್ನು ಪೂಜಿಸಿದರೆ ನಾರಾಯಣನನ್ನು ಪೂಜಿಸಿದಂತಾಗುತ್ತದೆ. ಯಾವ

ದೇವನನ್ನು ಪೂಜಿಸಿದರೂ ನಾರಾಯಣನಿಗೆ ಸೇರುತ್ತದೆ. "ಸರ್ವ ದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ", ಎಂದು ಶಾಸ್ತ್ರದ ನುಡಿಯಿದೆ. ಇನ್ನೂ ಮುಂದೆ ಯೋಚಿಸಿದರೆ ಎಲ್ಲವೂ "ಓಂ" ಎಂಬಲ್ಲಿ ಐಕ್ಯವಾಗುತ್ತದೆ. ಪರಾತ್ಪರ ಪರಬ್ರಹ್ಮನು ಒಂದೇ, ಒಬ್ಬನೇ. ಪೂರ್ಣನೂ ಅವನೇ. ಯಾವ ರೀತಿಯಲ್ಲಿ ನೋಡಿದರೂ ಯಾವ ಭಾಗದಲ್ಲಿ ನೋಡಿದರೂ, ಹೇಗೆ ನೋಡಿದರೂ ಆ ಅಂಶವೂ ಪೂರ್ಣವೇ ಆಗಿರುತ್ತದೆ " ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದುಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೇ ।। ಓಂ ಶಾಂತಿಃ ಶಾಂತಿಃ ಶಾಂತಿಃ ।।"

ನರಸಿಂಹನ ಶರೀರದಲ್ಲಿ ಸಿಂಹದ ತಲೆ ಮಾತ್ರವೇ ಇದ್ದರೂ ಸಿಂಹವು ಪೂರ್ಣ ಸ್ವರೂಪದಲ್ಲಿರುತ್ತದೆ. ಹಾಗೆಯೇ ನರನ ದೇಹಮಾತ್ರವಿದ್ದರೂ ನರನ ಪೂರ್ಣ ಸ್ವರೂಪವು ಅಲ್ಲಿರುತ್ತದೆ. ಎರಡೂ ಸೇರಿದರೆ - ಅಂದರೆ - ಸಿಂಹದ್ದು, ನರನದು - ಅದೂ ಸಹ ಪೂರ್ಣರೂಪದಲ್ಲಿ ಏಕರೂಪದಲ್ಲಿ ಪೂರ್ಣವಾಗಿರುತ್ತದೆ, ಅಂತಹ ನಾರಾಯಣ ಪೂರ್ಣಸಿಂಹನಿಗೆ ನಮಸ್ಕಾರಗಳು.

*ನಮೋಽಸ್ತು ನಾರಾಯಣ ರೌದ್ರಸಿಂಹ ನಮೋಽಸ್ತು ನಾರಾಯಣ ದೈತ್ಯಸಿಂಹ।*
*ನಮೋ ನಮೋ ಭೀಷಣಭದ್ರಸಿಂಹ ನಮೋ ನಮೋ ವಿಹ್ವಲ ನೇತ್ರಸಿಂಹ।।83।।*
*(507-510)*

**507.** ನಾರಾಯಣ ರೌದ್ರಸಿಂಹಾಯ ನಮಃ

ರೌದ್ರಸಿಂಹ - ರುದ್ರದ ಭಾವ ರೌದ್ರ,

ರುದ್ - ಎಂದರೆ ಅಳುವುದು, ಅಳುವವನು ಯಾರೋ ಅವನು ರುದ್ರ.

ಬ್ರಹ್ಮದೇವನು ತಾನು ಮಾಡಿದ ಸೃಷ್ಟಿಯಿಂದ ಎಂದರೆ ಸನಕ, ಸನಂದನರಾದ ನಾಲ್ವರು ಕುಮಾರರಿಂದ ಪ್ರಜಾಭಿವೃದ್ಧಿಯಾಗದ ಕಾರಣ ಕೋಪಗೊಂಡನು. ಆಗ ಬ್ರಹ್ಮನ ಹಣೆಯಿಂದ ರುದ್ರದೇವನು ಬಂದನು. ಬಂದ ಕೂಡಲೆ ತನಗೆ ಸ್ಥಾನವನ್ನು ಕಲ್ಪಿಸಬೇಕೆಂದು ಮತ್ತು ತನ್ನ ಕಾರ್ಯವನ್ನೂ ನಿರೂಪಿಸಬೇಕೆಂದು ಕೋಪಾವೇಶದಿಂದ ಕೇಳಿದ್ದರಿಂದ "ರುದ್ರ"ನೆಂದು ಹೆಸರಾಯಿತು, ರುದ್ರನ ಕೋಪದ ಭಾವಕ್ಕೆ ರೌದ್ರ ಎಂದು ಹೆಸರಾಯಿತು. ನರಸಿಂಹನು ಹಿರಣ್ಯಕಶಿಪುವನ್ನು ದ್ವಂದ್ವ ಯುದ್ಧಮಾಡಿ ಸಂಹರಿಸಬೇಕಾದಾಗ ಅಪಾರ ಕೋಪವು ಪ್ರಳಯಕಾಲದ ರುದ್ರನ ಕೋಪದಂತೆ ಹರಿಯುತ್ತಿತ್ತು, ಉಕ್ಕುತ್ತಿತ್ತು. ಈ ಕಾರಣದಿಂದ ಬ್ರಹ್ಮ ದೇವರು "ರೌದ್ರಸಿಂಹ" ಎಂದು ಹೊಗಳಿದ್ದಾರೆ. ನರಸಿಂಹನ ಪ್ರತಾಪವನ್ನು ಹೊಗಳಿದರೆ ಬೇಗ ಶಾಂತವಾಗಬಹುದೆಂಬ ಭಾವನೆ ಬ್ರಹ್ಮದೇವರ ಮನದಲ್ಲಿ ಇತ್ತೋ ಏನೋ!

ಯಾರು ಬಲ್ಲರು! ಈ ರೀತಿ ತಿಳಿದು ಬ್ರಹ್ಮ ದೇವರು ನಾರಾಯಣ ರೌದ್ರಸಿಂಹಾಯ ನಮಃ ಎಂದು ಸಂಬೋಧಿಸಿದರು.

508. ನಾರಾಯಣ ದೈತ್ಯಸಿಂಹಾಯ ನಮಃ

ಹಿರಣ್ಯಕಶಿಪುವು ಮಹಾ ಪರಾಕ್ರಮಿ ದೈತ್ಯ, ದಿತಿ ದೇವಿಯ ಮಗ ದೈತ್ಯ. ಇವನನ್ನು ಸಂಹರಿಸಬೇಕಾದರೆ ಅಷ್ಟೇ ಪರಾಕ್ರಮವಿರಬೇಕು, ಏಕೆ ಇನ್ನೂ ಹೆಚ್ಚಿನ ಪರಾಕ್ರಮವಿರಬೇಕು. ಸಿಂಹವು ದೈತ್ಯ ಶಕ್ತಿಗಿಂತ ಮಿತಮೀರಿದ್ದರಿಂದ ಮತ್ತು ಸಿಂಹಸ್ವರೂಪನಾಗಿ ದೈತ್ಯನನ್ನು ಸಂಹರಿಸಿದ್ದರಿಂದ ''ದೈತ್ಯ ಸಿಂಹಾಯ ನಮಃ'' ಎಂದಾಯಿತು. ನಾರಾಯಣನ ಅವತಾರವೇ ಆದ್ದರಿಂದ ನಾರಾಯಣ - ದೈತ್ಯಸಿಂಹಾಯ ನಮಃ ಎಂದಾಯಿತು.

509. ನಾರಾಯಣ ಭೀಷಣ ಭದ್ರಸಿಂಹಾಯ ನಮಃ

ಭೀಷಣ - ಭಯಂಕರವಾದ್ದು,

ಭದ್ರ - ಎಂದರೆ ಸ್ಥಿರವಾದದ್ದು, ಶುಭವನ್ನು ಮಾಡುವಂತಹದು,

ಭಯಂಕರವಾದ ಕೆಲಸವನ್ನು ಮಾಡಿದರೂ ಲೋಕ ಕಲ್ಯಾಣಕ್ಕಾಗಿ ಹಿರಣ್ಯಕಶಿಪುವಿನ ಸಂಹಾರವಾದ್ದರಿಂದ ಶುಭವೇ ಮೂಲ ಕಾರಣವಾಯಿತು. ನರಸಿಂಹನು ಭೀಷಣ ಭದ್ರಸಿಂಹನಾದನು. ಅಂದರೆ ಯಾವ ಕಾರ್ಯವು ಪ್ರಾರಂಭದಲ್ಲಿ ಭಯಂಕರವಾಗಿರುವುದೊ ಅದು ಪರಿಣಾಮದಲ್ಲಿ ಸತ್ಫಲವನ್ನೇ ಕೊಡುತ್ತದೆ. ಅಂದರೆ ಜೀವವು ದೇಹವನ್ನು ತ್ಯಾಗ ಮಾಡುವುದು ಇದಕ್ಕೆ ಸಮಂಜಸವಾದ ಉದಾಹರಣೆ. ಯಾವಾಗ ಆತ್ಮವು ತಾನಿರುವ ದೇಹದಿಂದ ಬಿಡುಗಡೆಯಾಗಬೇಕೆಂದೆನಿಸಿ ದೇಹವನ್ನು ತ್ಯಾಗಮಾಡುವುದೋ, ಆಗ ಆತ್ಮಕ್ಕೆ ಸಂತೋಷವೇ ಆಗುತ್ತದೆ. ಏಕೆಂದರೆ ಅದು ಸಂಸಾರ ಸಾಗರದಿಂದ ಬಿಡುಗಡೆ ಹೊಂದುತ್ತದೆ. ಆದರೆ ಇತರ ಸಹ ಜೀವಿಗಳಿಗೆ ಈ ಆತ್ಮವು ಹೋಯಿತಲ್ಲ ಅದರ ಸತ್ಸಂಗವು ನಿಂತು ಹೋಯಿತಲ್ಲ ಎಂದು ದುಃಖವಾಗುತ್ತದೆ.

510. ವಿಹ್ವಲ ನೇತ್ರಸಿಂಹಾಯ ನಮಃ

ವಿಹ್ವಲ - ಎಂದರೆ ವ್ಯಾಕುಲ, ದುಃಖಿತ, ತೊಂದರೆಗೀಡಾದ ಎಂದು ಅರ್ಥಗಳು,

ವಿಹ್ವಲನೇತ್ರ - ವ್ಯಾಕುಲವಾದ ಕಣ್ಣುಗಳು, ಇರುವ ಸಿಂಹನು,

ಪರಮಾತ್ಮನು ವ್ಯಾಕುಲವಾಗುವುದು ಯಾವಾಗ? ಸಾಧ್ಯವೇ.

ತನ್ನದೇ ಆದ ಅಂಶ ಸ್ವರೂಪವಾದ ಆತ್ಮಗಳು ಸಂಸಾರ ಬಂಧನದಲ್ಲಿ ಸಿಲುಕಿ, ದಾರಿಯನ್ನೇ ಕಾಣದೇ ಇರುವಾಗಲೂ ಸಹ ತನ್ನನ್ನು ಸೇರಲು ಪ್ರಯತ್ನಿಸುವುದಿಲ್ಲವಲ್ಲ ಎಂದು ಅವನಿಗೆ ವಿಹ್ವಲ.

ಮೇಲಿನ ಶ್ರೇಣಿಗೆ ಬಂದರೂ ಸಹ ಮತ್ತೆ ಇನ್ನೂ ಮೇಲೆ ಹೋಗಲು ಪರಮಾತ್ಮನನ್ನು ಸೇರಲು ಯತ್ನಿಸದೆ ಮತ್ತೆ ಮತ್ತೆ ಮಾಯೆಯ ಜಾಲದಲ್ಲಿ ಸಿಕ್ಕಿಹಾಕಿಕೊಳ್ಳುತ್ತಿವೆಯಲ್ಲಾ ಎಂದು ಅವನಿಗೆ ವಿಹ್ವಲ.

ಪೂಜೆ, ಭಜನೆ, ಧ್ಯಾನ, ಜಪಗಳೆಂಬ ಸಾಧನೆಗಳು, ಕ್ಷಿಪ್ರ ಪ್ರಸಾದ ಕೊಡುವ ಶಿವ, ಲಲಿತಾದೇವಿ ಇವರುಗಳೇ ಸಿಕ್ಕುವವರಿದ್ದರೂ ಈ ಅವಕಾಶಗಳ ಸದುಪಯೋಗಪಡೆಯುತ್ತಿಲ್ಲವಲ್ಲಾ ಎಂದು ಅವನಿಗೆ ವಿಹ್ವಲ.

ಸಾಧುಗಳು, ಸಜ್ಜನರು, ಸಂನ್ಯಾಸಿಗಳು, ಸತ್ಪುರುಷರು - ಇವರುಗಳು ಸಿಕ್ಕಿದರೂ ಸದ್ಭಾವನೆಯು ಜೀವಿಗಳಲ್ಲಿ ಮೂಡುವುದಿಲ್ಲವಲ್ಲಾ ಎಂದು ಅವನಿಗೆ ವಿಹ್ವಲ.

ಈ ರೀತಿ ಸಕಲ ಜೀವಿಗಳಿಗೂ ಏಕರೂಪವಾಗಿ ನೋಡುತ್ತಿರುವ ಪರಮಾತ್ಮನನ್ನು ಗ್ರಹಿಸದೆ ನಾವು ಸಂಸಾರ ಬಂಧನದಲ್ಲಿ ಮುಳುಗಿಹೋಗಿದ್ದೇವೆ. ಸನ್ಮಾರ್ಗವನ್ನು ಮತ್ತು ನಮ್ಮ ಉದ್ಧಾರದ ಮಾರ್ಗವನ್ನು ತಿಳಿಯುವುದು ಹಾಗಿರಲಿ, ತಿಳಿದರೂ ಸಹ ಸಾಧಿಸಲು ಉತ್ಸುಕರಾಗಿಲ್ಲ. ಉತ್ಸುಕರಾದರೂ ಸಹ ಈ ಚಂಚಲ ಮನಸ್ಸಿನಿಂದಲೂ ಅದನ್ನು ತಡೆಯಲು ಸಾಧ್ಯವಿಲ್ಲದ ಬುದ್ಧಿಯಿಂದಲೂ ವಂಚಿತರಾಗುತ್ತಿದ್ದೇವೆ. ವಿವೇಕ ಬುದ್ಧಿ ನಮ್ಮಲ್ಲಿದ್ದರೂ ಕೆಲಸ ಮಾಡದಾಗಿದೆ. ಇದಕ್ಕಾಗಿಯೇ ಪರಮಾತ್ಮನು ''ವಿಹ್ವಲ ನೇತ್ರದಿಂದ'' ನೋಡುತ್ತಿದ್ದಾನೆ.

*ನಮೋ ನಮೋ ಭೂಹಿತಭೂತಸಿಂಹ ನಮೋ ನಮೋ ನಿರ್ಮಲಚಿತ್ತಸಿಂಹ।*
*ನಮೋ ನಮೋ ನಿರ್ಜಿತಕಾಲಸಿಂಹ ನಮೋ ನಮಃ ಕಲ್ಪಿತಕಲ್ಪಸಿಂಹ ॥84॥*
*(511-514)*

**511. ಭೂಹಿತಭೂತಸಿಂಹಾಯ ನಮಃ**

ಭೂ - ಹಿತ - ಭೂತ - ಸಿಂಹ,

ಭೂದೇವಿಗೆ ಸದಾ ಹಿತವನ್ನುಂಟುಮಾಡುವವನು, ಸಕಲ ಭೂತಗಳಿಗೂ ಸಕಲ ಜೀವಕೋಟಿಗೂ ಸಿಂಹ - ರಾಜಪ್ರಾಯದಂತಿರುವವನು, ಯಾರೋ ಅವನು - ಶ್ರೀ ಲಕ್ಷ್ಮೀದೇವಿ ಭೂದೇವಿ ಸಮೇತ ಶ್ರೀ ನರಸಿಂಹಸ್ವಾಮಿಯು. ಪರಮಾತ್ಮನು ತಾನು ಸೃಷ್ಟಿಸಿದ ಸಕಲ ಭೂಮಂಡಲಕ್ಕೂ ಹಿತವನ್ನು ಶುಭವನ್ನುಂಟುಮಾಡುವವನು, ಅವನು ಯಾವ ರೀತಿಯಲ್ಲಿಯೂ ಪಕ್ಷಪಾತ ಮಾಡುವುದಿಲ್ಲ. ಪಕ್ಷಪಾತ ಬರುವುದೆಲ್ಲ ಆತ್ಮನು ಧರಿಸಿರುವ ದೇಹದಲ್ಲಿ ಮತ್ತು ಆತ್ಮಕ್ಕೆ ಅಂಟಿ ಬಂದಿರುವ ಅನೇಕ ಜನ್ಮಗಳ ಸಂಸ್ಕಾರ, ಪ್ರಾರಬ್ಧ, ಸಂಚಿತ ಮತ್ತು ಆಗಮ ಕರ್ಮಗಳಿಂದ ಮತ್ತು ಮಾಯೆಯಲ್ಲಿ ಮುಳುಗಿ

ಸಂಸಾರ ಸಾಗರದಲ್ಲಿ ತೇಲುವುದರಿಂದ ಮಾತ್ರ. ಮಾಯಾ ಪಾಶದಲ್ಲಿ ಸಿಕ್ಕಿಕೊಂಡು ತೊಳಲುವುದು ಎಲ್ಲ ಪರಮಾತ್ಮನ ಸಂಕಲ್ಪದಂತೆ. ಅವನ ಸಂಕಲ್ಪದಿಂದಲೇ ನಾವು ಹೊರಬರುತ್ತೇವೆ.

ಈ ರೀತಿ ತನ್ನ ಅಪಾರ ಕರುಣೆಯ ಮಾತ್ರದಿಂದಲೇ ಸಕಲ ಜೀವಿಗಳಿಗೂ ಮುಂದೆ ಕಾಲಚಕ್ರದಲ್ಲಿ ಸಿಕ್ಕಿ ಮುಂದೆ ಮುಂದೆ ಹೋಗಲು ಪರಿಸರವನ್ನು ಕಲ್ಪಿಸುತ್ತಿದ್ದಾನೆ, ಕಲ್ಪಿಸುತ್ತಾನೆ ಮತ್ತು ಕಲ್ಪಿಸಿದ್ದಾನೆ. ಆದರೆ ಇವುಗಳ ಪರಿವೆಯೇ ಇಲ್ಲದೆ ನಾವು ಜೀವಿಸುತ್ತಿದ್ದೇವೆ.

ಭೂಮಿಯ ಹಿತಕ್ಕಾಗಿ ಪಂಚಭೂತಗಳಾದ ಪೃಥ್ವಿ, ಅಪಃ, ತೇಜಸ್ಸು, ವಾಯು, ಆಕಾಶಗಳನ್ನು ನಿರೂಪಿಸಿದ್ದಾನೆ. ತೇಜಸ್ಸಿಗಾಗಿ ಸೂರ್ಯ ಚಂದ್ರರನ್ನು ನಿರಂತರ ಇರುವಂತೆ ನಿರೂಪಿಸಿದ್ದಾನೆ. ಸಕಲವೂ ವ್ಯವಸ್ಥಿತ ರೀತಿಯಲ್ಲಿ ನಿರಂತರ ನಡೆಯಲು ಕಾಲದೇವನನ್ನು ಕಾಲಮಾನವಾಗಿ ನಿಲ್ಲಿಸಿದ್ದಾನೆ. ಸರ್ವ ಪ್ರಾಣಿಗಳಿಗೂ ಮುಂದೆ ಮುಂದೆ ಉನ್ನತಭಾವಕ್ಕೆ ಬರಲು ಜೀವಿಗಳನ್ನು ದೇಹಗಳನ್ನು ಅವುಗಳ ಜನ್ಮ - ಜೀವನ - ಮರಣಗಳನ್ನು ವ್ಯವಸ್ಥಿಸಿದ್ದಾನೆ. ಎಲ್ಲ ಜೀವಿಗಳಿಗೂ ಸಮಾನ ಅವಕಾಶದಲ್ಲಿ ಬೆಳೆಯುವಂತೆ ಜನ್ಮ - ಮೃತ್ಯುಗಳನ್ನು ಪಕ್ಷಪಾತವಿಲ್ಲದೆ ನಡೆಯುವಂತೆ ಮಾಡಿದ್ದಾನೆ. ಇಷ್ಟೊಂದು ಮಾಡಿದವನು ಸಿಂಹ ಸ್ವರೂಪನೇ ಸರಿ. ಜಗನ್ನಾಟಕ ಸೂತ್ರಧಾರಿ. ಭೂಹಿತ ಭೂತಸಿಂಹ ಎಂಬ ನಾಮದಲ್ಲಿ ಎಲ್ಲವೂ ಅಡಗಿದೆ.

**512.** ನಿರ್ಮಲಚಿತ್ತಸಿಂಹಾಯ ನಮಃ

ಪರಮಾತ್ಮನ ಮನಸ್ಸು (ಚಿತ್ತವು) ಮಲಿನವಿಲ್ಲದ್ದು ಅಂದರೆ ಕೊಳೆಯಿಲ್ಲದ್ದು. ಯಾವುದೇ ರೀತಿಯ ಕಳಂಕವಿಲ್ಲದ್ದು. ಸದಾ ಶುದ್ಧ ಸತ್ವನು, ಶುದ್ಧ ಚಿತ್ತನು ತಾನು ಸೃಷ್ಟಿಸಿದ ಪ್ರಕೃತಿ, ಪುರುಷ, ಮಾಯೆಯ ಪ್ರಭಾವಕ್ಕೆ ಒಳಪಡದೇ ಇರುವುದರಿಂದ ಅವನು ಎಲ್ಲಕ್ಕೂ ಅತೀತನು, ಯಾರಿಂದಲೂ ತಿಳಿಯಲ್ಪಡದೇ ಇರುವವನು, ಗುಣಾತೀತನು, ರೂಪಾತೀತನು.

ನಿರ್ಮಲಚಿತ್ತಸಿಂಹನು - ಪರಬ್ರಹ್ಮ - ಓಂಕಾರ ರೂಪನು, ನೇತಿ, ನೇತಿ ಎಂದು ಮನಬುದ್ಧಿಗಳಿಗೆ ಗೋಚರವಾಗದವನು.

ಇದೇ ರೀತಿ ನಮ್ಮಲ್ಲಿರುವ ಆತ್ಮನು ಸಹ ನಿರ್ಮಲಚಿತ್ತ ಸಿಂಹನೇ. ಇದೂ ಸಹ ಪರಮಾತ್ಮನಿಂದ ಹೊರಬಂದುದರಿಂದ ಸಕಲ ಗುಣಗಳನ್ನು ಹೊಂದಿರುತ್ತದೆ. ವ್ಯತ್ಯಾಸವೆಂದರೆ ಪರಮಾತ್ಮನು ಯಾವುದಕ್ಕೂ ಒಳಪಡುವುದಿಲ್ಲ. ಆತ್ಮನು ಮಾಯೆಯ ಒಳಗಾಗಿ ತನ್ನ ಸ್ವಂತಭಾವವು ಕಾಣಿಸದಂತೆ ಮುಚ್ಚಿಹೋಗಿರುತ್ತಾನೆ. ನಾನು ನಾನು ಎಂಬ ಅಹಂಭಾವದಲ್ಲಿ ಮುಚ್ಚಿಹೋಗಿರುತ್ತಾನೆ. ಆತ್ಮನನ್ನು ಈ ಸ್ಥಿತಿಯಿಂದ ಹೊರ ಬರಿಸಬಹುದು.

ನಾನು ಎಂಬ ಅಹಂಭಾವವನ್ನು ಏನೆಂದು ತಿಳಿಯುವುದರಿಂದ ಆತ್ಮದ ಬಿಡುಗಡೆ ಸಾಧ್ಯ.

**513. ನಿರ್ಜಿತಕಾಲಸಿಂಹಾಯ ನಮಃ**

ಪರಮಾತ್ಮನನ್ನು (ಜಿತ) ಗೆಲ್ಲುವವರು ಯಾರೂ ಇಲ್ಲ, ಕಾಲವೇ ಸಕಲಕ್ಕೂ ಮಾನಸ್ಥಾನ. ಕಾಲವೇ ಸಿಂಹ ಸ್ವರೂಪವಾಗುತ್ತದೆ. ಪರಬ್ರಹ್ಮವೇ ಸರ್ವೋಚ್ಚವಾದುದು. ನರಸಿಂಹ ಸ್ತುತಿಯಾದ್ದರಿಂದ ಸಿಂಹನಾಮವನ್ನು ಹೇಳಲಾಗಿದೆ.

ನಿರ್ಜಿತ - ಕಾಲ - ಸಿಂಹಾಯ ನಮಃ ಎಂದು ಹೇಳಿದೆ -

ಅವನಿಂದ ಸಾಧ್ಯವಾಗದುದು ಯಾವುದೂ ಇಲ್ಲ. ಅವನ ಪ್ರತ್ಯಕ್ಷ, ಪರೋಕ್ಷ ಸಂಕಲ್ಪವೇ ಮುಖ್ಯ. ಎಲ್ಲವೂ ಅದರಂತೆ ನಡೆಯುತ್ತದೆ. ಚಾಚೂ ತಪ್ಪುವುದಿಲ್ಲ.

**514. ಕಲ್ಪಿತಕಲ್ಪಸಿಂಹಾಯ ನಮಃ**

ಕಲ್ಪಗಳನ್ನು ಕಲ್ಪಿಸುವವನು. ಕಲ್ಪ ಎಂದರೆ ಬ್ರಹ್ಮನ ಒಂದು ದಿನ (ಹಗಲು-ರಾತ್ರಿ) ಇದು ನಿರಂತರ ನಡೆಯುತ್ತಲೇ ಇರುತ್ತದೆ.

ಕಲ್ಪದ ಕಾಲಮಾನವು ಬಹಳ ಉದ್ದವಾದುದು, ಅದು ನಮ್ಮ ಕಲ್ಪನೆಗೆ ಮೀರಿದುದು. ಇಷ್ಟೊಂದು ಉದ್ದ ಎಂಬುದನ್ನೂ ಊಹಿಸಲೂ ಸಾಧ್ಯವಿಲ್ಲ. ಅದರ ಉದ್ದವನ್ನು ತಿಳಿದೂ ನಾವು ಮಾಡುವುದಾದರೇನು! ಸುಮ್ಮನೆ ಶಕ್ತಿ ಮತ್ತು ಕಲ್ಪನೆ ವ್ಯರ್ಥ.

ಇಷ್ಟು ದೊಡ್ಡ ವಿಶ್ವ - ಬ್ರಹ್ಮಾಂಡವನ್ನು ಸೃಷ್ಟಿಸಿರುವವನಿಗೆ ಮತ್ತು ಅದನ್ನು ನಡೆಸುತ್ತಿರುವ ಸೂತ್ರಧಾರಿ ಪರಮಾತ್ಮನಿಗೆ ಸಾಧ್ಯವಾಗದುದು ಏನೂ ಇಲ್ಲ. ಇದೆಲ್ಲ ವಿವೇಚಿಸುತ್ತಿರುವಾಗ ಈ ಬ್ರಹ್ಮಾಂಡದಲ್ಲಿ ಅನೇಕ ಶತಕೋಟಿ ಜೀವಿಗಳಲ್ಲಿ ನಮ್ಮ ಒಂದು ಜೀವ - ನಮ್ಮ ಆಯಸ್ಸು - ಗಣನೆಗೇ ಸಿಕ್ಕುವುದಿಲ್ಲ - ಈ ನಮ್ಮ ಪರಿಧಿಯಲ್ಲಿ ಸಾಧಿಸುವುದಾದರೂ ಏನು - ವೈಷಮ್ಯ, ದ್ವೇಷ, ಬದ್ಧ ದ್ವೇಷ - ಅತಿ ಅಪರೂಪವಾದ ಶತ್ರುತ್ವ, ಇತ್ಯಾದಿ.

ಹಾಗೆಯೇ ವಿರೋಧದಲ್ಲಿ - ಪರಮಾತ್ಮನ ಅಪಾರ ಕರುಣೆ, ಭಕ್ತಿ, ಜ್ಞಾನ, ವೈರಾಗ್ಯ - ಪುನರಾವೃತ್ತಿ ರಹಿತ ಸ್ಥಾನಕ್ಕಾಗಿ ಚಿಂತನೆ, ಪರಮಾತ್ಮನ ಸಾಯುಜ್ಯ, ಸಾಲೋಕ್ಯ, ಸಾಮೀಪ್ಯ, ಸಾಲೋಕ್ಯ ಇತ್ಯಾದಿ.

ಸಾಧಿಸಬೇಕಾದ್ದು ಎರಡನೆಯ ಶ್ರೇಣಿ.

ಎರಡಕ್ಕೂ ಜೀವನದಲ್ಲಿ ಅವಕಾಶವಿದೆ. ಬೇಕಾದ್ದನ್ನು ನಾವು ಮಾಡಬಹುದು. ಆದರೆ ಯಾವುದಕ್ಕೂ ಅವನ ಸಂಕಲ್ಪಬೇಕು, ಬೇಕೇ ಬೇಕು.

*ನಮೋ ನಮಃ ಕಾಮದ ಕಾಮಸಿಂಹ ನಮೋ ನಮಸ್ತೇ ಭುವನೈಕಸಿಂಹ ।
ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ
॥85॥ (515-517)*

**515. ಕಾಮದಾಯ ನಮಃ**

ಕಾಮ - ಕಾಮ, ಅಂದರೆ ಆಸೆಯನ್ನು, ದ - ಕೊಡುವವನು ಯಾರೋ ಅವನು - ಪರಮಾತ್ಮನು.

ಇಚ್ಛಿಸಿದ ವಸ್ತುಗಳನ್ನು, ಸಚರಾಚರ ವಸ್ತುಗಳನ್ನು, ಜೀವಿಗಳ ಸಂಯೋಗ ವಿಯೋಗಗಳನ್ನು ಕೊಡುವವನು ಪರಮಾತ್ಮನಲ್ಲದೇ ಬೇರೆ ಇಲ್ಲ. ಬೇರೆಯವರು ಕೊಟ್ಟರೂ ಅದು ಹೃತ್ಪೂರ್ವಕವಾಗಿ ಇರುವುದಿಲ್ಲ. ತೋರಿಕೆಗಾಗಿ ಇರಬಹುದು ಅಥವಾ ಸಮಾಜಕ್ಕೆ ಹೆದರಿ ಇರಬಹುದು ಅಥವಾ ಇನ್ನು ಯಾವುದಾದರೂ ಕಾರಣಕ್ಕೆ ಇರಬಹುದು.

ಆದರೆ ಪರಮಾತ್ಮನಲ್ಲಿ ಹಾಗೆ ಇಲ್ಲ. ಅದರಲ್ಲಿ ಯಾರ ಮತ್ತು ಯಾವ ರೀತಿಯ ಪಕ್ಷಪಾತವೇ ಇಲ್ಲ. ಪರಮಾತ್ಮನಿಗೂ, ಕೇಳಿದವರಿಗೂ ಮಧ್ಯೆ ಯಾವ ಪ್ರವೇಶವೂ ಸಾಧ್ಯವಿಲ್ಲ. ಕಾಮಿಸಿ ಪ್ರಾರ್ಥಿಸಿದ್ದಕ್ಕೆ ವರವು ಸಿಕ್ಕಿಯೇ ಸಿಕ್ಕುತ್ತದೆ.

ಕಾಮವೇ ಮೊದಲ ಹಂತ, ಲಭ್ಯವಾದರೆ ಸರಿ. ಇಲ್ಲವಾದರೆ ಮುಂದಿನ ಹಂತಗಳು ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು ಒಂದೊಂದಾಗಿ ಮನಸ್ಸಿನಲ್ಲಿ ಬುದ್ಧಿಯಲ್ಲಿ ಬೇರು ಬಿಟ್ಟು ಪ್ರಾರ್ಥಿಸಿದ ಜೀವಿಯನ್ನು ಹಾಳುಮಾಡಲೂಬಹುದು.

ಮನುಷ್ಯರಲ್ಲಿ ಬುದ್ಧಿ ಮತ್ತು ವಿವೇಕ ಪ್ರಜ್ಞೆಯಿರುವುದರಿಂದ ಪರಮಾತ್ಮನ ಕಡೆಗೆ ಕಾಮವನ್ನು ತಿರುಗಿಸಬಹುದು ಮತ್ತು ಕ್ರಮೇಣ ಸಾಕ್ಷಾತ್ಕಾರ ಪಡೆಯಬಹುದು. ಪ್ರತಿ ಜೀವಿಯಲ್ಲಿಯೂ ಕಾಮ - ಎಂದರೆ ಪಡೆಯುವ ಇಚ್ಛೆಯನ್ನು ಪರಮಾತ್ಮನೇ ಮನಸ್ಸು ಬುದ್ಧಿಯ ಮೂಲಕ ಹುಟ್ಟಿ ಹಾಕುತ್ತಾನೆ. ಇದು ಒಂದು ಶಕ್ತಿ, ಮೋಹಕ ಶಕ್ತಿ ಮಾಯೆಯ ಪ್ರಭಾವ. ಸಾತ್ವಿಕವಾದರೆ ಒಳ್ಳೆಯದು, ರಾಜಸವಾದರೆ ಮಧ್ಯಮ, ತಾಮಸವಾದರೆ ವ್ಯಕ್ತಿಯು ನಾಶದ ಕಡೆಗೆ ಓಡುತ್ತಾನೆ.

ಪರಮಾತ್ಮನ ಕಾಮವೇ ಬೇರೆ. ಪರಮಾತ್ಮನು "ಸೋऽಕಾಮಯತ ಪ್ರಜಾಃ ಸೃಜೆಯೇತಿ". ಇವನ ಕಾಮದಲ್ಲಿ ನಡೆಯಬೇಕಾದ್ದೆಲ್ಲವನ್ನು ಅವನೇ ನಡೆಸುತ್ತಾನೆ. ಆದರೆ ಅದರೊಳಗೆ ಅಂಟಿಕೊಳ್ಳುವುದಿಲ್ಲ. ಆದರೆ ಜೀವಿಗಳು ಅಷ್ಟು ಸ್ವತಂತ್ರರಲ್ಲ. ಮಾಯಾಪಾಶದಲ್ಲಿ ಒಂದು ಸಲ ಸಿಕ್ಕಿಕೊಂಡರೆ ಪರಮಾತ್ಮನ ಕೃಪೆ, ಸಂಕಲ್ಪವಿಲ್ಲದೆ ಹೊರಬರಲು ಸಾಧ್ಯವಿಲ್ಲ.

**516.** ಕಾಮಸಿಂಹಾಯ ನಮಃ

ಕಾಮಗಳನ್ನು ನೀಡುವುದರಲ್ಲಿ ಪರಮ ಕೃಪಾಳು, ಅದನ್ನು ಕೊಡುವ ಸಿಂಹ ಸ್ವರೂಪನು - ಅಂದರೆ ಕಾಮಸಿಂಹನು, .

ಅಥವಾ

ಕಾಮಗಳಿಗೆಲ್ಲ ಸಿಂಹ ಸ್ವರೂಪನು, ಸಿಂಹ ಸ್ವಪ್ನದಂತಿರುವವನು,

ಅಥವಾ

ಕಾಮಗಳಲ್ಲೆಲ್ಲಾ ಸಿಂಹ ರೂಪವಾದ ಅಥವಾ ಉನ್ನತವಾದ ಕಾಮಗಳನ್ನು ಕೊಡುವ ಸಿಂಹನು.

ಪರಮಾತ್ಮನು ಏನು ಬೇಕಾದರೂ ಆಗಬಹುದು. ಎಲ್ಲಕ್ಕೂ ಹೊಂದಿಕೊಳ್ಳುವ ಪರಮ ಕರುಣಾಳು.

**517.** ಭುವನ್ನೈಕಸಿಂಹಾಯ ನಮಃ

ಭುವನ - ಪ್ರಪಂಚದಲ್ಲೆಲ್ಲ ಅಥವಾ ಪ್ರಪಂಚಕ್ಕೆಲ್ಲ ಏಕೈಕ ಸಿಂಹ ಸ್ವರೂಪನು - ನರಸಿಂಹನು. ರಾಜಸ್ವರೂಪನು, ಸೂತ್ರಧಾರಿ. ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನು - ಪರಬ್ರಹ್ಮ ಸ್ವರೂಪಿ ನಾರಾಯಣನೇ - ಅವನೇ ಓಂಕಾರ ರೂಪಿ - ಸಕಲ ಜೀವಿಗಳಿಗೂ ಆಶ್ರಯದಾತನು, ಮುಕ್ತಿದಾತನು.

*ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ॥*
*॥85॥*

ಸ್ವರ್ಗ ಲೋಕ ಮತ್ತು ಭೂಲೋಕಗಳ ಮಧ್ಯದಲ್ಲಿರುವ ಈ ಅಂತರದಲ್ಲಿ ಮತ್ತು ದಶದಿಕ್ಕುಗಳಲ್ಲಿ ಎಲ್ಲೆಲ್ಲಿಯೂ ನಿನ್ನ (ನರಸಿಂಹ - ನಾರಾಯಣನ) ಒಬ್ಬನಿಂದಲೇನೇ ಸಕಲವೂ ಹರಡಿದೆ, ಪ್ರಸರಿಸಿದೆ!

ಎಂದರೆ ಎಲ್ಲೆಲ್ಲಿಯೂ ನರಸಿಂಹನೇ ಆಗಿದ್ದೀಯೇ, ಸ್ವರ್ಗಲೋಕದಲ್ಲಿ ನಾರಾಯಣನಾಗಿಯೂ, ಭೂಲೋಕದಲ್ಲಿ ನರಸಿಂಹನಾಗಿಯೂ ಹಿರಣ್ಯಕಶಿಪುವಿನ ಸಂಹಾರಕ್ಕಾಗಿ ಅವತಾರವೆತ್ತಿ ವ್ಯಾಪಿಸಿಕೊಂಡಿರುತ್ತೀಯೆ (ಎಂದು ಬ್ರಹ್ಮದೇವರು ನರಸಿಂಹನಿಗೆ ಹೇಳುತ್ತಿದ್ದಾರೆ).

ಇದು ಪರಮಾತ್ಮನ ವಿಶಾಲರೂಪ, ಅಪರಿಮಿತವಾದ ರೂಪ, ಬೃಹದಾಕಾರದ ರೂಪವಾಗಿರುತ್ತದೆ ಎಂದು ಹೇಳುತ್ತಿದ್ದಾರೆ.

*ದೃಷ್ಟ್ವಾಽದ್ಭುತಂ ರೂಪಮುದಗ್ರವೇಗಂ ಲೋಕತ್ರಯಂ ಪ್ರವ್ಯಥಿತಂ*
*ಮಹಾತ್ಮನ್ ।*
*ಅಮೀ ಹಿ ತ್ವಾ ಸುರಸಂಘಾವಿಶಂತಿ ಕೇಚಿದ್ಭೀತಾಃ ಪ್ರಾಂಜಲಿಯೋ*
*ಗೃಣಂತಿ ॥86॥*

ಹೇ ನರಸಿಂಹನೇ, ಮೂರು ಲೋಕಗಳು ನಿನ್ನ ಅದ್ಭುತವಾದ ಮತ್ತು ಕೋಪದಿಂದ ಉರಿಯುತ್ತಿರುವ ರೂಪವನ್ನು ನೋಡಿ ಬಹಳ ವಿಸ್ಮಯವಾಗಿದ್ದಾರೆ. ಮಹಾತ್ಮನೇ, ದೇವತೆಗಳ ಸಮೂಹಗಳು ನಿನ್ನನ್ನು ನೋಡಿ ಭೀತಿಯಿಂದ ನಿನ್ನನ್ನೇ ಪ್ರವೇಶಿಸುತ್ತಾರೆ. ಆದರೆ ನಿನ್ನ ರೂಪದಲ್ಲಿಯೇ ಐಕ್ಯವಾಗಿದ್ದಾರೆ, ಕೈಗಳಿಂದ ನಮಸ್ಕರಿಸುತ್ತಾ ನಿನ್ನಲ್ಲಿಗೇ ಬರುತ್ತಿದ್ದಾರೆ.

ನರಸಿಂಹ ವಿಕಾರವಾದ ಭಯಂಕರವಾದ ರೂಪವನ್ನು ನೋಡಿ ಮೂರು ಲೋಕಗಳ ದೇವತೆಗಳು ಎಲ್ಲರೂ ಭಯದಿಂದ ಕೈ ಮುಗಿದು ತಲ್ಲಣಿಸುತ್ತಿವೆ.

*ಸ್ವಸ್ತೀತ್ಯುಕ್ತ್ವಾ ಮುನಯಃ ಸಿದ್ಧಸಂಘಾಃ ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ।*
*ರುದ್ರಾದಿವಸವೋ ಯೇ ಚ ಸಾಧ್ಯಾಃ ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ॥*
*॥87॥*

ಮುನಿಗಳು, ಸಿದ್ಧರ ಗುಂಪುಗಳು ನಿನ್ನನ್ನು ಹೇರಳವಾದ ಸ್ತೋತ್ರಗಳಿಂದ ಸ್ವಸ್ತಿ (ಶುಭವಾಗಲಿ) ಎಂದು ಹೇಳಿ ಸ್ತೋತ್ರಮಾಡುತ್ತಿದ್ದಾರೆ.

ರುದ್ರರೇ ಮುಂತಾದವರು, ವಸುಗಳು, ಸಾಧ್ಯರು, ವಿಶ್ವೇ ದೇವತೆಗಳು ಅಶ್ವಿನೀ ದೇವತೆಗಳು, ಮರುತ್ತುಗಳು, ಊಷ್ಮಪರು ಎಲ್ಲರೂ ಸಹ ನಿರಂತರ ಉತ್ತಮೋತ್ತಮ ಸ್ತೋತ್ರಗಳಿಂದ ನಿನ್ನನ್ನು ಹೊಗಳುತ್ತಿದ್ದಾರೆ.

*ಗಂಧರ್ವಯಕ್ಷಾಸುರಸಿದ್ಧಸಂಘಾ ವೀಕ್ಷಂತಿ ತ್ವಾಂ ವಿಸ್ಮಿತಾಶ್ಚೈವ ಸರ್ವೇ।*
*ಲೇಲಿಹ್ಯಸೇ ಗ್ರಸಮಾನಃ ಸಮಂತಾಲ್ಲೋಕಾನ್ ಸಮಗ್ರಾನ್ವದನೈರ್ಜ್ವಲದ್ಭಿಃ॥88॥*

ಗಂಧರ್ವರು, ಯಕ್ಷರು, ಅಸುರರು, ಸಿದ್ಧರ ಸಮೂಹಗಳು, ಮತ್ತೆಲ್ಲರೂ ವಿಸ್ಮಿತರಾಗಿ ನಿನ್ನನ್ನು ನೋಡುತ್ತಿದ್ದಾರೆ. ಉರಿಯುತ್ತಿರುವ ಮುಖಗಳಲ್ಲಿ ಎಲ್ಲವನ್ನು (ಏನನ್ನೂ ಬಿಡದೆ) ಸಕಲ ಲೋಕಗಳನ್ನು ಆಹಾರವನ್ನಾಗಿ ಮಾಡಿಕೊಂಡು ನಾಲಿಗೆಯಿಂದ ಚಪ್ಪರಿಸುತ್ತಿದ್ದೀಯೆ.

*ತೇಜೋಭಿರಾಪೂರ್ಯ ಜಗತ್ ಸಮಗ್ರಂ ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ।*
*ತ್ವಮಿಂದ್ರಜಾಲಪ್ರತಿಮಪ್ರಪಂಚಕ್ರೀಡಾಪರೋಽಪಿ ಸ್ವಯಮಪ್ರಪಂಚಃ ॥89॥*

ಹೇ ವಿಷ್ಣುವೇ, ನಿನ್ನ ತೇಜಸ್ಸಿನಿಂದ ಸಮಗ್ರ (ಎಲ್ಲಾ) ಪ್ರಪಂಚವನ್ನು ತುಂಬಿಕೊಂಡು ಬೆಳಗಿಸುತ್ತಿದ್ದೀಯೆ. ಅದೇ ಶಾಖದಿಂದ ನಿನ್ನ ಎದುರಿಗಿರುವ ಪ್ರಪಂಚಗಳನ್ನು ಸುಡುತ್ತಿದ್ದೀಯೆ. ನೀನು ಇಂದ್ರಜಾಲನು, ಅಪ್ರತಿಮನು. ಪ್ರಪಂಚದಲ್ಲಿ ಆಟವಾಡುವುದರಲ್ಲಿ ನಿರತನಾಗಿದ್ದೀಯೆ. ಆದರೂ ನೀನು ತಾನೇ ಪ್ರಪಂಚದಿಂದ ದೂರವಿರುವೆ.

*ಭವಿಷ್ಣುಸ್ತ್ವಂ ಸಹಿಷ್ಣುಸ್ತ್ವಂ ಭ್ರಾಜಿಷ್ಣುರ್ಜಿಷ್ಣುರೇವ ಚ ।*
*ಪೃಥ್ವೀ ತ್ವಮಂತರಿಕ್ಷಂ ಚ ಪರ್ವತಾರಣ್ಯಭೂಮಯಃ ॥90॥*
*(518-524)*

**518.** ಭವಿಷ್ಣವೇ ನಮಃ

ಭ - ಭವಸಾಗರವನ್ನು ಮಾಡುವವನು ಪರಮಾತ್ಮನೇ. ಅದರಲ್ಲಿ ಸಕಲ ಚರಾಚರ ವಸ್ತುಗಳನ್ನು ಮತ್ತು ಜೀವಿಗಳನ್ನು ಹಾಕುವವನೂ ಅವನೇ. ಅದರಲ್ಲಿ ಪ್ರಕೃತಿ, ಪುರುಷ, ಮಾಯೆಯನ್ನು ಮಾಡಿ ನಡೆಸುವವನೂ ಅವನೇ. ಪ್ರಕೃತಿ, ಪುರುಷ, ಮಾಯೆ, ಜೀವಿಗಳು, ಪಂಚಮಹಾಭೂತಗಳು, ಮಹತ್ತತ್ವ, ಅಹಂಕಾರ - ಇವುಗಳು ಬೇರೆ ಬೇರೆಯಾಗಿರುವಾಗ ಏನೂ ನಡೆಯುವುದಿಲ್ಲ. ಆದರೆ ಪರಸ್ಪರ ಸಂಯೋಗದಿಂದ ಅದೂ ಪರಮಾತ್ಮನ ಸ್ವಯಂ ಕಾಮನೆಯಿಂದ ಈ ಬ್ರಹ್ಮಾಂಡಗಳು ಕಾಲಚಕ್ರದಲ್ಲಿ ಸಿಲುಕಿ ಮುಳುಗಿ ಹೋಗುತ್ತವೆ. ಅವನೇ ಎಲ್ಲೆಡೆಯೂ ಪ್ರಸರಿಸುವುದರಿಂದ, ವಿಷ್ಣುವಾಗುತ್ತಾನೆ. ವಿಷ್ಣುರೂಪದಿಂದ ಭವಸಾಗರವನ್ನು ದಾಟಿಸುವುದರಿಂದ ಅವನಿಗೆ ಭವಿಷ್ಣು ಎಂದು ಹೇಳಬಹುದು. ಅದರಿಂದ ಭವಿಷ್ಣವೇ ನಮಃ ಎಂದು ನಮಸ್ಕರಿಸುತ್ತೇವೆ.

ಭ - ಪ್ರಕಾಶ, ಎಲ್ಲೆಲ್ಲಿಯೂ ಪ್ರವೇಶಿಸಿ ಬೆಳಕನ್ನು ಮತ್ತು ಜ್ಞಾನವನ್ನು ಕೊಡುವವನು - ಮಹಾವಿಷ್ಣು. (ಅಜ್ಞಾನದ ಕತ್ತಲೆಯನ್ನು ಹೋಗಲಾಡಿಸುವವನು).

**519.** ಸಹಿಷ್ಣವೇ ನಮಃ

ಸಕಲ ಜೀವಿಗಳ ತ್ರಿಗುಣಗಳಿಂದ ಕೂಡಿದ ಪ್ರಾರ್ಥನೆಯನ್ನು ಸಹಿಸಿಕೊಂಡು ಏನನ್ನು ಕೇಳಿದರೂ ವರರೂಪದಲ್ಲಿ ಕೊಡುವುದರಿಂದ ಸಹಿಷ್ಣು ಎಂದು ಹೆಸರು. ಜೀವಿಗಳಿಗೆ ಪರಮೋಚ್ಚ ಗುರಿಯಾದ ಪುನರಾವೃತ್ತಿರಹಿತ ಸ್ಥಾನ, ಸಾಲೋಕ್ಯ, ಸಾಯುಜ್ಯ, ಸಾರೂಪ್ಯ, ಸಾಮೀಪ್ಯ - ಪದವಿಗಳು ಪರಮ ಕರುಣಾಳುವಾದ ಶ್ರೀಮನ್ನಾರಾಯಣನಿಂದ ಲಭ್ಯವಿದ್ದರೂ ಇವುಗಳನ್ನು ಬಿಟ್ಟು ಪುನಃ ಪುನಃ ಭವಸಾಗರದಲ್ಲಿ ತಾತ್ಕಾಲಿಕವಾದ ಇಚ್ಛೆಗಳನ್ನು ಪ್ರಾರ್ಥಿಸುವುದರಿಂದ ಪರಮಾತ್ಮನು ಜೀವಿಗಳಿಗಾಗಿ ಪರಿತಪಿಸುತ್ತಾನೆ. ಜೀವಿಗಳು ತನ್ನನ್ನು ಉಪಯೋಗಿಸಿಕೊಳ್ಳದೆ ಅಜ್ಞಾನದಲ್ಲಿ ಮುಳುಗಿರುವುದನ್ನು ನೋಡಿ ಸಹಿಸಬೇಕಲ್ಲಾ ಎಂದು ಸಹಿಸಿಕೊಂಡಿರುತ್ತಾನೆ. ಹೀಗೆ ಸಹಿಸಿರುವವನು ವಿಷ್ಣುವೇ ಆದ್ದರಿಂದ ಅವನು ಸಹನಶೀಲ - ಸಹಿಷ್ಣು - ಎನ್ನಬಹುದು.

ಶೀತೋಷ್ಣಾದಿ ದ್ವಂದ್ವಗಳನ್ನು ಸಹಿಸಿಕೊಂಡಿರುವವನು. (ವಿ.ಸ. 565)

ಹಿರಣ್ಯಾಕ್ಷ ಮೊದಲಾದವರನ್ನು ಸೋಲಿಸಿದವನು. (ವಿ.ಸ. 144)

520. ಭ್ರಾಜಿಷ್ಣುವೇ ನಮಃ

ಭ್ರಾಜಿಷ್ಣು - ಪ್ರಕಾಶಮಯವಾದ ಸ್ವರೂಪವುಳ್ಳವನು. (ವಿ.ಸ. 141)

ಭ್ರಾಜಿಷ್ಣು - ಹೊಳಪುಳ್ಳವನು, ತೇಜಸ್ಸುಳ್ಳವನು,

ಭಗವಂತನು ಸ್ವಯಂಪ್ರಕಾಶನು, ತಾನು ಇರುವೆಡೆಗಳಲ್ಲೆಲ್ಲಾ ತೇಜಸ್ಸನ್ನು ತುಂಬುತ್ತಾನೆ ಎಂದರೆ ಜ್ಞಾನ ಪ್ರಭೆಯನ್ನು ಹರಡುತ್ತಾನೆ.

ಇದೇ ರೀತಿ ಭಗವಂತನ ಅಂಶವಾದ ಆತ್ಮವು ಇರುವೆಡೆಗಳಲ್ಲೆಲ್ಲ ತನ್ನ ಪ್ರಕಾಶವನ್ನು ಬೀರುತ್ತದೆ. ಅದರಲ್ಲಿ ತೇಜಸ್ಸು ಇದ್ದೇ ಇರುತ್ತದೆ. ಆದರೆ ಸಂಸ್ಕಾರವೆಂಬ ಲೇಪನದಿಂದ ಈ ಬೆಳಕು ಹೊರ ಬರುವುದಿಲ್ಲ. ಯಾವಾಗ ಪರಮಾತ್ಮನ ಕೃಪೆಯೂ ಬೀಳುವುದೋ ಆಗ ಈ ಅಂಧಕಾರವು ನಶಿಸಿ ಹೋಗುತ್ತದೆ. ಅದಕ್ಕೆ ಆತ್ಮನು ಹೊಂದಿರುವ ಅಹಂಕಾರ, ಮನಸ್ಸು, ಬುದ್ಧಿ, ಚಿತ್ತಗಳು ಪ್ರಯತ್ನಿಸಬೇಕು, ಇದೇ ಪಾರಮಾರ್ಥದ ಗುಟ್ಟು.

521. ಜಿಷ್ಣವೇ ನಮಃ

ಜಿತನಾಗುವವನು, ಯಾರಿಂದಲೂ ಸೋಲಿಸಲ್ಪಡದೇ ಇರುವವನು. ತನ್ನ ಗೆಲುವನ್ನು ಎಲ್ಲೆಡೆಯೂ ಪ್ರಸಿದ್ಧ ಪಡಿಸುವವನು. ಇವನ ಗೆಲವು ನಿರಂತರ, ಸದಾಕಾಲ ಇರುವಂತಹದು.

ಆದರೆ ದೇಹಿಯ ಗೆಲವು ತಾತ್ಕಾಲಿಕ, ದೇಹಿಯ ಜೀವನದಲ್ಲಿ ಸೋಲು, ಗೆಲವು ದ್ವಂದ್ವಗಳು, ಕಾಲಚಕ್ರದಲ್ಲಿ ಇವು ಶಾಶ್ವತವಲ್ಲ.

ಜಿಷ್ಣವೇ ನಮಃ - ಸಹನ ಶೀಲನು, ಎಲ್ಲ ಪರಿಸ್ಥಿತಿಗಳಲ್ಲಿಯೂ ಜಿತ ಸಂಕಲ್ಪ ಮಾಡುವವನು.

522. ಪೃಥಿವ್ಯೈ ನಮಃ

ಪರಮಾತ್ಮನೇ ತನ್ನ ಕಾಮನೆಯಂತೆ ಜೀವಿಗಳು ವಾಸಮಾಡಲು ಭೂ ಲೋಕಗಳನ್ನು ಸೃಷ್ಟಿಸಿದನು. ಸಕಲ ಬ್ರಹ್ಮಾಂಡಗಳಲ್ಲಿ ಭೂಲೋಕವೇ ಜೀವಿಗಳಿಗೆ ತಮ್ಮ ಸ್ಥಿತಿಯನ್ನು ಉತ್ತಮಗೊಳಿಸಲಿಕ್ಕೂ ಮತ್ತು ಪರಮಾತ್ಮನನ್ನು ಸೇವಿಸುವುದಕ್ಕೂ ಉತ್ತಮವಾದ ಪ್ರದೇಶ. ಭೂಮಿಯು ಕರ್ಮಭೂಮಿ. ಹದಿನಾಲ್ಕು ಲೋಕಗಳಲ್ಲಿ ಭೂಲೋಕದಷ್ಟು ವಿಶಿಷ್ಟವಾದ ಲೋಕಗಳಿಲ್ಲ.

ಭೂ - ಲೋಕ, ಭೂದೇವಿಯೇ ಶ್ರೀಮನ್ನಾರಾಯಣನ ಪ್ರೇಯಸಿ.

ನಾರಾಯಣ, ಲಕ್ಷ್ಮಿ, ಮತ್ತನೇಕ ದೇವ ದೇವತೆಗಳು ಈ ಭೂಮಿಯಲ್ಲಿ ಅವತಾರವೆತ್ತಿ ನಾರಾಯಣನನ್ನು ಅಪಾರ ಸ್ತೋತ್ರದಿಂದ ಸೇವಿಸುತ್ತಾರೆ. ನಾರಾಯಣನೂ, ಶಿವನೂ, ಸಕಲರೂ ಬಹಳ ಬೇಗ ತೃಪ್ತರಾಗಿ ಜೀವಿಗಳಿಗೆ ವರವನ್ನು ನೀಡಿ ರಕ್ಷಿಸುತ್ತಾರೆ.

ಪೃಥ್ವೀ - ಎಂದರೆ ಪೃಥಾದೇವಿ - ಜಗತ್ತು, ಭೂಮಿ - ಪರಮಾತ್ಮನಿಗೆ ಪ್ರಿಯವಾದವಳು.

ಪರಮಾತ್ಮನು ಅವತಾರವೆತ್ತುವ ಸ್ಥಾನ, ಕ್ರೀಡಿಸುವ ಸ್ಥಾನ, ಪೃಥ್ವಿಯು ಪರಮಾತ್ಮನ ರೂಪ.

ವೇನರಾಜನ ಬಲಿಷ್ಠಪುತ್ರ - ಪೃಥು, ಇವನು ಪೃಥಿವಿಯನ್ನು ಸಮಮಾಡಿದನು. ಅದು ಹಸುವಿನ ರೂಪವನ್ನು ಧರಿಸಿತು. ಪೃಥುವು ಆ ಹಸುವಿನಿಂದ ಅನೇಕ ರತ್ನ, ಓಷಧಿಗಳು, ಫಲಗಳನ್ನು ಹಿಂಡಿದನು. ಅದನ್ನು ತನ್ನ ಮಗಳಿನಂತೆಯೇ ನೋಡಿಕೊಂಡನು. ಈ ಕಾರಣದಿಂದ ಭೂಮಿಗೆ ಪೃಥಿವೀ ಎಂದು ಹೆಸರಾಯಿತು.

**523. ಅಂತರಿಕ್ಷಾಯ ನಮಃ**

ಅಂತರಿಕ್ಷ - ಎಂದರೆ ಆಕಾಶ, ಭೂಮಿಯ ಮೇಲೆ ಇರುವ ಭಾಗ. ಸೂರ್ಯ ಮಂಡಲದ ಕೆಳಗೆ ಹತ್ತು ಸಾವಿರ ಯೋಜನೆಗಳ ಕೆಳಗೆ ''ರಾಹು'' ಗ್ರಹವಿದೆ. ಹದಿಮೂರು ಸಾವಿರ ಯೋಜನದಷ್ಟು ವಿಸ್ತಾರವಾದ ಈ ಗ್ರಹ ಸೂರ್ಯಗ್ರಹಣ - ಚಂದ್ರಗ್ರಹಣಗಳಿಗೆ ಕಾರಣವಾದುದು. ಇದರ ಕೆಳಗೆ ಹತ್ತು ಸಾವಿರ ಯೋಜನ ದೂರದಲ್ಲಿ ಸಿದ್ಧ, ಚಾರಣ ವಿಧ್ಯಾಧರರ ಸ್ಥಾನವು, ಅದರ ಕೆಳಗೆ ಯಕ್ಷ, ರಾಕ್ಷಸ, ಭೂತ, ಪ್ರೇತಗಳ ಸಂಚರಿಸುವ ಅಂತರಿಕ್ಷವೂ ಅದರ ಕೆಳಗೆ ಭೂಮಂಡಲವೂ ಇವೆ. ಭೂಮಂಡಲದ ಕೆಳಗೆ ಅತಳ, ವಿತಳ, ಸುತಳ, ರಸಾತಳ, ತಳಾತಳ, ಮಹಾತಳ, ಪಾತಾಳ ಎಂಬ ಏಳು ಲೋಕಗಳು ಒಂದರ ಕೆಳಗೊಂದಿವೆ. ಇವು ಒಂದೊಂದೂ ಹತ್ತು ಸಾವಿರ ಯೋಜನ ವಿಸ್ತಾರವಾಗಿವೆ.

ಅಂತರಿಕ್ಷ - ಆಕಾಶ, ಹವೆ, ವಾತಾವರಣ

ಈ ಅಂತರಿಕ್ಷವೂ ಪರಮಾತ್ಮನೇ, ಇದರಲ್ಲಿ ಎಲ್ಲೆಲ್ಲಿಯೂ ಅವನೇ ಹರಡಿಕೊಂಡಿರುತ್ತಾನೆ.

**524. ಪರ್ವತಾರಣ್ಯಭೂಮಯೇ ನಮಃ**

ಭೂಮಿಯ ಮೇಲೆ ಇರುವ ಪರ್ವತಗಳು ಅರಣ್ಯಗಳು ಭೂಮಿ ಎಲ್ಲವೂ ಅವನೇ. ಅವನ ಅಂಶದಿಂದಲೇ ಬಂದವುಗಳು. ಪರ್ವತಗಳಲ್ಲೆಲ್ಲಾ ಹಿಮವತ್ಪರ್ವತವೇ ನಾನು ಎಂದಿದ್ದಾನೆ ಶ್ರೀಕೃಷ್ಣ ಗೀತೆಯಲ್ಲಿ ವಿಭೂತಿಯೋಗದಲ್ಲಿ.

ಭೂಮಿಯು ಪರಮಾತ್ಮನಿಗೆ ಪ್ರಿಯವಾದ ಭೂದೇವಿಯು. ಈ ಭೂದೇವಿಗಾಗಿ ಪರಮಾತ್ಮನು ವರಾಹ ರೂಪವನ್ನು ತಾಳಿ ಸಮುದ್ರದ ಒಳಗೆ ಹೋಗಿ ಪಾತಾಳದ ತನಕ ಹೋಗಿ ಅಲ್ಲಿಂದ ಭೂದೇವಿಯನ್ನು ತನ್ನ (ವರಾಹದ

ಕೋರೆ ಹಲ್ಲಿನ) ಕೊಂಬಿನ ಮೇಲೆ ಇಟ್ಟು ಹೊರತಂದನು. ತನ್ನ ಪ್ರಿಯಳೆಂದು ರಕ್ಷಿಸುತ್ತಾನೆ. ಇವಳ ಹೃದಯದಲ್ಲಿ ವಾಸಿಸುವ ಕೋಟ್ಯಾಂತರ ಜೀವಕೋಟಿಗಳನ್ನು ರಕ್ಷಿಸುತ್ತಾನೆ. ಪರ್ವತಗಳು, ಅರಣ್ಯಗಳು ಎಲ್ಲವೂ ಇವನ ಸ್ವರೂಪವೇ. ಸಕಲವೂ ಇವನೇ. ಅದರಿಂದಲೇ ಪರ್ವತಾರಣ್ಯ ಭೂಮಯೇ ನಮಃ ಎನ್ನುವುದು. ಸಕಲ ಜೀವಕೋಟಿಯ ಆತ್ಮಗಳೇ ಇವನ ದೇಹದಿಂದ ಹೊರಬಂದವು. ಅವುಗಳನ್ನು ಮತ್ತೆ ತನ್ನ ದೇಹದಲ್ಲಿ ಸೇರಿಸಿಕೊಳ್ಳಲು ಕಾತುರನಾಗಿದ್ದಾನೆ. ಆದರೆ ಆತ್ಮಗಳು ಸಂಸ್ಕಾರಗಳಲ್ಲಿ ಮುಳುಗಿ ಹೊರಬರದಾಗಿವೆ. ಇದೇ, ಇವನ ಪರಿತಾಪ, ದಯೇ ಕಾರುಣ್ಯಗಳಿಗೆ ಕಾರಣ.

*ಕಲಾಕಾಷ್ಠಾವಿಲಿಪ್ತಸ್ತ್ವಂ ಮುಹೂರ್ತಪ್ರಹರಾಧಿಕಮ್ ।*
*ಅಹೋರಾತ್ರಂ ತ್ರಿಸಂಧ್ಯಾ ಚ ಪಕ್ಷಮಾಸಾಸ್ತು ವತ್ಸರಃ ॥91॥*
*(525-533)*

**525.** ಕಲಾಯೈ ನಮಃ

ಕಲಾ - ಅಂಶ, ಭಾಗ, ಚಂದ್ರನ ಕಲೆ.

ಸಮಯವನ್ನು ಅಳೆಯುವ, ಗಣಿಸುವ ಭಾಗ, ಅಂಶ. ಸಮಯದ ಗಣನೆ ಹೀಗೆ ಇದೆ, ಇದು ಊಹಿಸುವುದಕ್ಕೆ ಬಹಳ ಕಷ್ಟ. ಮನುಷ್ಯನ ''ರೆಪ್ಪೆಯನ್ನಾಡಿಸುವ ಕಾಲದಿಂದ ಹಿಡಿದು ಮಹಾವಿಷ್ಣುವಿನ ಒಂದು ಸಲ ರೆಪ್ಪೆಯಾಡಿಸುವ ಕಾಲದ ಪರ್ಯಂತ'' ಸಮಯದ ಗಣನೆಗೆ ಸಂಬಂಧ ಕಲ್ಪಿಸಿದೆ. ಅದರಿಂದ ನಮ್ಮ ಮನಸ್ಸು ಬುದ್ಧಿಯನ್ನು ನಿಗ್ರಹಿಸಿ ಈ ಕಾಲದ ಸಂಬಂಧಗಳನ್ನು ತಿಳಿಯಲು ಓಡಿಸಿದಾಗ ಸ್ಮೃತಿ ತಪ್ಪಿ ಬುದ್ಧಿಮನಗಳು ಎಲ್ಲಿಗೋ ಓಡುತ್ತವೆ. ತಿಳಿಯಲು ಅಸಾಧ್ಯವಾದ ಸ್ಥಿತಿಯನ್ನು ತಲಪುತ್ತದೆ ಮತ್ತು ಮುಂದೆ ಮನಸ್ಸನ್ನು ಹರಿಬಿಡುವುದರಿಂದ ಪ್ರಯೋಜನವಿಲ್ಲವೆಂದು ನಿಂತು ಸ್ಥಬ್ಧವಾಗಿ ಹೋಗುತ್ತದೆ. ಇದೇ ಪರಮಾತ್ಮನ ಕಾಲ ಗಣನೆಯ ವೈಚಿತ್ರ್ಯ ಮತ್ತು ವಿಶೇಷ. ಅವನು ಕಾಲಾತೀತ, ಊಹಾತೀತ, ಗಣನಾತೀತ, ಸರ್ವಕ್ಕೂ ಅತೀತನು. ನಾವು ಆ ಅತೀತಕ್ಕೆ ಹೋಗಲು ಪ್ರಯತ್ನಿಸಿದರೆ ಅವನು ಹಾಗೆ ಪ್ರಯತ್ನಿಸುವ ಎಲ್ಲರಿಗೂ ಜ್ಞಾನ ಚಕ್ಷುವನ್ನು ಕೊಡುವವನೇ! ಇಲ್ಲ. ಸಹಸ್ರಾರು ಜನ ಮನುಷ್ಯರಲ್ಲಿ ಒಬ್ಬನು ಅವನನ್ನು ತಿಳಿಯಲು ಪ್ರಯತ್ನಿಸಬಹುದು. ಹಾಗೆ ಪ್ರಯತ್ನಿಸಿದ ಸಹಸ್ರಜನರಲ್ಲಿ ಯಾರೋ ಒಬ್ಬರು ತಿಳಿಯಬಹುದು - ಪರಮಾತ್ಮನು ಗಹನನೂ ಹೌದು, ಸುಲಭಸಾಧ್ಯನೂ ಹೌದು - ಎಂತಹ ವಿಪರ್ಯಾಸ.

ಈಗ ಕಾಲಗಣನೆ - ಕಾಲ ಮಾಪನೆಯನ್ನು ತಿಳಿಯಲು ಪ್ರಯತ್ನಿಸೋಣ.

ಕಾಲಾಜ್ಞಾನ - ಮಹಾಭಾರತದ ಮೋಕ್ಷಧರ್ಮ ಪರ್ವದಲ್ಲಿ 232ನೇ ಅಧ್ಯಾಯದಲ್ಲಿ ಈ ರೀತಿ ಕೊಟ್ಟಿದೆ.

ನಿಮೇಷ - ಮನುಷ್ಯನು ಒಂದು ಸಲ ರೆಪ್ಪೆಯನ್ನಾಡಿಸುವ ಸಮಯ.

15 ನಿಮೇಷ = 1 ಕಾಷ್ಠಾ

30 ಕಾಷ್ಠಾ = 1 ಕಲೆ

33 ಕಲೆ = 1 ಮುಹೂರ್ತ

30 ಮುಹೂರ್ತ = 1 ಹಗಲು ಮತ್ತು 1 ರಾತ್ರಿ = 1 ದಿನ (24 ಗಂಟೆಗಳು)

30 ರಾತ್ರಿ ಮತ್ತು 30 ಹಗಲು = 1 ಮಾಸ,

(15 ದಿನ = 1 ಪಕ್ಷ; 2 ಪಕ್ಷ = 1 ಮಾಸ)

12 ಮಾಸಗಳು = 1 ಸಂವತ್ಸರ

ಮನುಷ್ಯರ 1 ಮಾಸ = ಪಿತೃಗಳ 1 ಒಂದು ದಿನ

ಶುಕ್ಲಪಕ್ಷ = 15 ದಿನ = ಪಿತೃಗಳ 1 ಹಗಲು

ಕೃಷ್ಣಪಕ್ಷ = 15 ದಿನ = ಪಿತೃಗಳ 1 ರಾತ್ರಿ

ಮನುಷ್ಯರ 1 ವರ್ಷ = ದೇವತೆಗಳ ಒಂದು ಹಗಲು ಮತ್ತು ಒಂದು ರಾತ್ರಿ (ಒಂದು ದಿನ)

ಉತ್ತರಾಯಣದ 6 ಮಾಸಗಳು = ದೇವತೆಗಳ ಒಂದು ಹಗಲು,

ದಕ್ಷಿಣಾಯಣದ 6 ಮಾಸಗಳು = ದೇವತೆಗಳ ಒಂದು ರಾತ್ರಿ

360 ಮನುಷ್ಯರ ವರ್ಷಗಳು = ದೇವತೆಗಳ 1 ವರ್ಷ = (ದೇವಮಾನದ ಒಂದು ವರ್ಷ)

12,000 ದೇವಮಾನ ವರ್ಷಗಳು = 1 ಚತುರ್ಯುಗ,

1 ಚತುರ್ಯುಗ ಎಂದರೆ, ಒಂದು ಕೃತಯುಗ
ಒಂದು ತ್ರೇತಾಯುಗ
ಒಂದು ದ್ವಾಪರ ಯುಗ
ಒಂದು ಕಲಿಯುಗ
(4 ಯುಗಗಳ ಒಂದು ಸಮೂಹ)
= 43 ಲಕ್ಷ 20 ಸಾವಿರ ಮಾನುಷ ವರ್ಷಗಳು.

ಕೃತಯುಗ 4000ದಿವ್ಯ ವರ್ಷಗಳು + 400 ದಿವ್ಯವರ್ಷ ಪ್ರಾತಃ ಸಂಧ್ಯಾಕಾಲ
+ 400 ದಿ. ವ. ಸಾಯಂಸಂಧ್ಯಾಕಾಲ
= 4800 ದಿವ್ಯವರ್ಷಗಳು

ತ್ರೇತಾಯುಗ = 3000 ದಿವ್ಯವರ್ಷಗಳು + 300 ದಿ.ಪ್ರಾ. ಸಂಧ್ಯೆ
+ 300 ದಿ. ಸಾಯಂ ಸಂಧ್ಯೆ
= 3600 ದಿವ್ಯವರ್ಷಗಳು

ದ್ವಾಪರಯುಗ = 2000 ದಿವ್ಯವರ್ಷಗಳು + 200 ದಿ. ಪ್ರಾತಃ. ಸಂಧ್ಯೆ
+ 200 ದಿ. ಸಾಯಂ. ಸಂಧ್ಯೆ
= 2400 ದಿವ್ಯವರ್ಷಗಳು

ಕಲಿಯುಗ = 1000 ದಿವ್ಯವರ್ಷಗಳು + 100 ದಿ. ಪ್ರಾ. ಸಂಧ್ಯೆ
+ 100 ದಿ.ಸಾ. ಸಂಧ್ಯೆ
= 1200 ದಿವ್ಯವರ್ಷಗಳು.

ಕೃತಯುಗದಲ್ಲಿ ಸತ್ಯ ಮತ್ತು ಧರ್ಮಗಳು 4 ಪಾದಗಳು ಪೂರ್ಣವಾಗಿರುತ್ತವೆ.
ತ್ರೇತಾಯುಗದಲ್ಲಿ ಸತ್ಯ ಮತ್ತು ಧರ್ಮಗಳು 3 ಪಾದಗಳು
ದ್ವಾಪರಯುಗದಲ್ಲಿ ಸತ್ಯ ಮತ್ತು ಧರ್ಮಗಳು 2 ಪಾದಗಳು
ಕಲಿಯುಗದಲ್ಲಿ ಸತ್ಯ ಮತ್ತು ಧರ್ಮಗಳು 1 ಪಾದ

ಕೃತಯುಗದಲ್ಲಿ ದೇವರನ್ನು ಒಲಿಸಿಕೊಳ್ಳಲು : ಶಾಸ್ತ್ರ, ಆಗಮ ಬೇಕಾಗಿಲ್ಲ,
ಬರೀ ತಪಸ್ಸು ಬೇಕು.

ತ್ರೇತಾಯುಗದಲ್ಲಿ ಜ್ಞಾನವೇ ಶ್ರೇಷ್ಠ
ದ್ವಾಪರಯುಗದಲ್ಲಿ ಯಜ್ಞಗಳು
ಕಲಿಯುಗದಲ್ಲಿ ಧ್ಯಾನ, ಜಪ

2000 ಚತುರ್ಯುಗಗಳು = ಬ್ರಹ್ಮನ ಒಂದು ದಿನ
(1000 ಚತುರ್ಯುಗ-ಒಂದು ಹಗಲು, 1000 ಚತುರ್ಯುಗ ಒಂದು ರಾತ್ರಿ)
360 ಈ ರೀತಿಯ ದಿನಗಳು= ಬ್ರಹ್ಮನ ಒಂದು ವರುಷ
50 ಬ್ರಹ್ಮನ ವರ್ಷಗಳು = 1 ಪರಾರ್ಧ
100 ಬ್ರಹ್ಮನ ವರ್ಷಗಳು = 2 ಪರಾರ್ಧ = ಒಬ್ಬ ಬ್ರಹ್ಮನ ಆಯಸ್ಸು
= $311040 \times 10^{10}$ (ಮನುಷ ವರ್ಷಗಳು)

ಪ್ರಳಯದ ಕಾಲ = 2 ಪರಾರ್ಧಗಳು. ಇದರ ಕೊನೆಯಲ್ಲಿ ಹೊಸ ಬ್ರಹ್ಮನು ಹುಟ್ಟಿ ಹೊಸ ಸೃಷ್ಟಿಯನ್ನು ಪ್ರಾರಂಭಿಸುತ್ತಾನೆ.
ಒಂದು ಸೃಷ್ಟಿ ಮತ್ತು ಒಂದು ಪ್ರಳಯ =4 ಪರಾರ್ಧಗಳು. ಈ ಸಮಯದಲ್ಲಿ ಮಹಾವಿಷ್ಣುವು ಒಂದು ಸಲ ಕಣ್ಣು ಮಿಟಕಿಸುತ್ತಾನೆ.
(ಮಹಾವಿಷ್ಣುವು ರಪ್ಪೆಯನ್ನಾಡಿಸುವ ಸಮಯ).

ಇದು ಸಮಯದ ಉದ್ದ - ಇದರೊಂದಿಗೆ ನಮ್ಮ ಆ ಆಯಸ್ಸಿನ ಸಮಯವು ಯಾವ ಲೆಕ್ಕ ಮತ್ತು ನಮ್ಮ ಜೀವನದಲ್ಲಿ ನಡೆಯುವ ಕಾರ್ಯಗಳು ಯಾವ ಲೆಕ್ಕ, ಪರಿವೆ.

ಚಂದ್ರನ ಕಲೆಗೆ ಕಲಾ ಎಂದು ಹೆಸರು.

ಪರಮಾತ್ಮನ ಅಂಶಭಾವಕ್ಕೆ ಕಲಾ ಎಂದು ಹೆಸರು.

ಕಾಲದ ಪರಿವೆಯಲ್ಲಿ ಕಲಾ ಎಂದರೆ -

1 ಕಲಾ = 30 ಕಾಷ್ಠಾ = 30 x 15 ನಿಮೇಷಾ

150 ಸಲ ರೆಪ್ಪೆಯನ್ನಾಡಿಸುವ ಕಾಲ

33 ಕಲೆ = 1 ಮಹೂರ್ತ; 30 ಮುಹೂರ್ತ = 1 ದಿನ = 24 ಗಂಟೆ

$$1 \text{ ಕಲಾ} = \frac{24 \text{ ಗಂಟೆ} \times 60 \text{ ನಿಮಿಷ} \times 60 \text{ ಸೆಕೆಂಡು}}{30 \text{ ಮುಹೂರ್ತ} \times 33 \text{ ಕಲೆ}} = 87 \text{ ಸೆಕೆಂಡುಗಳು.}$$

ಪರಮಾತ್ಮನ ಸೃಷ್ಟಿಯೇ ಬಹಳ ಕುತೂಹಲಕರವಾದ್ದು.

ನಿಮೇಷ = ಮನುಷ್ಯನು ಒಂದು ರಪ್ಪೆ ಹೊಡೆಯುವ ಸಮಯ = 87/450
= 1/5 ಸೆಕೆಂಡು,

1 ಸೆಕೆಂಡಿನಲ್ಲಿ 5 ಸಲ ರೆಪ್ಪೆ ಹೊಡೆಯುತ್ತಾನೆ.

**526. ಕಾಷ್ಠಾಯೈ ನಮಃ**

ಇದು ಸಮಯದ ಗಣನೆಯಲ್ಲಿ ಬರುತ್ತದೆ,

1 ಕಾಷ್ಠಾ = 15 ನಿಮೇಷ - 15 ಸಲ ಮನುಷ್ಯರು ರೆಪ್ಪೆ ಹೊಡೆಯುವ ಸಮಯ, ನಿಮೇಷವು ಸಮಯದ ಅತಿ ಚಿಕ್ಕಭಾಗ,

ಸಮಯವೆಲ್ಲ ಅಂದರೆ ಕಾಲವೇ ಪರಮಾತ್ಮನೇ, ಇಂತಹ ಸೂಕ್ಷ್ಮರೀತಿಯ ಸಮಯವೇ ಪರಮಾತ್ಮ. ಅವನಿಗೆ ನಮಸ್ಕಾರಗಳು.

**527. ಅವಿಲಿಪ್ತಾಯ ನಮಃ**

ಇಂತಹ ಸೂಕ್ಷ್ಮತಮ ಸಮಯದಲ್ಲಿಯೂ ಪರಮಾತ್ಮನು ಅಂಟಿಕೊಳ್ಳುವವನಲ್ಲ, ಹೊರಗಿರುತ್ತಾನೆ. ಅದೇ ಅವನಾಗಿದ್ದರೂ ಅವನು ಹೊರಗುಳಿಯುತ್ತಾನೆ.

**528. ಮುಹೂರ್ತಪ್ರಹರಾದಿಕಾಯ ನಮಃ**

1 ಮುಹೂರ್ತ ಎಂದರೆ 33 ಕಲೆಗಳು = 24/30 ಗಂಟೆಗಳು, 48 ನಿಮಿಷಗಳು,

ಪ್ರಹರ = 3 ಗಂಟೆಗಳ ಕಾಲ = ಏಳೂವರೆ ಗಳಿಗೆಗಳು,

24 ಗಂಟೆ = 60 ಗಳಿಗೆಗಳು,

ಕಾಲದ ಮಾಪನವಾದ್ದರಿಂದ ಕಾಲದೇವನೇ ಇವನು, ಅದರಿಂದ ಪರಮಾತ್ಮನಿಗೆ ನಮಸ್ಕಾರಗಳು.

529. ಅಹೋರಾತ್ರಾಯ ನಮಃ

ಹಗಲು, ರಾತ್ರಿಗಳು ಪರಮಾತ್ಮನೆ. ಈ ಹಗಲು ರಾತ್ರಿಗಳು ಸೂರ್ಯನ ಸುತ್ತಲೂ ಭೂಮಂಡಲವು ತಿರುಗುವುದರಿಂದ ನಡೆಯುತ್ತದೆ. ಇದು ನಿರಂತರ. ಯಾವಾಗ ಪ್ರಾರಂಭವಾಯಿತೋ ಯಾವಾಗ ಅಂತಗೊಳ್ಳುವುದೋ ಪರಮಾತ್ಮನೊಬ್ಬನಿಗೇ ಗೊತ್ತು.

530. ತ್ರಿಸಂಧ್ಯಾಯೈ ನಮಃ

ಸೂರ್ಯೋದಯವಾಗುವ ಮತ್ತು ರಾತ್ರಿ ಕೊನೆಯಾಗುವ ಕಾಲ - ಪ್ರಾತಃ ಸಂಧ್ಯೆ

ಮಧ್ಯಾಹ್ನ ಸಂಧ್ಯೆ.

ಸೂರ್ಯಾಸ್ತವಾಗುವ ಮತ್ತು ರಾತ್ರಿ ಶುರುವಾಗುವ ಸಮಯ - ಸಾಯಂ ಸಂಧ್ಯೆ.

ಈ ಸಮಯಗಳಲ್ಲಿ ಸೂರ್ಯನಿಗೆ ಅರ್ಘ್ಯಗಳನ್ನು ಕೊಡುತ್ತೇವೆ. ರಾಕ್ಷಸರು ಈ ಕಾಲದಲ್ಲಿ ಸೂರ್ಯನನ್ನು ಪೀಡಿಸುತ್ತಾರೆ. ಈ ಅರ್ಘ್ಯಗಳು ಆ ಪೀಡೆಯನ್ನು ನಿವಾರಿಸುತ್ತವೆ. ಈ ಸಮಯಗಳು ಬಹಳ ಪ್ರಶಸ್ತವಾದ್ದು. ಪ್ರಾತಃ ಸಂಧ್ಯೆಯ ಸಮಯದಲ್ಲಿ ಅರುಣೋದಯ, ಬ್ರಾಹ್ಮೀ ಮುಹೂರ್ತಗಳು ಬರುತ್ತವೆ. ಇವು ಅತ್ಯಂತ ಪ್ರಶಸ್ತವಾದುವುಗಳು.

ಈ ಸಂಧ್ಯೆಗಳಲ್ಲಿ ಗಾಯಿತ್ರಿ, ಸಾವಿತ್ರಿ, ಸರಸ್ವತಿ ರೂಪದಲ್ಲಿ ದೇವಿಯನ್ನು ಆರಾಧಿಸುತ್ತೇವೆ.

ಮಂದೇಹಾರುಣ ದ್ವೀಪವಾಸಿಗಳಾದ ರಕ್ತಬೀಜಾಸುರ ವಂಶೋತ್ಪನ್ನರಾದ ರಾಕ್ಷಸರು ಪ್ರತಿ ದಿನದಲ್ಲಿಯೂ ಸೂರ್ಯನ ದಾರಿಯನ್ನು ಅಡ್ಡ ಕಟ್ಟುವರೆಂದು, ಅವರನ್ನು ತತ್ಕಾಲದಲ್ಲಿ ಸಂಹರಿಸಲು ದ್ವಿಜರು ಕೊಡುವ ಅರ್ಘ್ಯ - ಉದಕಗಳು ಸಹಾಯವಾಗುತ್ತವೆಂದು ಶಾಸ್ತ್ರಗಳು ಹೇಳುತ್ತವೆ. ಈ ರಾಕ್ಷಸರ ತೊಂದರೆಗಳು ಮೂರು ಸಂಧ್ಯಾಕಾಲದಲ್ಲಿ ಒದಗುತ್ತವೆಯೆಂದೂ ಆಗಾಗ್ಯೆ ಇವರಿಗೆ ಹುಟ್ಟು ಸಾವುಗಳು ಪ್ರಾಪ್ತವಾಗುವುವೆಂದು ಶಾಸ್ತ್ರಗಳು ಹೇಳುತ್ತವೆ. ಸಾಮಾನ್ಯ ಮಾತುಗಳಿಗೇ ಶಕ್ತಿಯಿರುವುದರಿಂದ ಮಂತ್ರಗಳಿಗೆ ಬಹಳ ಶಕ್ತಿಯಿರುತ್ತೆ ಎಂದು ಒಪ್ಪಲೇ ಬೇಕು.

*ಏಕಂ ವಾಹನನಾಶಾಯ ಏಕಂ ಶಸ್ತ್ರಾಸ್ತ್ರ ಹೇತವೇ ।*
*ಅಸುರಾಣಾಂ ವಧಾರ್ಥಾಯ ಪ್ರಾಯಶ್ಚಿತ್ತಂ ಚತುಷ್ಟಯಂ ॥*

ಎಂದು 4 ಅರ್ಘ್ಯಗಳಿಗೆ ಕಾರಣವಿದೆ.

ರಾಕ್ಷಸರ ಹತ್ಯೆಯು ಬ್ರಹ್ಮ ಹತ್ಯೆ ಎಂದು ಪರಿಗಣಿಸಿದಾಗ, ಅದಕ್ಕಾಗಿಯೇ ಮೇಲೆ ಎದ್ದು ನೀರನ್ನು ಸುತ್ತು ಕಟ್ಟಿ ಪ್ರದಕ್ಷಿಣೆ ಮಾಡುವುದು. ನೀರನ್ನು ಸುತ್ತು ಕಟ್ಟುವುದರಿಂದ ಚತುಸ್ಸಮುದ್ರಿತವೆಂತಲೂ ಪ್ರದಕ್ಷಿಣೆಯಿಂದ ಬ್ರಹ್ಮಹತ್ಯಾ ದೋಷಕ್ಕೆ ಪ್ರಾಯಶ್ಚಿತ್ತ ರೂಪ ಭೂಪ್ರದಕ್ಷಣೆ ಎಂತಲೂ ಶಾಸ್ತ್ರಗಳು ಹೇಳುತ್ತವೆ.

ಪರಮಾತ್ಮನಿಗೆ ತ್ರಿಸಂಧ್ಯಾಯ್ಯೆ ನಮಃ ಎನ್ನುವುದು ಎಷ್ಟು ಸರಿ, ಈ ಸಂಧ್ಯೆಯ ಮಹಿಮೆ ಬಹಳ.

**531. ಪಕ್ಷಾಯ ನಮಃ**

ಪಕ್ಷ - ಕಾಲದ ಮಾಪನೆಯ ಒಂದು ಅವಧಿ. ಅಮಾವಾಸ್ಯೆಯ ನಂತರದಿಂದ ಹಿಡಿದು ಪೌರ್ಣಿಮೆಯು ಪೂರ್ಣವಾಗಿ ಸೇರಿ ಆಗುವ ಅವಧಿಗೆ ಪಕ್ಷ ಎಂದು ಹೆಸರು. - ಇದಕ್ಕೆ ಶುಕ್ಲ ಪಕ್ಷ ಎಂದು ಹೆಸರು. ಈ ಕಾಲದಲ್ಲಿ ಸಂಪೂರ್ಣ ಕಪ್ಪಾದ ಚಂದ್ರನು (ಅಮಾವಾಸ್ಯೆದಿನದ್ದು) ಕ್ರಮ, ಕ್ರಮವಾಗಿ ಬೆಳಗುತ್ತಾ ಪೌರ್ಣಿಮೆಯ ದಿನ ಪೂರ್ಣವಾಗಿ ಪ್ರಕಾಶಿಸುತ್ತಾನೆ.

ಇದೇ ರೀತಿ ಪೌರ್ಣಿಮೆಯ ದಿನದ ನಂತರದಿಂದ ಅಮಾವಾಸ್ಯೆಯ ವರೆಗಿನ ಸಮಯದಲ್ಲಿ ಸಂಪೂರ್ಣ ಪ್ರಕಾಶದಿಂದ ಕ್ರಮವಾಗಿ ಕಡಿಮೆಯಾಗುತ್ತ, ಪೌರ್ಣಿಮೆಯ ಪೂರ್ಣಚಂದ್ರನು ಅಮಾವಾಸ್ಯೆ ದಿನ ಪೂರ್ಣ ಕಪ್ಪಾಗುತ್ತಾನೆ, ಈ ಸಮಯಕ್ಕೆ ಕೃಷ್ಣಪಕ್ಷವೆಂದು ಹೆಸರು.

ಈ ರೀತಿ ಪಕ್ಷಗಳು 15 ದಿನದ ಕಾಲದ್ದು. ಎರಡು ಪಕ್ಷಗಳು. ಚಂದ್ರನ ಕಲೆಗಳ ಮೇಲೆ ಹೆಸರಿಸಿದ್ದಾರೆ.

ಪಕ್ಷ - ಎಂದರೆ ಭಾಗ. ಎಡಭಾಗ, ಬಲಭಾಗ, ಎಂದು ಎರಡು ಭಾಗಗಳು.

ಪಕ್ಷ - ಸ್ವ - ವಿಭಾಗ, ಎದರು ಭಾಗಗಳು - ವಿರೋಧ ಪಕ್ಷಗಳು.

ಪಕ್ಷ - ಎಂದರೆ ಪ್ರತಿಪಾದನೆ, ತರ್ಕದ ರೀತಿ ಒಂದು ಭಾಗ,

ಪಕ್ಷ - ಎಂದರೆ ರೆಕ್ಕೆ, ಹಕ್ಕಿಗಳ ರೆಕ್ಕೆಗಳು.

ಶುಕ್ಲಪಕ್ಷ, ಕೃಷ್ಣಪಕ್ಷಗಳನ್ನು ನಿರ್ಣಯಿಸುವ ಚಂದ್ರನು ಪರಮಾತ್ಮನ ಶರೀರದಿಂದ ಬಂದವನು, ಶರೀರದಲ್ಲಿ ಇರುವವನು. ''ಚಂದ್ರಮಾ ಮನಸೋ ಜಾತಃ'' ಎಂದು ಪುರುಷ ಸೂಕ್ತದಲ್ಲಿ ಉಲ್ಲೇಖಿಸುತ್ತೇವೆ.

**532. ಮಾಸಾಯ ನಮಃ**

ಶುಕ್ಲಪಕ್ಷ, ಕೃಷ್ಣಪಕ್ಷಗಳು ಸೇರಿದರೆ ಒಂದು ಮಾಸವಾಗುತ್ತದೆ. ಪಕ್ಷಗಳೇ ಕಾಲದ ಮಾಪನೆ, ಕಾಲದೇವನೇ ಈ ಸಮಯದ ದೇವರು.

ಹಾಗೆಯೇ ಮಾಸದಲ್ಲಿ ಸಮಯವು ಇರುವುದರಿಂದ ಪರಮಾತ್ಮನನ್ನು ಮಾಸಾಯ ನಮಃ ಎಂದು ಹೇಳಿದೆ. ಮಾಸದ ಅವಧಿ - ಮೂವತ್ತು

ದಿನಗಳು - ಪ್ರತಿ ತಿಂಗಳಿಗೂ ಒಂದೊಂದು ಹೆಸರು ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತೀಕ, ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುಣ ಈ ಮಾಸಗಳ ಹೆಸರು ಪೌರ್ಣಮಿಯ ದಿನ ಯಾವ ನಕ್ಷತ್ರವಿರುವುದೋ ಅದರ ಮೇಲೆ ಇರುತ್ತದೆ.

ಚೈತ್ರಮಾಸ - ಚಿತ್ತಾ ನಕ್ಷತ್ರ, ಪೂರ್ಣಿಮೆಯ ದಿನ ಇರುತ್ತದೆ. ಅದರಂತೆ ವಿಶಾಖ - ವೈಶಾಖ, ಜ್ಯೇಷ್ಠ - ಜ್ಯೇಷ್ಠಮಾಸ, ಪೂರ್ವಾಷಾಡ / ಉತ್ತರಾಷಾಢ - ಆಷಾಢಮಾಸ, ಶ್ರವಣ - ಶ್ರಾವಣ, ಪೂರ್ವಾಭಾದ್ರ / ಉತ್ತರಾಭಾದ್ರ - ಭಾದ್ರಪದ, ಅಶ್ವಿನಿ - ಅಶ್ವಯುಜ, ಕೃತ್ತಿಕೆ - ಕಾರ್ತೀಕ, ಮೃಗಶಿರಾ - ಮಾರ್ಗಶಿರ, ಪುಷ್ಯ - ಪುಷ್ಯ, ಮಖ - ಮಾಘ, ಫಲ್ಗುನಿ - ಫಾಲ್ಗುಣ.

**533. ವತ್ಸರಾಯ ನಮಃ**

ವತ್ಸರ - ಕಾಲದ ಅವಧಿ ವತ್ಸರ. ಸಂವತ್ಸರ ಎಂದರೆ ಒಂದು ವರ್ಷ. ಹನ್ನೆರಡು ತಿಂಗಳ ಅವಧಿ, ಗಣನೆಯಲ್ಲಿ ಸಂವತ್ಸರವು 365 1/4 ದಿನಗಳ ಉದ್ದವಾಗಿರುತ್ತದೆ, ಸಂವತ್ಸರಗಳಿಗೆ ಹೆಸರುಗಳಿವೆ, 60 ವರ್ಷಗಳಿಗೆ ಹೆಸರುಗಳಿವೆ, 60 ವರ್ಷಗಳ ನಂತರ ಈ ಹೆಸರುಗಳು ಪುನರಾವರ್ತನೆಯಾಗುತ್ತವೆ, ಈ ಪುನರಾವರ್ತನೆಗೆ ಪರ್ಯಾಯ ಎಂದು ಹೆಸರು.

| | | |
|---|---|---|
| 1 ಪ್ರಭವ | 21 ಸರ್ವಜಿತು | 41 ಪ್ಲವಂಗ |
| 2 ವಿಭವ | 22 ಸರ್ವಧಾರಿ | 42 ಕೀಲಕ |
| 3 ಶುಕ್ಲ | 23 ವಿರೋಧಿ | 43 ಸೌಮ್ಯ |
| 4 ಪ್ರಮೋದ | 24 ವಿಕೃತಿ | 44 ಸಾಧಾರಣ |
| 5 ಪ್ರಜೋತ್ತತ್ತಿ | 25 ಖರ | 45 ವಿರೋಧಿಕೃತ್ |
| 6 ಆಂಗೀರಸ | 26 ನಂದನ | 46 ಪರೀಧಾವಿ |
| 7 ಶ್ರೀಮುಖ | 27 ವಿಜಯ | 47 ಪ್ರಮಾದೀಚ |
| 8 ಭಾವ | 28 ಜಯ | 48 ಆನಂದ |
| 9 ಯುವ | 29 ಮನ್ಮಥ | 49 ರಾಕ್ಷಸ |
| 10 ಧಾತು | 30 ದುರ್ಮುಖಿ | 50 ನಳ |
| 11 ಈಶ್ವರ | 31 ಹೇವಿಳಂಬಿ | 51 ಪೈಂಗಳ |
| 12 ಬಹುಧಾನ್ಯ | 32 ವಿಳಂಬಿ | 52 ಕಾಳಾಯುಕ್ತಿ |
| 13 ಪ್ರಮಾಥಿ | 33 ವಿಕಾರಿ | 53 ಸಿದ್ಧಾರ್ಥಿ |

| | | |
|---|---|---|
| 14 ವಿಕ್ರಮ | 34 ಶಾರ್ವರಿ | 54 ರೌದ್ರಿ |
| 15 ವೃಷ (ವಿಷು) | 35 ಪ್ಲವ | 55 ದುರ್ಮತಿ |
| 16 ಚಿತ್ರಭಾನು | 36 ಶುಭಕೃತು | 56 ದುಂದುಭಿ |
| 17 ಸ್ವಭಾನು | 37 ಶೋಭಕೃತು | 57 ರುಧಿರೋದ್ಗಾರಿ |
| 18 ತಾರಣ | 38 ಕ್ರೋಧಿ | 58 ರಕ್ತಾಕ್ಷಿ |
| 19 ಪಾರ್ಥಿವ | 39 ವಿಶ್ವಾವಸು | 59 ಕ್ರೋಧನ |
| 20 ವ್ಯಯ | 40 ಪರಾಭವ | 60 ಅಕ್ಷಯ. |

ಹೀಗೆ 60 ಸಂವತ್ಸರಗಳು ಒಂದಾದ ಮೇಲೊಂದು ನಡೆಯುತ್ತವೆ, ನಿರಂತರ ನಡೆಯುತ್ತಲೇ ಇರುತ್ತವೆ.

ಸಂವತ್ಸರ ಎಂದರೆ ವರ್ಷ ಹಾಗೂ ಪ್ರಜಾಪತಿಯ ಹೆಸರು ಇದೆ.

ವತ್ಸರ - ವರ್ಷ.

*ಯುಗಾದಿರ್ಯುಗಭೇದಶ್ಚ ಸಂಧಿಶ್ಚ ಯುಗಸಂಧಯಃ ।*
*ನಿತ್ಯಂ ನೈಮಿತ್ತಿಕಂ ಚೈವ ಮಹಾಪ್ರಳಯ ಏವ ಚ ।।92।। (534-540)*

534. ಯುಗಾದಯೇ ನಮಃ

ಯುಗ - ಕಾಲಮಾಪನದಲ್ಲಿ ಒಂದು ದೊಡ್ಡ ಗಣನೆಯ ಭಾವ, ಅಂಶ. ಇದು ಬಹಳ ದೊಡ್ಡದು. ನಮ್ಮ ಊಹೆಗೆ ನಿಲುಕದ ವಿಚಾರ. ಹೇಗಾದರೂ ಗಣನೆಯು ಗಣನೆಯೇ, ಕೇಳಿ ಊಹೆಗೆ ಸಿಕ್ಕದೆ ಬಿಟ್ಟು ಬಿಡಬಹುದು.

ಮನುಷ್ಯನ ಒಟ್ಟು ಆಯುಸ್ಸಿನ ಪ್ರಮಾಣ = 100 ವರ್ಷಗಳು,
ಇದರಿಂದ ನಾವು ಯುಗದ ಲೆಕ್ಕಕ್ಕೆ ಹೋಗಬಹುದು.

360 (ಮನುಷ್ಯರ) ವರ್ಷಗಳು = 1 ದೇವತೆಗಳ ದಿವ್ಯವರ್ಷ
12,000 ದಿವ್ಯ ವರ್ಷಗಳು = 1 ಚತುರ್ಯುಗ

ಒಂದು ಚತುರ್ಯುಗದ ಪ್ರಮಾಣ -

| | |
|---|---|
| ಕೃತಯುಗದ ಪ್ರಮಾಣ | = 4800 ದಿ. ವರ್ಷಗಳು |
| ತ್ರೇತಾಯುಗದ ಪ್ರಮಾಣ | = 3600 ದಿ. ವರ್ಷಗಳು |
| ದ್ವಾಪರಯುದ ಪ್ರಮಾಣ | = 2400 ದಿ. ವರ್ಷಗಳು |
| ಕಲಿಯುಗದ ಪ್ರಮಾಣ | = 1200 ದಿ. ವರ್ಷಗಳು |
| | 12,000 ದಿ. ವರ್ಷಗಳು. |

ಎಂದಮೇಲೆ ಯುಗಗಳು 4 ರೀತಿಯದು, ಎಲ್ಲವೂ ಸಮಾನ ಉದ್ದ ಸಮಯದ್ದಲ್ಲ. ಬೇರೆ ಬೇರೆಯವು. ಬೇರೆ ಬೇರೆ ಸಮಯ ಪ್ರಮಾಣದವುಗಳು.

ಇದು ದೊಡ್ಡ ಪ್ರಮಾಣವಿದ್ದರೂ ಬ್ರಹ್ಮನ ದೃಷ್ಟಿಯಲ್ಲಿ ಅವನ ಆಯುಃ ಪ್ರಮಾಣದಲ್ಲಿ ಯುಗವು ಒಂದು ಚಿಕ್ಕಕಾಲದ್ದಾಗಿ ಬಿಡುತ್ತದೆ.

ಈ ಯುಗಗಳು ಪ್ರಾರಂಭದಲ್ಲಿ ಯಾವಾಗ ಆಯಿತು, ಎಂದಿನಿಂದ ಈ ಪರ್ಯಾಯಗಳು ಬರುತ್ತಿವೆ, ಎಂದಿಗೆ ಕೊನೆ ಎಂಬುದು ಪರಮಾತ್ಮನಿಗೇ ಗೊತ್ತು. ನಮ್ಮ ಪರಿವಿಗೆ ಸಿಕ್ಕುವುದಿಲ್ಲ ಎಂದಮೇಲೆ ಇದು ಪರಮಾತ್ಮನೇ. ಪರಮಾತ್ಮನೇ ಈ ಯುಗಗಳ ಸರಣಿಗಳ ಮೊದಲಿಗನು, ಅವನಿಂದಲೇ ಪ್ರಾರಂಭವಾಗ ಬೇಕಾದರೆ ಅವನ ಅಂಶ ಅಥವಾ ಅವನೇ ಇದಾಗಿರಬೇಕು. ಆದ್ದರಿಂದ ಅವನಿಗೇನೇ ಈ ನಮಸ್ಕಾರಗಳು ಸಲ್ಲುತ್ತವೆ.

ಒಂದೊಂದು ಪಿಳಿಗೆಯ ಜೀವನಕ್ಕೆ ನಾವು ಸಾಮಾನ್ಯ ಅರ್ಥದಲ್ಲಿ ಯುಗ ಎಂದು ಹೇಳುತ್ತೇವೆ. ಆಗ ನಮಗೆ ಮೇಲೆ ಹೇಳಿದ ಯುಗದ ಸಮಯ ಅರಿವಿನಲ್ಲಿರುವುದಿಲ್ಲ.

535. ಯುಗಭೇದಾಯ ನಮಃ

ಯುಗಭೇದ - ಎಂದರೆ ಯುಗಗಳನ್ನು ಬೇರ್ಪಡಿಸುವುದು. ಕೃತ, ತ್ರೇತ, ದ್ವಾಪರ, ಕಲಿಯುಗಗಳನ್ನು ಬೇರ್ಪಡಿಸುವುದು - ಅದನ್ನು ಮಾಡುವವನು ಕರ್ತೃ - ಪರಮಾತ್ಮನೆ.

ಎಂದರೆ ಯಾವ ಯುಗ ಯಾವಾಗ ಅಂತವಾಗಿ ಯಾವ ಯುಗ ಯಾವಾಗ ಪ್ರಾರಂಭವಾಗುತ್ತೆ ಎಂದು ನಿರ್ಣಯಿಸಿ ನಡೆಸುವವನು ಯಾರೋ ಅವನು ಯುಗಭೇದನು.

ಅಥವಾ ಯುಗಗಳಲ್ಲಿ ಬೇರೆ ಬೇರೆ ಭಾವನೆ, ವೈಶಿಷ್ಟ್ಯ, ಗುಟ್ಟು ಲಕ್ಷಣಗಳನ್ನು ಹಾಕುವವನು ಮತ್ತು ತಿಳಿದಿರುವವನು ಯಾರೋ ಅವನು - ಯುಗಭೇದನು.

ಈ ಅನಾದಿ ಕಾಲದಿಂದ ಅನಂತ ಕಾಲದವರೆಗೆ ಇರುವ ಅತಿ ಉದ್ದವಾದ ಸಮಯಗಳನ್ನು ವಿಂಗಡಿಸಿ, ಯುಗಗಳನ್ನು ಲಕ್ಷಣದೊಡನೆ ನಡೆಸುವವನು ಪರಮಾತ್ಮನೇ.

ಒಬ್ಬ ಬ್ರಹ್ಮನಿಗೆ ಇಷ್ಟು ದೊಡ್ಡ ಯುಗಗಳ ಸರಣಿಯಿರಬೇಕಾದರೆ ಬ್ರಹ್ಮಾಂಡದಲ್ಲಿ ನಿರಂತರ ಅನೇಕ ಬ್ರಹ್ಮರು ಬಂದು ಹೋಗಬೇಕಾದರೆ ಈ ಸಮಯದ ಪ್ರಮಾಣ ಪರಮಾತ್ಮನೊಬ್ಬನಿಗೇ ಗೊತ್ತು. ಸೃಷ್ಟಿ, ಸ್ಥಿತಿ, ಪ್ರಳಯ ಕಾಲದಲ್ಲಿಯೂ ಈ ಯುಗಮಾನವು ಇದ್ದೇ ಇರುತ್ತದೆ.

**536. ಸಂಧಯ ನಮಃ**

ಸಂಧಿ - ಎರಡು ಬೇರೆ ಬೇರೆ ಕಾಲಗಳು ಸೇರುವ ಕಾಲಕ್ಕೆ ಸಂಧಿ ಎಂದು ಹೇಳುತ್ತೇವೆ.

ಪ್ರಾತಃ ಸಂಧಿ, ಮಧ್ಯಾಹ್ನಿಕ ಸಂಧಿ, ಸಾಯಂ ಸಂಧಿ ಕಾಲ ಎನ್ನುತ್ತೇವೆ.

ಪ್ರಾತಃಕಾಲ ಮತ್ತು ಮಧ್ಯಾಹ್ನಗಳು ಸೇರುವ ಪರಿವರ್ತನೆಯಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳು ಸೇರುವ ಪರಿವರ್ತನೆಯ ಕಾಲ, ಸಾಯಂಕಾಲ ಮತ್ತು ರಾತ್ರಿ ಸೇರುವ ಕಾಲಗಳು ಸಂಧಿಕಾಲಗಳು.

ದಿನ ರಾತ್ರಿ, ರಾತ್ರಿ - ಹಗಲು ಸೇರುವ ಕಾಲಗಳು, ಸಂಧಿಕಾಲಗಳು. ಒಂದು ದಿನದಿಂದ ಇನ್ನೊಂದು ದಿನ ಬೇರ್ಪಡುವ ಕಾಲಗಳು - ಸಂಧಿಕಾಲ. ಹೀಗೆ ಮಾನುಷ ಗಣನೆಯ ಸಂಧಿಕಾಲಗಳು ಬಹಳ ಚಿಕ್ಕ ಕಾಲವಾಗಿರುತ್ತೆ. ಈ ಕಾಲವು ಪರಮಾತ್ಮನೇ ಎಂದು ಹೇಳಿದೆ.

ಸಂಧಿ - ಎಂದರೆ ಹೊಂದಾಣಿಕೆಗಳು, ಎರಡು ವಿರೋಧಿ ಪಕ್ಷಗಳು ಹೊಂದಾಣಿಯೆ ಮಾಡಿದರೆ ಅದು ಸಂಧಿ ಎನಿಸುತ್ತದೆ.

ಸಂಧಿ ಯದ್ಧಕಾಲದಲ್ಲಿ ವಿರೋಧ ಪಕ್ಷಗಳು ಮಾಡಿಕೊಳ್ಳುವ ಸಂಧಾನಕ್ಕೆ ಸಂಧಿ ಎಂದಯ ಹೇಳುತ್ತೇವೆ. ಇದಕ್ಕೆ ಒಪ್ಪಿಗೆ, ಕರಾರು, ಹೊಂದಾಣಿಕೆ ಎನ್ನುತ್ತೇವೆ.

ಸಂಧಿ - ಎಂದರೆ ಕಿಂಡಿ.

ಈ ಸಂಧಿಯಕಾಲಕ್ಕೆ ಪರಮಾತ್ಮನೇ ಕಾರಣ. ಅವನ ಅಂಶವೇ ಈ ತ್ರಿಸಂಧ್ಯೆಯಲ್ಲಿರುವುದರಿಂದ ಅವನಿಗೆ ''ಸಂಧಯೇ ನಮಃ'' ಎಂದು ಹೇಳಿದೆ.

**537. ಯುಗಸಂಧಯೇ ನಮಃ (ಸಂಧಿಭ್ಯೋ ನಮಃ)**

ಎರಡು ಯುಗಗಳು ಪರಸ್ಪರ ಸೇರುವ ಕಾಲ. ಒಂದು ಯುಗವು ಮುಗಿಯುವ ಮತ್ತು ಮುಂದಿನ ಯುಗವು ಪ್ರಾರಂಭವಾಗುವ ಕಾಲಕ್ಕೆ ಯುಗ ಸಂಧಿ ಎಂದು ಹೇಳುತ್ತೇವೆ. ಇದು ಮಹಾಪರಿವರ್ತನೆಯ ಸಮಯ. ಇದು ಪರಮಾತ್ಮನೇ ಎಂದು ಯುಗಸಂಧಿಭ್ಯೋ ನಮಃ ಎಂದು ನಮಸ್ಕರಿಸಿದೆ. ಯುಗಸಂಧಿ ಸಮಯವು ಸಂಧ್ಯೆ ಎನಿಸುತ್ತದೆ.

1. ಕೃತಯುಗದ ಸಾಯಂಸಂಧ್ಯೆಯು ತ್ರೇತಾಯುಗದ ಪ್ರಾತಃ ಸಂಧ್ಯೆಯೊಡನೆ ಮಿಲನವಾಗುತ್ತದೆ.

2. ತ್ರೇತಾಯುಗದ ಸಾಯಂಸಂಧ್ಯೆ (ದಿವ್ಯ) ದ್ವಾಪರಯುಗದ ಪ್ರಾತಃ (ದಿವ್ಯ) ಸಂಧ್ಯೆಯೊಡನೆ ಮಿಲನವಾಗುತ್ತದೆ.

3. ದ್ವಾಪರಯುಗದ ದಿವ್ಯಸಾಯಂಸಂಧ್ಯೆ ಕಲಿಯುಗದ ಪ್ರಾತಃ ಸಂಧ್ಯೆಯೊಡನೆ ಮಿಲನವಾಗುತ್ತದೆ.

4. ಕಲಿಯುಗದ ಸಾಯಂ ಸಂಧ್ಯೆ ಮುಂದಿನ ಕೃತಯುಗದ ಪ್ರಾತಃ (ದಿವ್ಯ) ಸಂಧ್ಯೆಯೊಡನೆ ಮಿಲನವಾಗುತ್ತದೆ.

ಈ ಸಂಧಿಕಾಲಗಳು ಯುಗ ಪರಿವರ್ತನೆಯಕಾಲ. ಈ ಯುಗಗಳನ್ನು ಒಂದು ಯುಗ ಚಕ್ರವೆಂದು ಭಾವಿಸಿದರೆ ಕೆಳಗೆ ಕಂಡಂತೆ ನಡೆಯುತ್ತದೆ.




538. ನಿತ್ಯಾಯ ನಮಃ

ನಿತ್ಯ - ಸದಾ ಇರುವವನು, ಪರಿವರ್ತನೆಯಿಲ್ಲದವನು, ಕಾಲ, ದೇಶಗಳಲ್ಲಿಯೂ ಸದಾ, ಯಾವಾಗಲೂ, ಎಲ್ಲಿಯೂ ವ್ಯತ್ಯಾಸ ಹೊಂದದವನು ಯಾರೋ ಅವನು ಪರಮಾತ್ಮನು, ಶಾಶ್ವತನು, ಅವಿನಾಶಿ, ನಾಶವಾಗದವನು.

ಈ ಸಕಲ ಬ್ರಹ್ಮಾಂಡಗಳಲ್ಲಿರುವೆಲ್ಲವೂ ನಾಶವಾಗತಕ್ಕವು. ಆ ಬ್ರಹ್ಮಸ್ಥಂಬ ಪರ್ಯಂತ ಸಕಲಚರಾಚರ, ಜೀವ ಕೋಟಿಯೂ ಆ ಬ್ರಹ್ಮಪಿಪೀಲಕವಾಗಿ ಎಲ್ಲರೂ ಒಂದಲ್ಲ ಒಂದು ಕಾಲದ ಪರಿಮಿತಿಯಲ್ಲಿ ಜೀವಿಸಿ, ಹುಟ್ಟಿ, ಇದ್ದು, ನಾಶವಾಗತಕ್ಕವು. ಇದರ ಸೂತ್ರಧಾರನಾದ ಪರಮಾತ್ಮ - ಪರಬ್ರಹ್ಮನೊಬ್ಬನೇ ಶಾಶ್ವತವಾಗಿ ಉಳಿಯುವವನು. ಇವನಿಗೆ ಸಮರು ಯಾರೂ ಇಲ್ಲ. ಅಸಮನು, ಅದ್ವಿತೀಯನು. ಇವನ ಹಾಗೆ ಇರುವವನು ಬೇರೊಬ್ಬರಿಲ್ಲ ಅಂದರೆ ಅದ್ವಿತೀಯನು. ನಿತ್ಯನು. ಇವನ ರೂಪ ರೇಖೆಗಳನ್ನು ಇರುವ ಕಾಲ ದೇಶಗಳನ್ನು ತಿಳಿದವರು ಯಾರೂ ಇಲ್ಲ. ಅನನ್ಯ ಶ್ರದ್ಧೆ ಮತ್ತು ಅವ್ಯಭಿಚಾರಿಣೀ ಭಕ್ತಿಯಿಂದ ಮಾತ್ರ ತಿಳಿಯಲು ಸಾಧ್ಯ. ಭಕ್ತಿಗೆ ಕಟ್ಟುಬಿದ್ದು ಪರಮಾತ್ಮನು ಸುಲಭ ಸಾಧ್ಯನಾಗುತ್ತಾನೆ. ಅದೂ ಭಕ್ತರಿಗೆ ಮಾತ್ರ. ಯಾರು ಭಗವಂತನಿಗಾಗಿ ಜೀವಿಸುವರೋ ಅಂತಹವರಿಗೆ ಮಾತ್ರ ಸಾಧ್ಯ. ನಿತ್ಯಾಯ ನಮಃ.

**539. ನೈಮಿತ್ತಿಕಾಯ ನಮಃ**

ಪ್ರಳಯಗಳಲ್ಲಿ ಎರಡು ವಿಧ. ನಿತ್ಯಪ್ರಳಯ ಅಥವಾ ನೈಮಿತ್ತಿಕ ಪ್ರಳಯ. ಇದು ಬ್ರಹ್ಮ ಸೃಷ್ಟಿಯ ಹಗಲಿನಲ್ಲಿ ನಡೆದು ರಾತ್ರಿಯಲ್ಲಿ ನಾಶವಾಗುತ್ತದೆ. ಬ್ರಹ್ಮನ ದಿನನಿತ್ಯ ನಡೆಯುತ್ತಿದೆ. ಇದರಲ್ಲಿ ಬ್ರಹ್ಮನು ನಾಶವಾಗುವುದಿಲ್ಲ. ಇತರ ಸಕಲ ಲೋಕಗಳು, ಜೀವಕೋಟಿಯು ಪರಬ್ರಹ್ಮದಲ್ಲಿ ಲೀನವಾಗುತ್ತದೆ, ನಂತರ ಬೆಳಗಾದ ಮೇಲೆ ಮತ್ತೆ ಹೊರಬಂದು ಬ್ರಹ್ಮನು ನಿದ್ರೆಯಿಂದ ಎದ್ದು ಪುನಃ ಸೃಷ್ಟಿಯನ್ನು ಆರಂಭಿಸುತ್ತಾನೆ.

ಆದರೆ ಬ್ರಹ್ಮನ ಆಯುಸ್ಸು ಮುಗಿದಾಗ ನಡೆಯುವ ಲೀನತೆ ಅಥವಾ ಪ್ರಳಯಕ್ಕೆ ಬ್ರಹ್ಮಪ್ರಳಯ ಅಥವಾ ಪ್ರಕೃತಿ ಪ್ರಳಯ ಎನ್ನುತ್ತೇವೆ. ಇದರಲ್ಲಿ ಬ್ರಹ್ಮನು ಮೊದಲ್ಗೊಂಡು ಸಕಲವೂ ಪರಬ್ರಹ್ಮದಲ್ಲಿ ಲೀನವಾಗುತ್ತವೆ. ಅಂದರೆ ಸಕಲವೂ ನಾಶಹೊಂದುತ್ತದೆ. ನಂತರ ಹೊಸ ಬ್ರಹ್ಮನು ಬಂದು ಪುನಃ ಕಾರ್ಯವನ್ನು ಮಾಡುತ್ತಾನೆ.

ಈ ನಿತ್ಯ - ನೈಮಿತ್ತಿಕ ಪ್ರಳಯ, ಬ್ರಹ್ಮ ಪ್ರಳಯಗಳು ಪರಮಾತ್ಮನ ಸಂಕಲ್ಪಕ್ಕನುಗುಣವಾಗಿ ನಡೆಯುತ್ತವೆ. ಕಾಲನ ಉದ್ದನೆಯ ರಸ್ತೆಯಲ್ಲಿ ಅದೆಷ್ಟು ನಿತ್ಯ - ನೈಮಿತ್ತಿಕ ಪ್ರಳಯ, ಬ್ರಹ್ಮ ಪ್ರಳಯಗಳು ನಡೆದಿದೆಯೋ, ನಡೆಯುವುವೋ ಇದನ್ನು ಪರಮಾತ್ಮನೊಬ್ಬನೇ ತಿಳಿದಿದ್ದಾನೆ. ಆದರಿಂದ ಪರಮಾತ್ಮನಿಗೆ ನೈಮಿತ್ತಿಕಾಯ ನಮಃ ಎಂದು ಬ್ರಹ್ಮದೇವರು ಹೊಗಳುತ್ತಾರೆ. ಎಂದ ಮೇಲೆ ಕಾಲದ ಮಹಿಮೆಯು ಗೂಢವಾದುದು. ಅದಕ್ಕೆ ಕಾಲವು ಕಾಲಾಯ ತಸ್ಮೈ ನಮಃ ಎಂದು ಪ್ರಸಿದ್ಧವಾಗಿದೆ.

ನಿಮಿತ್ತ - ಎಂದರೆ ಕಾರಣ, ನೆಪಮಾತ್ರ, ಗುರಿ.

ಮಹಾಭಾರತ ಯುದ್ಧದಲ್ಲಿ ಶ್ರೀ ಕೃಷ್ಣನು ನಾನು ಈ ಕುರುಕ್ಷೇತ್ರದಲ್ಲಿರುವವರನ್ನು ಆಗಲೇ ಪ್ರಾಣ ಹರಣ ಮಾಡಿದ್ದೇನೆ. ಇವರು ನೆಪಮಾತ್ರಕ್ಕೆ ಯುದ್ಧಕ್ಕೆ ನಿಂತಿದ್ದಾರೆ, ನೀನು ಯುದ್ಧಮಾಡಿ ಇವರನ್ನು ಗೆಲ್ಲು. ''ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥'' ಎಂದು ಅರ್ಜುನನಿಗೆ ಹೇಳಿ ಯುದ್ಧಮಾಡಲು ಹುರಿದುಂಬಿಸುತ್ತಾನೆ.

ಇದೇ ರೀತಿ ಪ್ರತಿ ಜೀವಿಯು ತನ್ನ ತನ್ನ ದೇಹದಲ್ಲಿ ನಿಂತು ಈ ಸಂಸಾರ ಸಾಗರದಲ್ಲಿ ತೇಲಿ ಮುಳುಗುತ್ತಿದೆ. ಸಂಕಲ್ಪ ಅವನದು, ನಮ್ಮದು ಏನೂ ಇಲ್ಲ. ಅವನು ಕರುಣಿಸಿದಂತೆ ಕುಣಿಯುವುದು, ನಾವು ನಿಮಿತ್ತ ಮಾತ್ರ. ಅವನು ಸೂತ್ರಧಾರ, ಅವನು ಆಡಿಸಿದಂತೆ ಕುಣಿಯುವುದು ನಮ್ಮ ಕೆಲಸ, ಕೃಪೆ ಮಾಡುವುದು ಅವನ ಇಚ್ಛೆ. ಬೇಡುವುದು ನಮ್ಮ ಕೆಲಸ. ಹೇಗೆ ನಡೆಯಬೇಕೊ ಹಾಗೆಯೇ ನಡೆಯುವುದು.

540. ಮಹಾಪ್ರಳಯಾಯ ನಮಃ

ಬ್ರಹ್ಮನ ಆಯುಸ್ಸು ಮುಗಿದಾಗ ಆಗುವ ಪ್ರಳಯಕ್ಕೆ ಬ್ರಹ್ಮಪ್ರಳಯ ಅಥವಾ ಮಹಾಪ್ರಳಯ ಎಂದು ಹೆಸರು. ಈ ಪ್ರಳಯಕಾಲದಲ್ಲಿ ಸಕಲ ಬ್ರಹ್ಮಾಂಡಗಳು ಹೇಳ ಹೆಸರಿಲ್ಲದೆ ಮಹಾವಿಷ್ಣುವಿನಲ್ಲಿ ಲೀನವಾಗುತ್ತವೆ. ಬ್ರಹ್ಮ ಸಮೇತ ಎಲ್ಲವೂ ನಾಶ ಹೊಂದುತ್ತವೆ. ಪರಮಾತ್ಮನೊಬ್ಬನೇ ತನ್ನಲ್ಲಿ ಸಕಲವನ್ನು ಪ್ರಕೃತಿ, ಪುರುಷ, ಮಾಯೆ ಮಹತ್ತತ್ವ ಮೊದಲಾದವನ್ನು ಏನನ್ನೂ ಬಿಡದೆ ತನ್ನಲ್ಲಿ ಅಡಗಿಸಿಕೊಳ್ಳುತ್ತಾನೆ. ಇದೇ ಮಹಾಪ್ರಳಯ. ಇದು ಪರಮಾತ್ಮನೇ. ಕೇವಲ ''ಕಾಲ ಅಂದರೆ ಸಮಯ'' ಕ್ಕೆ ಹೇಳಿ ತಾನೂ ಸಹ ಯೋಗನಿದ್ರೆಯಲ್ಲಿ ಹೋಗುತ್ತಾನೆ. ಮಹಾವಿಷ್ಣುವು ವಟಪತ್ರಶಾಯಿಯಾಗಿರುತ್ತಾನೆ. ಮತ್ತೆ ಸಂಪೂರ್ಣ ಪ್ರಳಯಾನಂತರ ಕಾಲದೇವನು ಮಹಾವಿಷ್ಣುವನ್ನು ಯೋಗನಿದ್ರೆಯಿಂದ ಎಚ್ಚರಿಸುತ್ತಾನೆ. ಆಗ ಪರಮಾತ್ಮನು ತನ್ನ ಸ್ವಇಚ್ಛೆಯಿಂದ ತನ್ನ ನಾಭೀಕಮಲದಲ್ಲಿ ಬ್ರಹ್ಮದೇವನನ್ನು ಸೃಷ್ಟಿಸುತ್ತಾನೆ. ಬ್ರಹ್ಮನಿಗೂ ತಾನು ಹೇಗೆ ಬಂದೆ ಎಂಬ ಅರಿವಿರುವುದಿಲ್ಲ. ತಪಸ್ಸಿನಿಂದ ತಿಳಿದು ಪರಮಾತ್ಮನ ಪ್ರೇರಣೆಯಂತೆ ಸೃಷ್ಟಿಕಾರ್ಯಕ್ಕೆ ಪ್ರಾರಂಭಿಸುತ್ತಾನೆ. ಎಂದ ಮೇಲೆ ಪರಮಾತ್ಮನ ಕೆಲಸವು ಎಷ್ಟು ಗಹನವಾದುದ್ದು, ಗೂಢವಾದುದು. ಇವನಿಗೆ ಈ ಕಾಲದಲ್ಲಿ ನಡೆದ ಕೆಲಸದ ನೆನಪಿಗೋ ಏನೋ ಎಂಬಂತೆ ''ಮಹಾಪ್ರಳಯಾಯ ನಮಃ'' ಎಂದು ಬ್ರಹ್ಮದೇವರು ನಮಸ್ಕರಿಸುತ್ತಾರೆ.

*ಕರಣಂ ಕಾರಣಂ ಕರ್ತಾ ಭರ್ತಾ ಹರ್ತಾ ತ್ವಮೀಶ್ವರಃ ।*
*ಸತ್ಕರ್ತಾ ಸತ್ಕೃತೇರ್ಗೋಪ್ತಾ ಸಚ್ಚಿದಾನಂದವಿಗ್ರಹಃ ॥67॥*

*(541-549)*

541. ಕರಣಾಯ ನಮಃ

ಕರಣ - ಎಂದರೆ ಯಾವುದಾದರೂ ಕೆಲಸ ಮಾಡುವುದಕ್ಕೆ ಬೇಕಾಗುವ ಸಾಧನ.

ಇಂದ್ರಿಯಗಳು,

ಪಂಚಾಂಗಗಳ ಒಂದು ಭಾಗ ಕರಣ,

ತಿಥಿ, ನಕ್ಷತ್ರ, ಯೋಗ, ಕರಣ, ವಾರಗಳು - ಪಂಚಾಂಗಗಳು. ಈ ಐದು ಅಂಗಗಳಿಂದ ಕೂಡಿರುವುದರಿಂದ ಪಂಚಾಂಗವೆಂದು ಹೆಸರು.

ಕರಣವೆಂದರೆ ತಿಥಿಯ ಅರ್ಧಕರಣ.

ಕರಣಗಳು 11. ಅವು, 1. ಬವ, 2. ಬಾಲವ, 3. ಕೌಲವ, 4. ತೈತಲೆ, 5. ಗರಜೆ, 6. ವಣಿಕ್, 7. ಭದ್ರೆ, 8. ಶಕುನಿ, 9. ಚತುಷ್ಪಾತ್, 10. ನಾಗವಾನ್, 11. ಕಿಂಸ್ತುಘ್ನ.

ಬವ, ಬಾಲವ, ಕೌಲವ, ತೈತಲಿ, ಗರ, ವಣಿಕ್, ಭದ್ರೆ - ಚರಕರಣಗಳು.

ಶಕುನಿ, ಚತುಷ್ಪಾತ್, ನಾಗವಾನ್, ಕಿಂಸ್ತುಘ್ನ - ಸ್ಥಿರಕರಣಗಳು.

ಸ್ಥಿರಕರಣಗಳು ಕೃಷ್ಣ ಪಕ್ಷಾಂತ್ಯದಲ್ಲಿ ಬರುತ್ತವೆ. ಮಿಕ್ಕವು ಚಕ್ರಾಕಾರವಾಗಿ ಬರುತ್ತವೆ.

ಇವೆಲ್ಲವೂ ಕಾಲಮಾಪನದಲ್ಲಿ ಸೇರಿರುವುದರಿಂದ ಮತ್ತು ಕಾಲದೇವನು ಪರಮಾತ್ಮನೇ ಆಗಿರುವುದರಿಂದ ಕರಣಾಯ ನಮಃ ಎಂದು ಅವನನ್ನು ನಮಸ್ಕರಿಸುತ್ತೇವೆ.

ಕರಣ - ಎಂದರೆ ಸಾಧನ ಎಂದು ಅರ್ಥಮಾಡಿದಾಗ -

ಪರಮಾತ್ಮನು ಸಕಲ ಕಾರ್ಯಗಳಿಗೂ ಆಧಾರಭೂತನು, ಪ್ರಚೋದಕನು. ಅವನಿಲ್ಲದೆ ಯಾವುದೂ ಸಾಧ್ಯವಿಲ್ಲ. ಅವನ ಸಂಕಲ್ಪದಿಂದಲೇ ನಮ್ಮನ್ನು ಉಪಯೋಗಿಸಿಕೊಂಡು ಅವನು ಎಲ್ಲವನ್ನು ತನ್ನ ಇಚ್ಛೆಯಂತೆ ಮಾಡುತ್ತಾನೆ. ಅಥವಾ "ನಾವು" ಎನ್ನುವಾಗ ನಾನು ಎಂಬುದು ಪರಮಾತ್ಮನನ್ನು ಸಾಧನ ವಸ್ತುವಾಗಿ ಉಪಯೋಗಿಸಿಕೊಂಡು ಕೆಲಸವನ್ನು ಮಾಡುತ್ತದೆ. ವಾಸ್ತವವಾಗಿ ಮಾಯೆಯಲ್ಲಿ ಸಿಲುಕಿ ನಾವು ಅವನಿಂದ ಮಾಡಿಸಿಕೊಂಡೆವು ಎನ್ನುತ್ತೇವೆ. ಆದರೆ ಮಾಯೆಯನ್ನು ದಾಟಿದರೆ ಆಗ ನಾವು ಯೋಚಿಸಿದರೆ ಎಲ್ಲವೂ ಅವನಿಂದಲೇ ನಡೆಯುತ್ತದೆ ಎಂಬ ಸತ್ಯವನ್ನು ಕಾಣುತ್ತೇವೆ. ಎಂತಹ ವೈಪರೀತ್ಯ. ಜ್ಞಾನ ಅಭಾವದಿಂದ ನಾವು ಏನೇನೋ ಅಂದುಕೊಳ್ಳುತ್ತೇವೆ. ಆದರೆ ಒಂದು ಸಲ ಜ್ಞಾನವು ಆವಿರ್ಭವಿಸಿದರೆ ಸತ್ಯವು ತಿಳಿಯುತ್ತದೆ. ಇದಕ್ಕೆ ಗುರುವಿನ ಕರುಣೆ ಅಗತ್ಯ. ಗುರುವಿನ ಮಹತ್ವವನ್ನು ತಿಳಿಯುವುದು, ಅವನನ್ನು ಪ್ರಾರ್ಥಿಸುವ ರೀತಿ ಎಲ್ಲವೂ ಅವಶ್ಯಕ.

*ನ ಗುರೋಽರಧಿಕಂ ನ ಗುರೋಽರಧಿಕಂ*
*ನ ಗುರೋಽರಧಿಕಂ ನ ಗುರೋಽರಧಿಕಂ ।*
*ಶಿವಶಾಸನತಃ ಶಿವಶಾಸನತಃ*
*ಶಿವಶಾಸನತಃ ಶಿವಸಾನತಃ ।।96।।*

*ಇದಮೇವ ಶಿವಂ ಇದಮೇವ ಶಿವಂ*
*ಇದಮೇವ ಶಿವಂ ಇದಮೇವ ಶಿವಂ ।*
*ಮಮ ಶಾಸನತಃ ಮಮ ಶಾಸನತಃ*
*ಮಮ ಶಾಸನತಃ ಮಮ ಶಾಸನತಃ ।।97।।*

*ಏವಂ ವಿಧಂ ಗುರುಂ ಧ್ಯಾತ್ವಾ ಜ್ಞಾನಮುತ್ಪದ್ಯತೆ ಸ್ವಯಮ್ ।*
*ತತ್ಸದ್ಗುರುಪ್ರಸಾದೇನ ಮುಕ್ತೋಽಹಂ ಇತಿ ಭಾವಯೇತ್ ।।98।।*

*ಗುರುದರ್ಶಿತಮಾರ್ಗೇಣ ಮನಃ ಶುದ್ಧಂ ತು ಕಾರಯೇತ್ ।*
*ಅನಿತ್ಯಂ ಖಂಡಯೇತ್ಸರ್ವಂ ಯತ್ಕಿಂಚಿದಾತ್ಮಗೋಚರಮ್ ॥99॥*
*( - ಗುರುಗೀತಾ)*

ಕರಣ ಎಂದರೆ ಇಂದ್ರಿಯ. ಎಂದರೆ ಇಂದ್ರಿಯಾಧಿಪತಿಯು ಪರಮಾತ್ಮನೇ. ಅದರಿಂದ ಅವನಿಗೇ ನಮಸ್ಕಾರಗಳು.

| | |
|---|---|
| ತ್ವಕ್ ಇಂದ್ರಿಯಾಧಿಪತಿ (ಅಗ್ನಿ) | ತೇಜಸ್ಸು |
| ಚಕ್ಷು | ಸೂರ್ಯ |
| ಶ್ರೋತ್ರ | ದಿಕ್ಕುಗಳು |
| ಜಿಹ್ವಾ | ಚಂದ್ರ |
| ಘ್ರಾಣ | ವಾಯು |
| ವಾಕ್ ಇಂದ್ರಿಯಕ್ಕೆ ಅಧಿಪತಿ | ಅಗ್ನಿ ದೇವರು |
| ಪಾಣಿ | ಇಂದ್ರ ದೇವರು |
| ಪಾದಗಳು | ವಿಷ್ಣು ದೇವರು |
| ಪಾಯು (ಜನನೇಂದ್ರಿಯ) | ಪ್ರಜಾಪತಿ ದೇವರು |
| ಉಪಸ್ಥ | ಮಿತ್ರ |
| ಮನಸ್ಸು | ಚಂದ್ರ |
| ಅಹಂಕಾರ | ರುದ್ರ |
| ಬುದ್ಧಿ | ಬ್ರಹ್ಮ |

ಎಂದ ಮೇಲೆ ನಮ್ಮ ಸರ್ವ ಅವಯವಗಳಲ್ಲಿಯೂ ಪರಮಾತ್ಮನು ಉಪಸ್ಥಿತನಿದ್ದಾನೆ.

ದೇಹವೇ ದೇವಾಲಯ ಎನ್ನುವುದು ಸಹಜವಾಗಿದೆ. ನಾವೇ, ನಮ್ಮ ದೇಹವೇ, ಮನಸ್ಸು, ಬುದ್ಧಿ, ನಾನು ಎಂಬುದು ಎಲ್ಲವೂ ಅವನ ಸಾಧನ ವಸ್ತುಗಳು. ಅವನು ಇದನ್ನು ಉಪಯೋಗಿಸಿಕೊಳ್ಳುತ್ತಾನೆ. ಸೂತ್ರಧಾರನು ತನ್ನ ದಾರವನ್ನು ತನ್ನ ಇಚ್ಛೆಯಂತೆ ಎಳೆಯುತ್ತಾನೆ ಮತ್ತು ಅದರಲ್ಲೇ ಸಂತೋಷಹೊಂದುತ್ತಾನೆ.

**542. ಕಾರಣಾಯ ನಮಃ**

ತನ್ನ ಕಾಮನೆಯಿಂದ ಎಲ್ಲವನ್ನು ನಡೆಸುವುದರಿಂದ ಪರಮಾತ್ಮನು "ಕಾರಣ" ಸ್ವರೂಪನಾಗುತ್ತಾನೆ. ಸಕಲ ಬ್ರಹ್ಮಾಂಡದ ಉಳಿವಿಗೆ, ಅಳಿವಿಗೆ, ಹುಟ್ಟಿಗೆ ಪರಮಾತ್ಮನೇ ಕಾರಣ.

ಕಾರಣ ಎಂದರೆ ಗುರಿ ಎಂದೂ ಅರ್ಥಮಾಡಬಹುದು.

ಕಾರಣವಿಲ್ಲದೆ ಯಾವ ಕೆಲಸವೂ ನಡೆಯುವುದಿಲ್ಲ. ಇಲ್ಲಿ ಕಾರಣ ಎಂದರೆ ಉದ್ದೇಶ ಎಂದು ಅರ್ಥಮಾಡಬಹುದು.

ಕಾರಣ - ಉದ್ದೇಶ, ಮೂಲತತ್ವ ಎಂದೂ ಅರ್ಥಮಾಡಬಹುದು.

**543. ಕರ್ತ್ರೇ ನಮಃ**

ಕರ್ತಾ - ಕರ್ತೃ - ಮಾಡುವವನು, ಕೆಲಸಮಾಡುವವನು.

ಪ್ರತಿಯೊಬ್ಬರೂ ಕೆಲಸಮಾಡುತ್ತಾರೆ. ಪ್ರತಿಯೊಂದು ಜೀವಿಯೂ ಹುಟ್ಟಿನಿಂದ - ಮರಣದವರೆಗೆ - ಏಕೇ, ಪರಮಾತ್ಮನಿಂದ ಬಂದಾಗಿನಿಂದ ಎಂದರೆ - ಕಲ್ಪಾದಿಯಿಂದ ಕಲ್ಪಾಂತದವರೆಗೆ ಅಥವಾ ಪರಮಾತ್ಮನಲ್ಲಿ ಲೀನವಾಗುವವರೆಗೆ ಏನಾದರೂ ಒಂದು ಸಂಕಲ್ಪ ಅಥವಾ ಯೋಚನೆಯನ್ನು ನೆರವೇರಿಸುತ್ತಲೇ ಇರುತ್ತದೆ. ಇದನ್ನು ಮಾಡುವುದಕ್ಕೆ ಕರ್ತೃ ಎಂದು ಹೆಸರು. ಜೀವಿಗಳು ಮಾಡುವುದೆಲ್ಲವೂ ಭಗವಂತನ ಇಚ್ಛೆಯಂತೆ ನಡೆಯುತ್ತದೆ. ಎಂದ ಮೇಲೆ ಪ್ರತಿಯೊಂದು ಜೀವಿಯಿಂದಲೂ ನಿರಂತರ ಮಾಡಿಸುವ ಕಾರ್ಯಭಾರ ಪರಮಾತ್ಮನದೇ. ಹಾಗೆಯೇ ಸಕಲ ಬ್ರಹ್ಮಾಂಡದಲ್ಲಿರುವ ಸಚರಾಚರ ವಸ್ತುಗಳ ಕೈಯಲ್ಲಿ ಅವುಗಳ ಜೀವನವನ್ನು ಹೇಗೆಯೋ ಹಾಗೆಯೇ ನಡೆಸುವ ಕರ್ತೃತ್ವ ಬಹಳ ಕಾರ್ಯಭಾರದ್ದು, ನಿರ್ವಹಿಸುವುದು ಬಹಳ ವಿಚಿತ್ರ. ಯಾವುದರಲ್ಲಿ ಯಾವುದು ಯಾವ ಕಾಲದಲ್ಲಿ ದೇಶದಲ್ಲಿ ನಡೆಯಬೇಕೋ ಅದೇ ನಡೆಯುತ್ತದೆ. ಸ್ವಲ್ಪವೂ ಬದಲಾಗುವುದಿಲ್ಲ. ಯಾವ ಗಿಡ ಮರಗಳಲ್ಲಿ ಯಾವ ಕಾಲದಲ್ಲಿ ದೇಶದಲ್ಲಿ ಯಾವ ಹೂವು, ಕಾಯಿ, ಹಣ್ಣುಗಳು ಬರಬೇಕೋ ಅದೇ ಹಾಗೆಯೇ ಬರುತ್ತದೆ. ಯಾವ ಯೋನಿಯಲ್ಲಿ ಯಾವ ಪ್ರಜೋತ್ಪತ್ತಿಯಾಗಬೇಕೋ ಅದೇ ಆಗುತ್ತದೆ. ಇತರ ಯೋನಿಯದು ನಡೆಯುವುದಿಲ್ಲ. ಪ್ರತಿ ಯೋನಿಯ ಪ್ರತಿ ಜೀವ ಧರಿಸುವ ದೇಹ - ಅದರ ಭಾಗಗಳು ವಿಶಿಷ್ಟ ರೀತಿಯಲ್ಲಿ ನಡೆದೇ ನಡೆಯುತ್ತದೆ. ಇಂತಹ ಪರಮಾದ್ಭುತ ಶಕ್ತಿಯುಳ್ಳ ಪರಮಾತ್ಮನನ್ನು ಎಷ್ಟು ಕೊಂಡಾಡಿದರೂ ಸಾಲದು.

ಇಷ್ಟೇ ಅಲ್ಲ, ಆಯಾ ಜೀವಿಗಳ ಅವಶ್ಯಕತೆಯನ್ನು ಪೂರ್ಣಗೊಳಿಸುವ ಪರಮಾತ್ಮನ ಚತುರತೆ ಬಹಳ ವಿವೇಕಯುತವಾದ್ದು, ವಿಶಾಲವಾದ್ದು. ಸಕಲ ಪ್ರಪಂಚದ ಸಕಲ ಜೋಡಣೆಯ ಸಂಯೋಗ, ವಿಯೋಗಗಳು ಬಹಳ ವಿಚಿತ್ರ. ಇಂತಹವುಗಳ ಕರ್ತೃವು ಭಗವಂತನಿಗಿಂತ ಬೇರೆ ಯಾರೂ ಇಲ್ಲ. ಅವನು ಅದ್ವಿತೀಯನು. ಕರ್ತ್ರೇ ನಮಃ ಎಂದು ಹೇಳುವುದು ಇವನಿಗೇನೆ.

**544. ಭರ್ತ್ರೇ ನಮಃ**

ಭರ್ತಾ - ಎಂದರೆ ಕಾಪಾಡುವವನು. ಒಂದು ಜೀವದ ಆಗು ಹೋಗುಗಳನ್ನು ನಿರಂತರ ನೋಡಿಕೊಳ್ಳುವವನು.

ಭರ್ತೃ - ಪತಿ, ಯಜಮಾನ, ಒಡೆಯ, ನಾಯಕ, ಸೃಷ್ಟಿಕರ್ತ.

ಸಮಾಜದಲ್ಲಿ ಪತಿಯು ತನ್ನ ಹೆಂಡತಿ ಮಕ್ಕಳನ್ನು ಅವರ ಜೀವನದಲ್ಲಿ ಆಗು ಹೋಗುಗಳನ್ನು ನೋಡಿಕೊಂಡು ಲಾಲನೆ ಪಾಲನೆಗಳನ್ನು ಮಾಡುವುದು ಅವನ ಆದ್ಯ ಧರ್ಮ, ಗುರಿ, ಕರ್ತವ್ಯ.

ಭರ್ತ - ಯಜಮಾನ, ಎಂದರೆ ಒಂದು ಗುಂಪಿನ ಮುಖ್ಯಸ್ಥ. ಅದರ ಆಗು ಹೋಗುಗಳನ್ನು ನೋಡಿಕೊಂಡು ತನಗೆ ವಹಿಸಿರುವ ಕಾರ್ಯಗಳನ್ನು ಧರ್ಮ ರೀತ್ಯಾ ನಡೆಸುವವನು.

ಭರ್ತಾ - ನಾಯಕ - ಎಂದರೆ ಒಂದು ಗುಂಪಿನ ಜನರಿಗೆ ಮುಖ್ಯನಾದವನು. ಅವನು ಎಲ್ಲರಿಗೂ ಮಾರ್ಗದರ್ಶನ ನೀಡುತ್ತಾ ಅವರ ಯೋಗಕ್ಷೇಮಗಳನ್ನು ನೋಡಿಕೊಳ್ಳುತ್ತಾನೆ.

ಭರ್ತಾ - ಸೃಷ್ಟಿಕರ್ತಾ - ಬ್ರಹ್ಮ.

ಸಕಲ ಭೂಮಂಡಲ - ಲೋಕಗಳಲ್ಲಿ ಪ್ರಜೆಗಳನ್ನು ಸಚರಾಚರ ವಸ್ತುಗಳನ್ನು - ಜೀವಿಗಳನ್ನು, ಪ್ರತಿ ಯೋನಿಯ ಜೀವಿಗಳನ್ನು ಸೃಷ್ಟಿಮಾಡಿ, ಅವುಗಳ ಹುಟ್ಟು, ಜೀವನ, ನಾಶ ಮುಂತಾದವುಗಳನ್ನು ನಡೆಸುವವನು ಬ್ರಹ್ಮ. ಈ ಎಲ್ಲ ಕಾರ್ಯಗಳಲ್ಲಿಯೂ, ಎಲ್ಲ ಕಾಲ ದೇಶಗಳಲ್ಲಿಯೂ, ಪ್ರತಿ ಜೀವಿಯಲ್ಲಿಯೂ ಸದಾ ನಿರಂತರ ಅಲ್ಲಲ್ಲಿ ಕುಳಿತು ಬುದ್ಧಿ ಮನಸ್ಸುಗಳಿಂದ ಪ್ರಚೋದಿಸುತ್ತಾ, ಸಂಕಲ್ಪಗಳನ್ನು ನೆರವೇರಿಸುತ್ತಿರುವವನು - ಪರಮಾತ್ಮನೇ. ಇದು ಮನಸ್ಸಿಗೆ ಬಂದ ಕೂಡಲೆ ಅವನು ಎಂತಹ ಮಹಾಮಹಿಮನು, ವಿಚಾರವಂತನು, ಚತುರನು, ಶಕ್ತಿಶಾಲಿಯಾದವನು, ತನ್ನ ಎಲ್ಲವನ್ನು ಪ್ರತಿಯೊಂದು ಕಡೆಯೂ ಯಾವ ರೀತಿ ಹರಡಿರಬಹುದು - ಎಂತೆಲ್ಲ ಆಶ್ಚರ್ಯ, ವಿಸ್ಮಯಗಳು ಉಂಟಾಗುತ್ತವೆ.

ತನ್ನ "ಭರ್ತಾ"ತನದ ಕಾರ್ಯವನ್ನು ನಿರ್ವಹಿಸುವ ಮಹಾಮಹಿಮನಾದ ಪರಮಾತ್ಮನು ಅದ್ವಿತೀಯನು, ಅಸಮನು ಎಂದು ನಂಬಿಕೆ ತಾನಾಗಿಯೇ ಬರುತ್ತದೆ. ಆಗಲೇ ಅವನನ್ನು ಭರ್ತ್ರೇ ನಮಃ ಎಂದು ನಮಸ್ಕರಿಸುವುದು.

**545. ಹರ್ತ್ರೇ ನಮಃ**

ಬಂದ ಅನಿಷ್ಟವನ್ನು ಪರಿಹರಿಸುವವನು ಯಾರೋ ಅವನು ಪರಮಾತ್ಮ. ನಾವು ಸಹ ಅನೇಕ ಅನಿಷ್ಟ, ಕಷ್ಟ, ನಷ್ಟಗಳನ್ನು ಪರಿಹರಿಸಿಕೊಳ್ಳುತ್ತೇವೆ. ಇತರರದನ್ನು ಪರಿಹರಿಸುತ್ತೇವೆ. ಅದೂ ಸಹ ಭಗವಂತನು ಕೊಡುವ ಪ್ರಚೋದನೆ, ಬುದ್ಧಿ, ಮನಸ್ಸು, ಸಾಧನೆಗಳ ಸಹಾಯದಿಂದಲೇನೆ.

ಲೋಕದ, ಬ್ರಹ್ಮಾಂಡದ ಸಕಲ ಚರಾಚರ ವಸ್ತುಗಳಿಗೆ, ಪ್ರತಿ ಜೀವಿಗಳಿಗೆ ಬರುವ, ಬಂದ, ಬರಬಹುದಾದ ಅನಿಷ್ಟಗಳನ್ನು ಪರಿಹರಿಸುವವನು,

ಭಗವಂತನೊಬ್ಬನೇ. ಸಕಲರ ಭಾರವನ್ನು ಹೊತ್ತುಕೊಂಡಿರುವವನು ಅವನೊಬ್ಬನೇ. ಇಷ್ಟೇ ಅಲ್ಲ ಸಕಲರಿಗೂ ಇಷ್ಟಾರ್ಥಗಳನ್ನು ಕೊಡುವ ಭಾರವನ್ನು ಹೊತ್ತುಕೊಂಡಿರುವವನು ಅವನೊಬ್ಬನೇ ಹೊರತು ಬೇರೆಯವರಲ್ಲ.

ಎಲ್ಲರ ಮನಸ್ಸನ್ನು ತನ್ನ ಕಡೆಗೆ ಹರಣಮಾಡುವವನು ಚೋರಾಗ್ರಗಣ್ಯ ಚಕ್ರವರ್ತಿಯಾದ ಪರಮಾತ್ಮನೇ! ಇವನಿಗಿಂತ ದೊಡ್ಡ ಹರ್ತನಿಲ್ಲ, ಬೇರೊಬ್ಬರಿಲ್ಲ. ಅದ್ವಿತೀಯ ಪರಾಕ್ರಮಿ, ಸಮಯದಲ್ಲಿ ತನ್ನ ಈ ಸಂಕಲ್ಪವನ್ನು ನೆರವೇರಿಸುತ್ತಾನೆ.

ಭಕ್ತರ ಮನಸ್ಸನ್ನು ಪ್ರಚೋದಿಸುವವನು ಇವನೇ! ಅತಿ ದೊಡ್ಡ ಪರಾಕ್ರಮಿ. ಇವನು ಸಮಯದಲ್ಲಿ ತನ್ನ ಭಕ್ತರನ್ನು ರಕ್ಷಿಸುವ, ಪ್ರೋತ್ಸಾಹ ಕೊಡುವ ಸರ್ವಶಕ್ತನು, ಭಕ್ತರು ಕೇಳಿದುದನ್ನು ಕೊಡುವವನು - ಪರಮಾತ್ಮನೊಬ್ಬನೇ. ಮತ್ತೆ ಅವರನ್ನು ಸಾಲೋಕ್ಯ, ಸಾಯುಜ್ಯ, ಸಾಮಿಪ್ಯ, ಸಾರೂಪ್ಯ ಪದವಿಯ ಕಡೆಗೆ, ಪುನರಾವೃತಿರಹಿತ ಲೋಕಕ್ಕೆ ಹರಣಮಾಡುವವನು ಭಗವಂತನೊಬ್ಬನೆ. ಅದರಿಂದ ಅವನನ್ನು ಎಷ್ಟು ಸಲ ಹರ್ತಾ ಎಂದು ನಮಸ್ಕರಿಸಿದರೂ ಸಾಲದು.

**546. ಈಶ್ವರಾಯ ನಮಃ**

ಪರಮಾತ್ಮನು ಸಕಲಕ್ಕೂ ಈಶ್ವರನು, ಪ್ರಧಾನನು, ಒಡೆಯನು. ತಾನು ಸಕಲರ ಹೃದಯಸ್ಥಾನದಲ್ಲಿ ಕುಳಿತು ಬುದ್ಧಿ ಮನಸ್ಸುಗಳನ್ನು ಪ್ರಚೋದಿಸುತ್ತಾ ಸಂಸಾರ ಸಾಗರದಲ್ಲಿ ಮುಳುಗಿಸುತ್ತಾ ತೇಲಿಸುತ್ತಾ, ನಡೆಸುತ್ತಾನೆ. ಮಾಯೆಯಿಂದ ಯಾರೂ ಹೊರಗಿನವರಲ್ಲ.

*ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।*
*ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥*

*ಗೀತಾ - ಶ್ಲೋಕ 6, ಅಧ್ಯಾಯ 18.*

ಎಂದು ಭಗವದ್ಗೀತೆಯಲ್ಲಿ ಅರ್ಜುನನಿಗೆ ಬೋಧಿಸುತ್ತಾನೆ. ಇದರಿಂದ ಪರಮಾತ್ಮನು ನಿರಂತರ ಜೀವಿಗಳ ಮೇಲೆ ಹೇಗೆ ತನ್ನ ಒಡೆತನವನ್ನು ಯಾವ ರೀತಿ ನಡೆಸುತ್ತಾನೆ ಎಂದು ವ್ಯಕ್ತವಾಗುತ್ತದೆ. ಅವನ ಮಾಯೆ ದುರತ್ಯಯಾ ಎಂದೂ ಹೇಳಿದ್ದಾನೆ. ಇದರಿಂದ ಹೊರಬರಬೇಕಾದರೆ ಅವನ ಕೃಪೆಯೇ ಬೇಕು.

ಪರಮಾತ್ಮನೇ ಸರ್ವೇಶ್ವರನು, ಸಕಲೇಶ್ವರನು, ಸಕಲ ಬ್ರಹ್ಮಾಂಡಕೋಟಿ ನಾಯಕನು. ತಾನೇ ಸ್ವಯಂ ಈಶ್ವರನಾಗಿ ನಡೆಸುತ್ತಾನೆ.

ಈಶ್ವರ - ಶಿವ, ಶಂಕರ, ಪರಮಾತ್ಮ ಎಂದೆಲ್ಲ ಅರ್ಥಮಾಡಬಹುದು ಹಾಗೂ ಈಶ್ವರ ಎಂದರೆ ದೊಡ್ಡವನು, ಸ್ವಾಮಿ, ಒಡೆಯ, ಅರಸ, ರಾಜ ಎಂದೂ ಹೇಳಬಹುದು.

ಏನೇ ಅರ್ಥ ಮಾಡಿದರೂ ಪರಮಾತ್ಮನೆಂದು ಅರ್ಥಮಾಡುವುದೇ ಸರ್ವೋತ್ತಮವಾದ, ಸರ್ವೋನ್ನತವಾದ ಅರ್ಥ.

''ಈಶ್ವರಾಯ ನಮಃ'' ಎಂದರೆ ಮುಟ್ಟುವುದು ಆ ಪರಮಾತ್ಮನಿಗೇನೆ.

ಪರಮಾತ್ಮನ ಮಾಯೆಯು ಬಹಳ ವಿಚಿತ್ರವಾದುದು. ಸಾಕ್ಷಾತ್ ಶಿವನನ್ನೇ ಈ ಮಾಯೆಯು ಮೋಹಿನೀ ರೂಪದಲ್ಲಿದ್ದ ವಿಷ್ಣುವನ್ನು ಹಿಂಬಾಲಿಸುವ ಹಾಗೆ ಮಾಡಿತು. ಇನ್ನು ಸಾಮಾನ್ಯರಾದ ಜೀವಿಗಳ ಪಾಡೇನು, ಇದಕ್ಕೇನೆ ಕೃಷ್ಣನು ''ಮಮ ಮಾಯಾ ದುರತ್ಯಯಾ'' ಎಂದು ಗೀತೆಯಲ್ಲಿ ಹೇಳಿದ್ದಾನೆ.

ಆದರೆ ಪರಮ ಭಕ್ತರಾದವರು ಇದನ್ನು ಸುಲಭವಾಗಿ ದಾಟಿ ಹೊರಬರುತ್ತಾರೆ. ಇದಕ್ಕೆ ಭಗವಂತನ ಪರಮಕೃಪಯೇ ಕಾರಣ.

547. ಸತ್ಕರ್ತ್ರೇ ನಮಃ

ಒಳ್ಳೆಯ ಮತ್ತು ಸಾತ್ವಿಕ ಗುಣಗಳಿಂದ ಕೂಡಿದ ಕಾರ್ಯಗಳನ್ನು ಮಾಡುವವನಾದ್ದರಿಂದ ಭಗವಂತನಿಗೆ ''ಸತ್ಕರ್ತ್ರೇ ನಮಃ'' ಎಂದು ಹೇಳಿದೆ.

ಪರಮಾತ್ಮನ ಉದ್ದೇಶವೇ ಸಾತ್ವಿಕ ಕಾರ್ಯಗಳನ್ನು ಮಾಡುವುದು ಮತ್ತು ಜೀವಿಗಳಿಂದ ಮಾಡಿಸುವುದು. ಅದರಿಂದ ಅವುಗಳನ್ನು ಉದ್ಧಾರ ಮಾಡುವುದು.

ಸಕಲ ಬ್ರಹ್ಮಾಂಡಗಳನ್ನು ಅವುಗಳಲ್ಲಿರುವ ಎಲ್ಲವನ್ನು ಪರಮಾತ್ಮನೇ ತನ್ನ ಲೀಲೆಗಾಗಿ ರಚಿಸಿದ್ದಾನೆ. ಅದರಲ್ಲಿ ಪುರುಷ, ಪ್ರಕೃತಿ ಮತ್ತು ಮಾಯೆಯನ್ನು ಬಿಟ್ಟಿರುತ್ತಾನೆ. ಇವುಗಳು ಪಂಚಭೂತಗಳಿಂದ ವಿವಿಧ ರೂಪದಲ್ಲಿರುವ ಪ್ರಪಂಚದೊಡನೆ ಮತ್ತು ಸತ್ವ, ರಜೋ, ತಮೋ ಗುಣಗಳೊಡನೆ ಸಂಯೋಗಗಳಿಂದ ವಿವಿಧ ಪ್ರಕಾರದ ಸಂಸ್ಕಾರಗಳನ್ನು ಪಡೆಯುತ್ತವೆ. ಆತ್ಮನು ಶುದ್ಧನೇ ಆದರೂ ಸಂಸ್ಕಾರಗಳು ಏಕ ರೂಪದಲ್ಲಿರುವುದಿಲ್ಲ. ಅದರಿಂದ ಬೇರೆ ಬೇರೆ ಆತ್ಮಗಳು ಬೇರೆ ಬೇರೆ ಸಂಸ್ಕಾರ ಹೊಂದಿ ಸಂಸಾರ ಸಾಗರದಲ್ಲಿ ತೇಲುತ್ತಾ, ಮುಳುಗುತ್ತಾ ಇರುತ್ತವೆ. ಪರಮಾತ್ಮನು ಸತ್ಕರ್ತನಾದರೂ ಅದರ ಪ್ರಭಾವವೂ ನೂರಕ್ಕೆ ನೂರು ಭಾಗ ಹೊರಪಡುವುದಿಲ್ಲ. ಈ ಕಾರಣದಿಂದ ಮಾಯಾಜಾಲವೇ ಮೇಲೇರುತ್ತದೆ. ಹೇಗಾದರೂ ಪರಮಾತ್ಮನು (ಆತ್ಮನೂ ಸಹ) ಸತ್ಕರ್ತನೇ. ಅದಕ್ಕೆ ಸತ್ಕರ್ತ್ರೇ ನಮಃ ಎಂದು ನಮಸ್ಕರಿಸುವುದು.

548. ಸತ್ಕೃತೇ ಗೋಪ್ತ್ರೇ ನಮಃ

ಸತ್ - ಸಾತ್ವಿಕ, ಕೃತೇ - ಕಾರ್ಯಗಳನ್ನು, ಗೋಪ್ತ್ರೇ - ಕಾಪಾಡುವವನು. ಸಾತ್ವಿಕ ಕಾರ್ಯಗಳನ್ನು ಮಾಯೆಯಿಂದ ಹೊರಪಡಿಸಿ ಕಾಪಾಡುವವನು.

ಪ್ರಕೃತಿ, ಪುರುಷ, ಆತ್ಮ ಸಂಯೋಗದಿಂದ ಜೀವಿಗಳು ಮಾಯೆಯಿಂದ ದಾಟುವಂತೆ ಮಾಡಿ ಸತ್ಕಾರ್ಯಗಳನ್ನು ಮಾಡುವಂತೆ ಪ್ರಚೋದಿಸುತ್ತಾನೆ. ಹೀಗೆ ವಿಮರ್ಶಿಸಿದರೆ ಪರಮಾತ್ಮನ ಸಂಕಲ್ಪವು ವಿಚಿತ್ರವೆಂದು ವ್ಯಕ್ತವಾಗುತ್ತದೆ.

ಒಟ್ಟಿನಲ್ಲಿ ಪರಮಾತ್ಮನೇ ವಿಶೇಷ ಗುಣವಂತನು. ಜೀವಿಗಳನ್ನು ತಾನು ವಿಚಿತ್ರ ರೀತಿಯ ಪ್ರಪಂಚದಲ್ಲಿ ಮುಳುಗಿಸಿ, ಅವುಗಳ ಉದ್ಧಾರದ ರೀತಿಯನ್ನು ಮುಚ್ಚಿ ಹಾಕಿರುತ್ತಾನೆ. ಆದರೆ ಅವುಗಳು ಪರಸ್ಪರ ದೋಷಾರೋಪಣೆ ಮಾಡುತ್ತಾ ಪರಮಾತ್ಮನನ್ನು ಮರೆತು ಬಿಡುತ್ತವೆ.

549. ಸಚ್ಚಿದಾನಂದ ವಿಗ್ರಹಾಯ ನಮಃ

ಸತ್ - ಚಿತ್ - ಆನಂದ - ವಿಗ್ರಹಾಯ ನಮಃ.

ಸತ್ - ಶುದ್ಧವಾದುದು, ಸಾತ್ವಿಕವಾದುದು, ಸದಾ ಇರುವಂತಹದು, ನಾಶವಾಗದಿರದ್ದು.

ಚಿತ್ - ಆತ್ಮ, ಬ್ರಹ್ಮ, ಮನಸ್ಸು, ಬುದ್ಧಿ, ಹೃದಯ ಎಂದೆಲ್ಲ ಅರ್ಥವಾಗುತ್ತದೆ. ಪ್ರಕೃತ ಮನಸ್ಸು ಬುದ್ಧಿ, ಹೃದಯವನ್ನೇ ನಿರ್ದೇಶಿಸುತ್ತದೆ.

ಆನಂದ - ಸಂತೋಷ, ಸುಖ, ಹರ್ಷ.

ವಿಗ್ರಹ - ಪ್ರತಿಮೆ, ಶರೀರ, ನಿರಾಕಾರ, ಸಾಕಾರ ಮೂರ್ತಿ.

ಇದರಲ್ಲಿ ಪರಮಾತ್ಮನನ್ನು ಪೂಜಿಸಲು ಆವಾಹಿಸುತ್ತೇವೆ. ಪರಮಾತ್ಮನ ಗುಣಗಳನ್ನು ಈ ನಾಮದಲ್ಲಿ ನಿರ್ದೇಶಿಸುತ್ತದೆ. ಪರಮಾತ್ಮನು ನಿರಾಕಾರ, ಸಾಕಾರ ಮೂರ್ತಿ. ಅವನು ಸದಾ ಸಮಭಾವದಿಂದ ಇರುವವನು. ಸುಖ, ಸಂತೋಷಗಳು ಅವನಿಗೆ ಇಲ್ಲದಿದ್ದರೂ ನಾವು ಅವನ ಈ ಗುಣಗಳನ್ನು ಮತ್ತು ಭಾವನೆಗಳನ್ನು ಕಲ್ಪಿಸಿಕೊಂಡು ಆರಾಧಿಸುತ್ತೇವೆ. ಪರಮಾತ್ಮನಿಗೆ ಚಿತ್ ಎಂದು ನಿರ್ದೇಶಿಸುತ್ತೇವೆ. ಅವನು ಕೇಂದ್ರ ಬಿಂದು. ಓಂಕಾರದಲ್ಲಿ ತನ್ಮಯನಾಗಿರುತ್ತಾನೆ. ಓಂಕಾರದಿಂದ ಆರಾಧಿಸಿದರೆ ಪರಮಾತ್ಮನ ಸಕಲ ಗುಣಗಳನ್ನು ಆರಾಧಿಸಿದಂತಾಗುತ್ತದೆ. ಓಂಕಾರ ಮೇಲೆ ಮೇಲೆ ಮನಸ್ಸನ್ನು ಎತ್ತಿ ಪರಮಾತ್ಮಗೆ ಸೇರಿಸುತ್ತದೆ. ಪರಮಾತ್ಮನು ತನ್ನ ಸಂಕಲ್ಪವನ್ನು ''ಚಿತ್'' ಶಕ್ತಿಯಿಂದ ನಡೆಸುತ್ತಾನೆ. ಪರಮಾತ್ಮನಿಗೆ ಸತ್ ಗುಣಗಳೆಲ್ಲ ಪ್ರಾಧಾನ್ಯ. ಶುದ್ಧ ಸತ್ವನಾದ್ದರಿಂದ ಅವನನ್ನು ಸಚ್ಚಿದಾನಂದ ವಿಗ್ರಹ ಎಂದು ನಮ್ಮ ಮನಸ್ಸು, ಬುದ್ಧಿಗಳಲ್ಲಿ ಕಲ್ಪಿಸಿ ಆರಾಧಿಸುತ್ತೇವೆ. ಯಾವಾಗ ಮನಸ್ಸು, ಬುದ್ಧಿಗಳು ವಿವೇಕ, ಚಿಂತನೆಯಿಂದ ಯಾವ ಯೋಚನಾ ತರಂಗಗಳೂ ಇಲ್ಲದ ಸ್ಥಿತಿಯನ್ನು ತಲುಪುವುದೋ ಆಗ ನಮ್ಮ ಆತ್ಮ, ಬುದ್ಧಿ ಮನಸ್ಸುಗಳು ಸತ್ - ಚಿತ್ - ಆನಂದವನ್ನು ಹೊಂದುತ್ತವೆ. ಆದರೆ ಮನಸ್ಸು ಚಂಚಲ ಸ್ವಭಾವದ್ದಾಗಿರುವುದರಿಂದ, ಯಾವ ಕ್ಷಣದಲ್ಲಿ ಚಂಚಲತೆ ಮನಸ್ಸನ್ನು ಪ್ರವೇಶಿಸುವುದೋ ಆಗ ''ಸಚ್ಚಿದಾನಂದ'' ಸ್ವಭಾವವು ಹಾರಿಹೋಗುತ್ತದೆ.

ಆದರೆ ಪರಮಾತ್ಮನಲ್ಲಿ ಈ ವಿಕಲ್ಪಕ್ಕೆ ಪ್ರವೇಶವೇ ಇಲ್ಲ. ಅದರಿಂದ ಅವನ ಸಚ್ಚಿದಾನಂದ ಸ್ವರೂಪ ನಿರಂತರ ಇರುತ್ತದೆ. ಅದರಿಂದ ಅವನು

ಸಚ್ಚಿದಾನಂದ ವಿಗ್ರಹನಾಗುತ್ತಾನೆ. ಪೂಜಾರ್ಹವಾಗುತ್ತಾನೆ. ಈ ರೀತಿ ಚಿಂತನೆಯನ್ನು ಸಕಲ ಜೀವಿಗಳಲ್ಲಿಯೂ ಪ್ರೋತ್ಸಾಹಿಸುತ್ತಾನೆ.

ಈ ಕಾರಣದಿಂದ ಪ್ರತಿ ಜೀವಿಯು ಸಚ್ಚಿದಾನಂದವನ್ನು ಅನುಭವಿಸಲು ಸಾಧ್ಯ. ನಮಗೆ ತಿಳಿಯದಂತೆಯೇ ಇದನ್ನು ಸದಾ ಅನುಭವಿಸುತ್ತಿದ್ದೇವೆ. ಆದರೆ ಆ ಕ್ಷಣಗಳು ಬಹಳ ಚಿಕ್ಕವುಗಳು. ಇದನ್ನು ದೊಡ್ಡದು ಮಾಡಬಹುದು. ನಿರಂತರ ಮಾಡಬಹುದು ಎಂಬ ತಿಳಿವಳಿಕೆ ಬಂದಾಗಲೇ ಅದು ಜ್ಞಾನವಾಗಿ ಪರಿಣಮಿಸುತ್ತದೆ. ಆಗ ನಾವು ಸಚ್ಚಿದಾನಂದವಲ್ಲದ ಸಮಯಗಳನ್ನು ನಿರ್ಮೂಲ ಮಾಡಲು ಬುದ್ಧಿ ಮನಸ್ಸುಗಳನ್ನು ನಿಗ್ರಹಿಸಲು ಪ್ರಾರಂಭಿಸುತ್ತೇವೆ. ಇದೂ ಸಹ ಅಂದರೆ ಈ ಮನಸ್ಸು ಪರಮಾತ್ಮನ ಅಪಾರ ಕರುಣೆಯಿಂದ ಬರುತ್ತದೆ. ಮತ್ತು ನಮ್ಮ ನಮ್ಮ ಸಂಸ್ಕಾರ ಬಲದಿಂದ ಬರಲು ಸಾಧ್ಯ. ಅಂದರೆ ಸದಾ ನಾವು ಸತ್ಸಂಗ, ಸದ್ವಿಚಾರ, ಸತ್ಪುರುಷರ ಜೊತೆ ಹೆಚ್ಚು ಕಾಲ ಕಳೆಯುವುದು - ಇವುಗಳಿಗೆ ಬೆಲೆ ಕೊಟ್ಟು ಕಾಲವನ್ನು ಕಳೆಯಬೇಕು. ಆಗಲೇ ಈ ಸಚ್ಚಿದಾನಂದ ಸ್ಥಿತಿ ಸಾಧ್ಯ. ನಾವು ಸಹ ಸಚ್ಚಿದಾನಂದ ವಿಗ್ರಹವಾಗಲು ಸಾಧ್ಯ. ಇದನ್ನೇ ಜ್ಞಾನಿಗಳು, ಭಕ್ತರು ಪರಮಾತ್ಮನನ್ನು ಸದಾ ಬೇಡುವುದು. ಇದೇ ಜೀವನದ ಪರಮ ಗುರಿ.

ಪರಮಾತ್ಮನೂ ಸಹ ತನ್ನ ಅಂಶಗಳೇ ಆದ ಆತ್ಮಗಳನ್ನು ಸಂಸಾರ ಸಾಗರದಿಂದ ಉತ್ತೀರ್ಣಮಾಡಿ ತನ್ನ ಸಮೀಪಕ್ಕೆ ಕರೆದುಕೊಳ್ಳುವುದರಲ್ಲಿ ಕಿಂಚಿತ್ತೂ ಹಿಂದೆ ಬೀಳುವುದಿಲ್ಲ. ನಮ್ಮ ಪ್ರಾರ್ಥನೆಗಳನ್ನು ಸಂತೈಸುವುದರಲ್ಲಿ ಅವನಿಗೆ ಬಹಳ ಇಷ್ಟ. ಅವನು ಭಕ್ತ ಪರಾಧೀನ, ಭಕ್ತೋದ್ಧಾರಕ, ಸದಾ ಸತ್ಕಾರ್ಯ ತತ್ಪರನು.

*ಪ್ರಾಣಸ್ತ್ವಂ ಪ್ರಾಣಿನಾಂ ಪ್ರತ್ಯಗಾತ್ಮಾ ತ್ವಂ ಸರ್ವದೇಹಿನಾಮ್ ।*
*ಸುಜ್ಯೋತಿಸ್ತ್ವಂ ಪರಂಜ್ಯೋತಿರಾತ್ಮಜ್ಯೋತಿಃ ಸನಾತನಃ ॥94॥*
*(550-555)*

550. ಪ್ರಾಣಿನಾಂ ಪ್ರಾಣಾಯ ನಮಃ

ಪ್ರಾಣವಿರುವ ದೇಹಕ್ಕೆ ಪ್ರಾಣಿ ಎಂದು ಹೇಳುತ್ತೇವೆ. ದೇಹದಲ್ಲಿ ಎಲ್ಲಿಯವರೆಗೆ ಪ್ರಾಣವಿರುವುದೋ ಅಲ್ಲಿಯವರೆಗೆ ದೇಹವು ಕೆಡದೆ ರೋಗ ರುಜಿನಗಳಿಗೆ ಗುರಿಯಾದರೂ ತನ್ನ ಉಸಿರಾಟ, ಆಹಾರ ತೆಗೆದುಕೊಳ್ಳುವುದು, ಆಹಾರವನ್ನು ಶಕ್ತಿ ರೂಪಕ್ಕೆ ಬದಲಾಯಿಸುವುದು, ಬೇಡವಾದ ಆಹಾರದ ಭಾಗವನ್ನು ವಿಸರ್ಜಿಸಿ ಹೊರಹಾಕುವುದು ಮುಂತಾದ ಕೆಲಸವನ್ನು ಮಾಡುತ್ತಿರುತ್ತದೆ. ಆತ್ಮದ ಇರುವಿಕೆ ಬಹಳ ಅಗತ್ಯ. ಆತ್ಮವು ದೇಹವನ್ನು ಮನೆ ಮಾಡಿಕೊಂಡಿರುತ್ತದೆ. ಆತ್ಮದೊಡನೆ ಇನ್ನೂ ಕೆಲವು ವಸ್ತುಗಳು ಇರುತ್ತವೆ,

ಏನೆಂದರೆ - ಪಂಚಪ್ರಾಣಗಳು (ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳು), ಪಂಚಮಹಾಭೂತಗಳ ಪ್ರತಿರೂಪಗಳು (ಚಕ್ಷು,ಶ್ರೋತ್ರ, ಜಿಹ್ವಾ, ಘ್ರಾಣ, ತ್ವಕ್), ಪಂಚಕರ್ಮೇಂದ್ರಿಯಗಳು (ವಾಕ್, ಪಾಣಿ, ಪಾಯು, ಉಪಸ್ಥ, ಪಾದಗಳು), ಪಂಚಜ್ಞಾನೇಂದ್ರಿಯಗಳು (ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು).

ಪಂಚಮಹಾಭೂತಗಳಿಂದ ದೇಹವು ಮಾಡಲ್ಪಟ್ಟಿರುತ್ತದೆ. ಆತ್ಮದೊಡನೆ ಸದಾ ಇದ್ದು ಕಾರಣ ಶರೀರವಾಗಿ ಪರಿಣಮಿಸುವ ವಸ್ತುಗಳು ಯಾವುವೆಂದರೆ - ಪಂಚಪ್ರಾಣಗಳು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು.

ಉಳಿದವು ಪಂಚಮಹಾಭೂತಗಳಲ್ಲಿ ಲೀನವಾಗಿ ಬಿಡುತ್ತವೆ. ಅಂದಮೇಲೆ ಪಂಚಪ್ರಾಣಗಳು ಪರಮಾತ್ಮನ ಪ್ರತಿರೂಪ, ಆತ್ಮನು ಪರಮಾತ್ಮನ ಅಂಶ, ಇವು ಹಾರಿಹೋದ ಮೇಲೆ ದೇಹವು ಜಡವಾಗುತ್ತದೆ. ಪ್ರಾಣಿಗಳಲ್ಲಿ ಪ್ರಾಣರೂಪನೇ ಪರಮಾತ್ಮನು. ಎಲ್ಲಿಯವರೆಗೆ ಪರಮಾತ್ಮನ ಸಂಕಲ್ಪವಿರುವುದೋ ಅಲ್ಲಿಯವರೆಗೆ ಆತ್ಮನು ಜಡ ಸೂಕ್ಷ್ಮ ಕಾರಣ ದೇಹದೊಡನೆ ದೇಹದಲ್ಲಿರುತ್ತಾನೆ. ನಂತರ ಸಂಸ್ಕಾರದ ಅಂಟಿನೊಡನೆ ಮುಂದಿನ ದೇಹಕ್ಕೆ ಹೊರಡುತ್ತಾನೆ. ಪರಮಾತ್ಮನ ಕೃಪೆಯಾಗಿ ಅವನಲ್ಲಿ ಲೀನವಾಗಬೇಕಾದಾಗ ಸೂಕ್ಷ್ಮ ಮತ್ತು ಕಾರಣ ಶರೀರಗಳು ಬಿಡಿ ಬಿಡಿಯಾಗಿ ವಿಸರ್ಜಿಸಲ್ಪಟ್ಟು ಆತ್ಮವೊಂದೇ ಉಳಿಯುತ್ತದೆ. ಎಲ್ಲವೂ ಅವುಗಳ ಅಧಿದೇವತೆಗಳಲ್ಲಿ ಲೀನವಾಗಿಬಿಡುತ್ತದೆ. ಇದು ಪರಮಾತ್ಮನ ಸಂಕಲ್ಪ ಮತ್ತು ಸೃಷ್ಟಿ. ಅದರಿಂದ ಪ್ರಾಣಿನಾಂ ಪ್ರಾಣಾಯ ನಮಃ ಎಂದರೆ ಅವನಿಗೇನೆ ಸಲ್ಲುತ್ತದೆ.

**551.** ಸರ್ವದೇಹಿನಾಂ ಪ್ರತ್ಯಗಾತ್ಮನೇ ನಮಃ

ಎಲ್ಲಾ ದೇಹಗಳಲ್ಲಿಯೂ ಆತ್ಮವು ಇದ್ದೇ ಇರುತ್ತದೆ. ಪ್ರತಿ ದೇಹದಲ್ಲಿಯೂ ಒಂದೊಂದು ಆತ್ಮವು ಇದ್ದೇ ಇರುತ್ತದೆ. ಒಂದೇ ಆತ್ಮವು ಯಾವ ಕಾಲದಲ್ಲಿಯೂ ಒಂದಕ್ಕಿಂತ ಹೆಚ್ಚು ದೇಹಗಳಲ್ಲಿ ಇರುವುದಿಲ್ಲ. ಇರಲು ಸಾಧ್ಯವಿಲ್ಲ. ದೇಹ ಬದಲಾಯಿಸುವ ಕಾಲದಲ್ಲಿಯೂ, ಸಮಯದ ಅಂತರವಿದ್ದೇ ಇರುತ್ತದೆ. ಆತ್ಮನು ಸ್ವತಂತ್ರನು. ಬೇಕಾದಷ್ಟು ಕಾಲ ದೇಹದಲ್ಲಿ ವಾಸವಾಗಿರುತ್ತಾನೆ. ಇದೂ ಸಹ ಪರಮಾತ್ಮನ ಸಂಕಲ್ಪದಂತೆಯೇ ನಡೆಯುತ್ತದೆ. ಆತ್ಮನ ಇಚ್ಛೆಯಂತಲ್ಲ, ಇದು ಬುದ್ಧಿ, ಮನಸ್ಸು, ಅಹಂಕಾರ, ಚಿತ್ತದ ಸಮೂಹದಂತೆ ನಡೆಯುತ್ತದೆ. ಇದನ್ನು ಪರಮಾತ್ಮನು ನಿಗ್ರಹಿಸಿ ಸಂಸ್ಕಾರ, ಪೂರ್ವಜನ್ಮದ ಕರ್ಮ ಸಂಚಿತ, ಪ್ರಾರಬ್ಧ ಮತ್ತು ಆಗಮ ಕರ್ಮದಂತೆ ನಡೆಸುತ್ತಾನೆ. ಪ್ರಪಂಚದಲ್ಲಿ ಪ್ರಕೃತಿ, ಪುರುಷ, ಮಾಯೆಯ ಪಾಶದಲ್ಲಿ ಬಿದ್ದ ಆತ್ಮನು ಇದನ್ನು ಅಂಟಿಸಿಕೊಳ್ಳುತ್ತಾನೆ. ಈ ಅಂಟಿನಂತೆ ಮುಂದೆ ಹೋಗಿ

ಪರಮಾತ್ಮನ ಕೃಪೆಗಾಗಿ ತೊಳಲಿ ತೊಳಲಿ ಪಡೆದು ಬಿಡುಗಡೆ ಹೊಂದುತ್ತಾನೆ. ಆತ್ಮನಿಗೆ ನಮಸ್ಕಾರ. ಆತ್ಮನೇ ಪರಮಾತ್ಮನ ಅಂಶ. ಅವನಿಂದಲೇ ಬಂದದ್ದು. ಅವನಲ್ಲಿಯೇ ಲೀನವಾಗುವುದು. ಇದು ಪರಮಾತ್ಮನ ಸಂಕಲ್ಪ. ಅವನ ಚಕ್ರದಲ್ಲಿ ಎಲ್ಲರೂ ಒಳಪಡಬೇಕು. ಪ್ರತಿಯೊಂದು ದೇಹದಲ್ಲಿಯೂ ವಿಶಿಷ್ಟವಾದ ಶಕ್ತಿ ರೂಪದಲ್ಲಿ ಆತ್ಮ - ತೇಜಸ್ಸು - ಶಕ್ತಿ - ಪರಮಾತ್ಮನಿಂದ ಬಂದ ಅಂಶವು ಇರುತ್ತದೆ. ಆದರಿಂದ ಅವನಿಗೆ ನಮಸ್ಕಾರಗಳು.

**552: ಸುಜ್ಯೋತಿಷೇ ನಮಃ**

ಪರಮಾತ್ಮನು ಜ್ಯೋತಿ ಸ್ವರೂಪನು, ಜ್ಯೋತಿ ಎಂದರೆ ಬೆಳಕು. ಎಲ್ಲೆಲ್ಲಿಯೂ ಬೆಳಕನ್ನು ಕ್ಷಣಮಾತ್ರದಲ್ಲಿ ಕೊಡುವವನು. ಎಂದರೆ ಜ್ಞಾನವನ್ನು ಕೊಡುವವನು. ಮನಸ್ಸು ಬುದ್ಧಿಗಳಿಗೆ ತಿಳುವಳಿಕೆಯನ್ನು ಮತ್ತು ವಿವೇಕವನ್ನು ದಯಪಾಲಿಸುವವನು ಅವನೇ. ಅಜ್ಞಾನವನ್ನು ಮತ್ತು ಅಂಧಕಾರವನ್ನು ಕತ್ತಲನ್ನು ಹೋಗಲಾಡಿಸಿ ಬೆಳಕನ್ನು ಕೊಡುತ್ತಾನೆ. ಸೂರ್ಯ ಚಂದ್ರರು ಯಾವ ಭೇದ ಭಾವವಿಲ್ಲದೆ ಪಕ್ಷಪಾತವಿಲ್ಲದೆ ಬೆಳಕನ್ನು ಎಲ್ಲೆಡೆ ಚೆಲ್ಲುತ್ತಾರೆ. ಇದು ಬಂದಕೂಡಲೇ ಅಂದರೆ ಸೂರ್ಯನ ಕಿರಣಗಳು ಬಂದ ಕ್ಷಣದಲ್ಲಿಯೇ ತಮಸ್ಸು, ಅಜ್ಞಾನ, ಕತ್ತಲು ಓಡಿ ಹೋಗುತ್ತದೆ.

ಇದೇ ರೀತಿ ಗುರುವು ಜ್ಞಾನದ ಕಡೆಗೆ ಮನಸ್ಸು ತಿರುಗುವಂತೆ ಮಾಡುತ್ತಾನೆ. ಸಕಲ ಬ್ರಹ್ಮಾಂಡದಲ್ಲಿ ಜೀವಿಗಳಿಗೆ ಅಜ್ಞಾನವನ್ನು ತಮೋ ಗುಣವನ್ನು ಸಂಪೂರ್ಣ ನಾಶವಾಗುವಂತೆ ಮಾಡುವ ಏಕೈಕ ದಾರಿ - ಗುರು. ಗುರುವಿಗಿಂತ ಕೃಪಾಳು, ದಯಾಮಯ ಯಾರೂ ಬೇರೆಯವರಿಲ್ಲ. ಗುರುವು ಪರಮಾತ್ಮನ ಕೃಪೆಯಿಂದ ದೊರಕುತ್ತದೆ. ಗುರುವು ಜ್ಯೋತಿಯು, ಜ್ಞಾನ ಜ್ಯೋತಿಯು, ಸುಜ್ಯೋತಿಯು, ಅತ್ಯಂತ ಪರಮ ಪವಿತ್ರವಾದ ಜ್ಯೋತಿಯು.

ಪರಮಾತ್ಮನೇ ಗುರು, ಗುರುವೇ ಪರಮಾತ್ಮನ ರೂಪ. ಎಲ್ಲ ರೀತಿಯಲ್ಲಿಯೂ ಇವರಿಬ್ಬರೂ ಒಂದೇ. ಸಮಭಾವ, ಸಮಫಲಸ್ವರೂಪರು. ಇಬ್ಬರ ಕರುಣೆಯೂ ಸಕಲ ಜೀವಿಗಳಿಗೂ ಬೇಕೇ ಬೇಕು. ಹಾಗೆಂದರೆ ಬಯಸಿದಾಗ ಬರುವುದಿಲ್ಲ. ಅದು ತಾನಾಗಿಯೇ ದೊರಕುತ್ತದೆ. ಅದಕ್ಕೆ ಸಂಸ್ಕಾರ, ಅವನ ಕರುಣೆ, ಸಮಯ, ಕಾಲ, ದೇಶ ತಾನಾಗಿಯೇ ಒದಗುತ್ತದೆ. ಗುರುವಿನ ಕೃಪೆ ಎಷ್ಟೆಂದರೆ ಪರಮಾತ್ಮನ ಕೋಪವನ್ನು ಶಾಪವನ್ನು ಸಹ ಗುರುಕೃಪೆಯು ಶಮನಮಾಡುವ ಶಕ್ತಿಯನ್ನು ಹೊಂದಿರುತ್ತದೆ. ಸುಜ್ಯೋತಿಯು ಯಾರು? ಗುರುವೋ ಅಥವಾ ಪರಮಾತ್ಮನೋ! ನಮಗೇಕೆ, ಇಬ್ಬರ ಕೃಪೆಯೂ ಅನವರತ ನಮ್ಮ ಮೇಲಿರಲಿ! ಗುರುವು ಪರಮಾತ್ಮನ ಎಡೆಗೆ ಒಯ್ಯುವುದರಿಂದ ಅವನೇ ನಮಗಿರಲಿ. ಪರಮಾತ್ಮನು ಬೇಡವೆಂದಲ್ಲ ಅವನೂ ಬೇಕು. ಬೇಕೇ ಬೇಕು. ಗುರು - ಪರಮಾತ್ಮರಲ್ಲಿ ಭೇದವೇ ಇಲ್ಲ ಇಬ್ಬರೂ ಸಮರೇ!

ಇಬ್ಬರೂ ಒಂದೇ ತತ್ವದಲ್ಲಿ ಅಡಗಿರುವವರು! ಇದು ವಿಶೇಷ ಸೃಷ್ಟಿ, ವಿಶೇಷ ವಿಚಾರಲಹರಿ - ಸುಜ್ಯೋತಿಷೇ ನಮಃ ಅಲ್ಲವೇ!!

553. ಪರಂಜ್ಯೋತಿಷೇ ನಮಃ
ಪರಸ್ಮೈಜ್ಯೋತಿಷೇ ನಮಃ

ಜ್ಯೋತಿಗಳಲ್ಲಿ ಪರಮವಾದುದು, ಉತ್ತಮೋತ್ತಮವಾದುದು ಉದಾತ್ತವಾದುದು - ಪರಮಾತ್ಮ. ಸಚ್ಚಿದಾನಂದ ಪರಬ್ರಹ್ಮನು ಪರಮ ಪವಿತ್ರವಾದ ಜ್ಯೋತಿ - ಆದರಿಂದ ಇವನು ಪರಂಜ್ಯೋತಿಷೇ ನಮಃ ಎಂದು ನಮಸ್ಕರಿಸಲ್ಪಟ್ಟಿರುತ್ತಾನೆ.

ಪರಸ್ಮೈ - ಎಂದರೆ ಪರಲೋಕಕ್ಕಾಗಿ ದಾರಿ ತೋರಿಸುವ ಜ್ಯೋತಿ. ಪರಂಜ್ಯೋತಿಯು ಪರಲೋಕಕ್ಕೆ ದಾರಿ ತೋರಿಸುವ ಜ್ಯೋತಿಯಲ್ಲದೇ ಬೇರೇನು ಆಗಲು ಸಾಧ್ಯ!

ಆತ್ಮಕ್ಕೆ ಇದಕ್ಕಿಂತ ಬೇರೆ ದಾರಿ ತೋರುವ ವಸ್ತು, ಆಸ್ತಿ ಇಲ್ಲ. ಏನೇ ಆದರೂ ಆತ್ಮವು ಪರಮಾತ್ಮನಿಂದ ಬಂದದ್ದಲ್ಲವೇ!

ಆತ್ಮನನ್ನು ಸಂಸಾರ ಸಾಗರದೊಳಗೆ ಹಾಕಿ, ಅಲ್ಲಿಂದ ಬಿಡಿಸಲು ಅವನಲ್ಲದೆ ಬೇರೆ ಯಾರು ಬರುತ್ತಾರೆ. ಅವನ ಸಂಕಲ್ಪದಿಂದಲೇ ಎಲ್ಲವೂ ನಡೆಯುತ್ತಿರುವುದರಿಂದ ಬೇರೆ ಯಾರೂ ಈ ಕೆಲಸದಲ್ಲಿ ಪ್ರವೇಶಿಸಲು ಸಾಧ್ಯವಿಲ್ಲ ಮತ್ತು ಆಗುವುದೂ ಇಲ್ಲ.

554. ಆತ್ಮಜ್ಯೋತಿಷೇ ನಮಃ

ಸಕಲ ಆತ್ಮಗಳಿಗೂ ಇವನೇ ಜ್ಯೋತಿಯು.

ಆತ್ಮಗಳಿಗೆ, ಆತ್ಮಗಳಲ್ಲಿ ಇರುವ ಜ್ಯೋತಿ, ತೇಜಸ್ಸು ಯಾರೋ ಅವನೇ ಆತ್ಮಜ್ಯೋತಿ - ಪರಮಾತ್ಮ.

ಆತ್ಮದಲ್ಲಿರುವ ತೇಜಸ್ಸು ಪರಮಾತ್ಮನದೇ! ಬೇರೆಯದಲ್ಲ. ಅಥವಾ ಆತ್ಮನಿಗೆ ಬೇರೆ ಎಲ್ಲಿಂದಲೂ, ಯಾರಿಂದಲೂ ಯಾವ ಕಾಲದಲ್ಲಿಯೂ ದೊರಕುವುದಿಲ್ಲ.

ಪರಮಾತ್ಮನ ಕೃಪೆಯಿಂದ ಅವನು ಪ್ರತಿ ಆತ್ಮದಲ್ಲಿಯೂ ತನ್ನದೇ ಸ್ವಭಾವ, ರೂಪ, ಗುಣಗಳನ್ನು ಹೊಂದಿರುವ ಶಕ್ತಿ, ತೇಜಸ್ಸನ್ನು ಇಟ್ಟಿರುತ್ತಾನೆ. ಆದರೆ ಒಂದೇ ಒಂದು ವ್ಯತ್ಯಾಸವೆಂದರೆ ಪರಮಾತ್ಮನು ಸ್ವತಂತ್ರನು, ಸೂತ್ರಧಾರನು. ಆದರೆ ಆತ್ಮನಿಗೆ ಈ ಸ್ವತಂತ್ರವಿಲ್ಲ. ಅದು ಪರತಂತ್ರದ್ದು. ಅವನ ಇಚ್ಛೆಯಂತೆ ನಡೆಯುವ ಬೊಂಬೆ.

ಅವನು ನಡೆಸಿದಂತೆ ಕಲ್ಪಾದಿಯಿಂದ ಕಲ್ಪಾಂತದವರೆಗೆ ಈ ಭವಸಾಗರದಲ್ಲಿ

ಸಂಸ್ಕಾರಗಳನ್ನು ಅಂಟಿಸಿಕೊಳ್ಳುತ್ತಾ ಮತ್ತೆ ಅವನ ಕೃಪೆ ಬರುವವಗೆ ಕಾಯ್ದು, ತನಗಂಟಿರುವ ಕರ್ಮಗಳನ್ನು ಭಸ್ಮಮಾಡಿಸಿಕೊಂಡು ಸೂಕ್ಷ್ಮ ಮತ್ತು ಕಾರಣ ದೇಹಗಳ ಸಕಲ ಭಾಗಗಳನ್ನು ಶಕ್ತಿಗಳನ್ನು ಮತ್ತೆ ಒಂದೊಂದಾಗಿ ಕೊಡವಿಕೊಳ್ಳುತ್ತಾ / ಕಳಚಿಕೊಳ್ಳುತ್ತಾ, ಕಡೆಗೆ ತಾನೇ ತಾನಾಗಿ ಅವನಲ್ಲಿಯೇ ಲೀನವಾಗಿಬಿಡುತ್ತದೆ. ಇದೇ ಆತ್ಮನ ದಾರಿ. ಯಾವಾಗ ಅವನ ಕೃಪೆಯಾಗುತ್ತೋ ಆವಾಗ ಅವನ ಸಾಮೀಪ್ಯ, ಸಾಯುಜ್ಯ, ಸಾಲೋಕ್ಯ, ಸಾರೂಪ್ಯವನ್ನು ಪುನರಾವೃತ್ತಿರಹಿತ ಸ್ಥಿತಿಯನ್ನು ಮತ್ತು ಸ್ಥಾನವನ್ನು ಅವನಲ್ಲಿಯೇ ಪಡೆಯುತ್ತದೆ. ಇದು ಸೃಷ್ಟಿ ಚಕ್ರ. ಅವನು ಸದಾ ತನ್ನ ಜ್ಯೋತಿಷಾಂಶವನ್ನು ಆತ್ಮನಲ್ಲಿ ಪ್ರಕಾಶಿಸುತ್ತಾನೆ. ಈ ಪರಮ ಪವಿತ್ರವಾದ ಗೂಢವಾದ ವಿಚಾರ - ಆತ್ಮಜ್ಯೋತಿಷೇ ನಮಃ - ಇದೇ ಆತ್ಮಜ್ಞಾನ. ಪರಮ ಗುಹ್ಯವಾದುದು, ಗುರುತರವಾದುದು, ಪವಿತ್ರವಾದುದು. ಇಲ್ಲಿ ಲವಲೇಶವೂ ಕಲ್ಮಶಕ್ಕೆ ಸ್ಥಾನವಿಲ್ಲ. ಇದರ ಈ ತಿಳಿವಳಿಕೆ ಬರುವುದಕ್ಕೂ ಪರಮಾತ್ಮನ ಸಂಕಲ್ಪವೇ ಕಾರಣ.

**555.** ಸನಾತನಾಯ ನಮಃ

ಸನಾತನ - ಬಹಳ ಹಿಂದಿನದು, ಪುರಾತನವಾದ್ದು. ಸ್ವಲ್ಪವೂ ನಶಿಸದೇ ಕಾಲದ ಪ್ರಭಾವದಿಂದ ಹೊರಗಾದ ಅಂದರೆ ಕಾಲಾತೀತವಾದ ಪರಮ ರಹಸ್ಯವಿರುವ ಶಕ್ತಿ, ತೇಜಸ್ಸು - ಪರಮ ಪೂಜ್ಯವಾದ ಪರಮಾತ್ಮ, ಎಂದಿಗೂ ಯಾವ ಕಾಲಕ್ಕೂ ಬದಲಾಗದುದು.

ಪರಮಾತ್ಮನು ಎಷ್ಟು ಸನಾತನನೋ ಆತ್ಮಗಳೂ ಸಹ ಅಷ್ಟೇ ಸನಾತನವಿರಬಹುದೇನೋ! ಆತ್ಮಗಳು ಅವಿನಾಶಿ. ಪರಮಾತ್ಮನು ಅವಿನಾಶಿ. ಆತ್ಮಗಳು ಪರಮಾತ್ಮನ ಅಂಶಗಳೇ ಆದ್ದರಿಂದ, ಅವನಲ್ಲಿಯೇ ಇರುವುದರಿಂದ ಅವುಗಳೂ ಸಹ ಪೂರ್ಣವೇ! ಪ್ರತಿ ಆತ್ಮವೂ ಪೂರ್ಣವೇ!

ಪರಮಾತ್ಮನೂ ಪೂರ್ಣವೇ! ಈ ಆತ್ಮಗಳು ಪ್ರತ್ಯೇಕವಾಗಿ ಪೂರ್ಣಗಳಾದರೂ ಎಲ್ಲವೂ ಐಕ್ಯವಾದಾಗ ಪರಮೇಶ್ವರನಲ್ಲಿ ಪೂರ್ಣತೆಯನ್ನು ಐಕ್ಯವಾಗಿಸುತ್ತವೆ. ಅವನೇ ಪರಮ ಪೂರ್ಣಸ್ವರೂಪನು.

ಆದರೆ ಪರಮಾತ್ಮನು ಈ ಆತ್ಮಗಳಿಗೆ ಸಾರಥಿಯಾಗಿ ನಡೆಸುತ್ತಾನೆ. ಅವನು ಸನಾತನ ಆತ್ಮಗಳಿಗೆ ಸಾರಥಿ. ಎಂದರೆ ಇನ್ನೂ ಹಿಂದನವನೇ ಇರಬೇಕು. ಅವನೇ ಅತ್ಯುತ್ತಮ ಶಕ್ತಿಶಾಲಿಯಾದ ಚತುರನಾದ ಪರಮ ಪೂಜ್ಯನಾದ ಸನಾತನ ಸಾರಥಿ, ಲೋಕಸಾರಥಿ, ವಿಶೇಷ ಸಾರಥಿ - ಸನಾತನಾಯ ನಮಃ.

*ಜ್ಯೋತಿರ್ಲೋಕಸ್ವರೂಪಸ್ತ್ವಂ ಜ್ಯೋತಿರ್ಜ್ಞೋ ಜ್ಯೋತಿಷಾಂ ಪತಿಃ ।*
*ಸ್ವಾಹಾಕಾರಃ ಸ್ವಧಾಕರೋ ವಷಟ್ಕಾರಃ ಕೃಪಾನಿಧಿಃ ।।95।।*

*(556-563)*

556. **ಜ್ಯೋತಿಷೇ ನಮಃ**

ಜ್ಯೋತಿ - ಎಂದರೆ ದೀಪ, ಬೆಳಕನ್ನು ಕೊಡುವ ಸಾಧನ, ಬೆಳಕೆಂದರೆ ಕತ್ತಲನ್ನು ಓಡಿಸಿದರೆ ಸಿಗುವ ಬೆಳಕು. ಯಾವುದರಿಂದ ಅಥವಾ ಯಾವುದನ್ನು ಪಡೆಯುವುದರಿಂದ ಅಥವಾ ಯಾವುದರ ಬೋಧನೆಯಿಂದ ಮನಸ್ಸು ಬುದ್ಧಿಗಳಿಗೆ ಬೇರೆಯ ವಸ್ತುಗಳ (ಜಡ, ಪ್ರಾಣಿಕ) ಸ್ವಭಾವ ಮುಂತಾದವುಗಳು ಗೋಚರವಾಗುವುವೋ ಅದಕ್ಕೆ ಬೆಳಕು, ತೇಜಸ್ಸು, ಜ್ಯೋತಿ ಎಂದು ಹೆಸರು. ಜ್ಯೋತಿಯು ಬೆಳಕಾದರೂ ಆಗಬಹುದು. ಬುದ್ಧಿಯ ವಿಕಾಸಕ್ಕೆ ಬೆಳಕು ಎಂದು ಹೇಳಬಹುದು. ಉದಾಹರಣೆಗಳು - ಸೂರ್ಯ, ಚಂದ್ರ, ನಕ್ಷತ್ರಗಳು, ಜ್ಯೋತಿಗಳು, ವೇದಶಾಸ್ತ್ರ ಪುರಾಣಗಳು, ಬುದ್ಧಿಯ ವಿಕಾಸ, ತಿಳಿಯುವ ಶಕ್ತಿ, ಪ್ರಚೋದನೆ, ಜ್ಞಾನ, ಇಹಲೋಕದಲ್ಲಿ ಲೌಕಿಕ ವ್ಯವಹಾರ ಜ್ಞಾನ, ಪಾರಮಾರ್ಥಿಕ ಪರಮಾತ್ಮನಿಗೆ ಸಂಬಂಧಪಟ್ಟ ಜ್ಞಾನ, ಯಾವುದನ್ನು ಪಡೆದರೆ ಸುಖ, ಸಂತೋಷಗಳು ಶಾಶ್ವತವಾಗಿ ಸಿಕ್ಕುತ್ತವೆ ಎಂಬ ವಿವೇಚನಾ ಶಕ್ತಿ, ವಿವೇಕಶೀಲತೆ, ಇತ್ಯಾದಿ, ಇತ್ಯಾದಿ. ಇದೆಲ್ಲಕ್ಕೂ ಮೊಟ್ಟಮೊದಲು ಮತ್ತು ಮೂಲ ಪ್ರೇರಣಾಶಕ್ತಿಯೇ ಪರಮಾತ್ಮ, ಆತ್ಮ.

''ದೀಪಂ ಜ್ಯೋತಿಃ ಪರಂಬ್ರಹ್ಮ'', ದೀಪವೇ ಜ್ಯೋತಿ. ಅದೇ ಉತ್ತಮವಾದ ಪರಮ ಶ್ರೇಷ್ಠವಾದ ಬ್ರಹ್ಮ. ಆತ್ಮವೇ ಜ್ಯೋತಿ, ಆತ್ಮವು ಬಿಟ್ಟುಹೋದ ನಂತರ ದೇಹಕ್ಕೆ ಚಲನೆ ಇಲ್ಲ ಮತ್ತು ಬೆಲೆಯೂ ಇಲ್ಲ. ಉಪಯೋಗವೂ ಇಲ್ಲ. ಅದಕ್ಕೆ ಅದು ಪಂಚತ್ವ ಹೊಂದುತ್ತದೆ ಅಥವಾ ಪಂಚಭೂತಗಳಲ್ಲಿ ಅದನ್ನು ಲೀನಮಾಡುತ್ತೇವೆ.

ಜ್ಯೋತಿ ಇರುವಷ್ಟು ಕಾಲ ಬೆಳಕು, ಪ್ರಕಾಶವಿರುತ್ತದೆ. ಅದು ಹೋದ ನಂತರ ತಮಸ್ಸು ಬಂದು ಪ್ರಸರಿಸುತ್ತದೆ. ನಾಶದ ಪ್ರಾರಂಭವಾಗುತ್ತದೆ.

ಆದರೆ ತಮಸಃ ಪರಸ್ತಾತ್ - ತಮಸ್ಸಿನ ಆಚೆ ಜ್ಯೋತಿಯು ಇದ್ದೇಇರುತ್ತದೆ.

ಜ್ಯೋತಿಯೇ ಪರಮಾತ್ಮ. ಮಾಯೆಯ ಪ್ರಭಾವದಿಂದ ಇದು ಮುಚ್ಚಲ್ಪಟ್ಟಿರುತ್ತದೆ. ಮಾಯೆಯನ್ನು ದಾಟಿದರೆ ಪ್ರಕಾಶವು ಸ್ವಯಂ ಬರುತ್ತದೆ.

- ಅದರಿಂದಲೇನೇ ಜ್ಯೋತಿಷೇ ನಮಃ ಎಂದು ಪರಮಾತ್ಮನಿಗೆ ಉದ್ದೇಶಿಸುತ್ತೇವೆ.

557. **ಲೋಕಸ್ವರೂಪಾಯ ನಮಃ**

ಸಕಲ ಬ್ರಹ್ಮಾಂಡಗಳನ್ನು ಸೃಷ್ಟಿಮಾಡಿ ಪರಮಾತ್ಮನು ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾಗಿ ಪ್ರಖ್ಯಾತನಾಗಿದ್ದಾನೆ. ಅವುಗಳ ರೂಪರೇಖೆಗಳನ್ನು ತಾನೇ ವಿಭಾಗಿಸಿಕೊಂಡಿದ್ದಾನೆ. ತನ್ನ ಆತ್ಮಗಳ ನೆಲೆಗಾಗಿ ಲೋಕಗಳನ್ನು ಪ್ರಕೃತಿ, ಪುರುಷ ಮತ್ತು ಮೋಹಕ್ಕಾಗಿ ಮಾಯೆಯನ್ನು ತನ್ನಿಂದಲೇ ವಿಭಾಗಿಸಿಕೊಂಡಿದ್ದಾನೆ. ಆತ್ಮಗಳು ಕಲ್ಪಾದಿಯಿಂದ ಕಲ್ಪಾಂತದವರೆಗೆ ಸಮಯ

- ಕಾಲದ ಮಹಿಮೆಯ ಪ್ರಭಾವದಲ್ಲಿ ನಡೆಯಲು ಅನೇಕ ಪರಿಸರಗಳನ್ನು ಸಚರಾಚರ ವಸ್ತುಗಳನ್ನು ಅನುಕೂಲತೆ ಅನಾನುಕೂಲತೆಗಳನ್ನು ಮಾಡಿರುತ್ತಾನೆ. ಈ ಲೋಕಗಳ ಸ್ವರೂಪವೇ ''ಪರಮಾತ್ಮನ ರೂಪ''.

ಲೋಕ ಎಂದರೆ ನೋಡುವ ವಸ್ತುಗಳು, ಪಂಚೇಂದ್ರಿಯಗಳಿಂದ ಗ್ರಹಿಸಲ್ಪಡುವ ಸಾಧನೆಗಳು.

ಇಂತಹ ಲೋಕಗಳನ್ನು ಸೃಷ್ಟಿಸಿ, ನಡೆಯಿಸುವ, ನಡೆಯುವ ರೂಪ ರೇಖೆಗಳನ್ನು ಮಾಡಿರುವ ಪರಮಾತ್ಮನು ಬಹಳ ಶಕ್ತಿವಂತನು, ಬುದ್ಧಿವಂತನು, ಚತುರನು, ಇತ್ಯಾದಿ. ಅವನಿಗೆ ಸಮಾನರು ಯಾರೂ ಇಲ್ಲ. ಇದೇ ಅವನ ''ಏಕಮೇವಾದ್ವಿತೀಯ'' ಲಕ್ಷಣ. ಅಸಮಭವ ಪರಮಾತ್ಮ. ಅದ್ವಿತೀಯನು, ಪರಮ ಶ್ರೇಷ್ಠನು ಸೃಷ್ಟಿಕರ್ತನು, ಮಹಾಮಹಿಮನು - ಲೋಕವೇ ಅವನು, ಅದರ ಸ್ವರೂಪವೇ ಅವನು - ಲೋಕಸ್ವರೂಪಾಯ ನಮಃ.

558. ಜ್ಯೋತಿರ್ಜ್ಞಾಯ ನಮಃ

ಜ್ಯೋತಿ - ಬೆಳಕನ್ನು, ಜ್ಞಾನವನ್ನು ಸಚ್ಚಿದಾನಂದವನ್ನು, ಜ್ಞಾ - ತಿಳಿದವನು ಯಾರೋ ಅವನು - ಸಾಕ್ಷಾತ್ ಪರಮಾತ್ಮನು.

ಬೆಳಕಿನ ವಿಚಾರ, ಜ್ಞಾನದ ಬೆಲೆ, ಉಪಯೋಗ, ವಿಸ್ತೀರ್ಣವನ್ನು ಅನೇಕರು ತಿಳಿದಿರುತ್ತಾರೆ. ಸಕಲ ಪ್ರಾಣಿವರ್ಗವೂ ತಿಳಿದಿರುತ್ತದೆ. ಸಕಲ ಬ್ರಹ್ಮಾಂಡದ ಸಚರಾಚರ ವಸ್ತುಗಳು, ಜೀವಿಗಳು ತಿಳಿದಿರುತ್ತವೆ. ಸಕಲ ದೇವತೆಗಳು, ದೇವರುಗಳು, ಲೋಕಗಳು, ಹದಿನಾಲ್ಕು ಲೋಕಗಳು, ಲೋಕವಾಸಿಗಳು ತಿಳಿದಿರುತ್ತಾರೆ. ಸೃಷ್ಟಿಕರ್ತನಾದ ಬ್ರಹ್ಮದೇವನು, ಸ್ಥಿತಿಕರ್ತನಾದ ವಿಷ್ಣುವು, ಲಯಕರ್ತನಾದ ಶಿವನು, ಅವರ ಪ್ರಿಯರಾದ ಸರಸ್ವತಿ, ಲಕ್ಷ್ಮಿ, ಪಾರ್ವತಿಗಳು ಇತರ ದೇವ ದೇವಿಯರು ಸಹ ಜ್ಯೋತಿಯ ವಿಚಾರ, ಜ್ಞಾನದ ವಿಚಾರಗಳನ್ನು ತಿಳಿದಿರುತ್ತಾರೆ. ಆದರೆ ಯಾರು ಯಾರು ಎಷ್ಟೆಷ್ಟು ಪ್ರಮಾಣದಲ್ಲಿ ತಿಳಿದಿರುತ್ತಾರೆ ಎಂಬುದು ಪ್ರಶ್ನೆ. ಯಾರೇ ದೇವ ದೇವತೆಯರೂ ಸೇರಿ ಯಾರೇ ಎಷ್ಟು ತಿಳಿದರೂ ಇನ್ನು ತಿಳಿದವರು ಇರುತ್ತಾರೆ. ಅತಿ ಉತ್ತಮವಾದ ಉದಾತ್ತವಾದ ಜ್ಯೋತಿಯನ್ನು ಜ್ಞಾನವನ್ನು ತಿಳಿದವರು ಬ್ರಹ್ಮ ವಿಷ್ಣು ಮಹೇಶ್ವರರೇ ಎಂದು ತಿಳಿದರೂ ಇನ್ನೂ ತಿಳಿದವನು ಪರಬ್ರಹ್ಮ ಇದ್ದೇ ಇದ್ದಾನೆ! ಜ್ಞಾನವು ಎಷ್ಟಿದೆ, ತಿಳಿಯುವ ರೀತಿ, ಉಪಯೋಗಿಸುವ ರೀತಿ ಎಲ್ಲವು ಪರಬ್ರಹ್ಮನೊಬ್ಬನಿಗೇ ಗೊತ್ತು. ಅವನನ್ನು ಬಿಟ್ಟು ತಿಳಿದವರು ಯಾರೂ ಇಲ್ಲ. ಸಕಲ ಬ್ರಹ್ಮಾಂಡಗಳಿಗೂ ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾಗಿ ನಡೆಸುವ ಪರಬ್ರಹ್ಮನಿಗೆ ಸಮಾನರುಂಟೆ! ಸಕಲವನ್ನು ತನ್ನ ಇಚ್ಛಾಮಾತ್ರದಿಂದ ಸೃಷ್ಟಿಸಿ ನಡೆಸುವವನ ಜ್ಞಾನ ಜ್ಯೋತಿಯ ಪರಿಪೂರ್ಣತೆ ಮತ್ಯಾರಿಗೆ ಗೊತ್ತು. ಅವನೊಬ್ಬನಿಗೇ ಇದು ಮೀಸಲು.

ನಮ್ಮಲ್ಲಿರುವ, ಸಕಲ ಜೀವಿಗಳಲ್ಲಿಯೂ ಇರುವ ಆತ್ಮನೂ ಹಾಗೆಯೇ - ಪರಮಾತ್ಮನ ರೀತಿಯೇ ಪರಿಪೂರ್ಣ. ಆದರೆ ಅದು ಸಂಸ್ಕಾರ, ಸ್ಥೂಲ ಶರೀರ, ಸೂಕ್ಷ್ಮ ಶರೀರಗಳಿಂದ ಆವರಿಸಲ್ಪಟ್ಟಿರುವುದರಿಂದ ಮತ್ತು ಪ್ರಕೃತಿ, ಪುರುಷ ಮತ್ತು ಮಾಯೆಯನ್ನು ದಾಟಲಸಾಧ್ಯವಾದ್ದರಿಂದ ಈ ಜ್ಯೋತಿರ್ಜ್ಞತೆಯು ಹೊರಬೀಳುವುದಿಲ್ಲ. ಸೂರ್ಯನಿಗೆ ಮೋಡಗಳು ಮುಚ್ಚಿದಂತೆ. ಯಾವಾಗ ಆವರಣಗಳು ನಾಶವಾಗುವುವೋ ಆಗ ಆತ್ಮವೂ ಸಹ ಪರಮಾತ್ಮನಲ್ಲಿ ಐಕ್ಯವಾಗುತ್ತದೆ. ಇದೇ ಸಕಲ ಜೀವಿಗಳ ಪರಮ ಸಾಧನೆಯ ಪರಮೋಚ್ಚ ಗುರಿ. ಇದನ್ನು ಪರಮಾತ್ಮನೇ ತನ್ನ ಕೃಪೆಯಿಂದ ಕೊಡಬೇಕು.

**559. ಜ್ಯೋತಿಷಾಂ ಪತಯೇ ನಮಃ**

ಜ್ಯೋತಿಷಾಂ - ಜ್ಯೋತಿಗಳಿಗೆ, ಪತಿಃ - ಒಡೆಯನು ಯಾರೋ ಅವನು - ಪರಬ್ರಹ್ಮ. ಸೂತ್ರಧಾರಿ. ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನು.

ಸಕಲ ಜ್ಯೋತಿಗಳಿಗೂ ಒಡೆಯನು. ತೀಕ್ಷ್ಣತೆಯಲ್ಲಿ ವಿಸ್ತಾರದಲ್ಲಿ, ಪರಿಣಾಮದಲ್ಲಿ, ಎಲ್ಲ ರೀತಿಯಲ್ಲಿಯೂ ಈತನೇ ಅತ್ಯುತ್ತಮನು, ಪರಮ ಪುರುಷನು. ಇವನಿಗಿಂತ ಮೇಲಿನವರು ಇಲ್ಲ. ಇವನೇ ಜ್ಯೋತಿಗಳಿಗೆ ಪತಿಯು. ಇವನಿಗೆ ಮತ್ತೆ ಪತಿಗಳು ಯಾರೂ ಇಲ್ಲ. ಪರಂಜ್ಯೋತಿಯು. ಒಂದು ಗುಟ್ಟಿನ ವಿಶಯವೆಂದರೆ ಯಾವ ದೇವನನ್ನು ಅಥವಾ ದೇವಿಯನ್ನು ಕುರಿತು ಸಹಸ್ರನಾಮವನ್ನು ಹೇಳುತ್ತಿರುತ್ತೇವೆಯೋ ಆ ದೇವ / ದೇವಿಯೇ ಇತರ ಸಕಲ ದೇವ / ದೇವತೆಗಳಿಗಿಂತ ಮಿಗಿಲಾದ ವ್ಯಕ್ತಿ ಎಂದು ಹೊಗಳುತ್ತೇವೆ. ಎಂದ ಮೇಲೆ ಸಕಲ ದೇವ ದೇವಿಯರು ಪರಮೋಚ್ಚರು, ಪರಂಜ್ಯೋತಿ, ಪರಬ್ರಹ್ಮನೇ. ಈ ದೇವ ದೇವಿಯರ ವಿಭಜನೆಯು ಜೀವಕೋಟಿಯ ವಿಶಾಲ ಸಮೂಹಕ್ಕೆ ಹೊಂದುವಂತೆ ಆಗಿದೆ. ಯಾರು ಯಾವ ದೇವರನ್ನು ಬೇಕಾದರೂ ಪೂಜಿಸಬಹುದು, ಆರಾಧಿಸಬಹುದು. ಅದರ ಮೂಲಕ ಭಕ್ತಿ, ಜ್ಞಾನ, ವೈರಾಗ್ಯ, ಮುಕ್ತಿಯನ್ನು ಪಡೆಯಬಹುದು. ವಿರೋಧಾಭಾಸಗಳಿಗೆ, ಪೈಪೋಟಿಗೆ, ವಾದ ವಿವಾದಗಳಿಗೆ ಇಲ್ಲಿ ಜಾಗವಿಲ್ಲ. ಗುರಿಯು ಒಂದೇ ಮುಖ್ಯ. ಸೇರುವ ದಾರಿಗಳು ಬೇರೆ ಬೇರೆ. ಆದರೂ ಕೊನೆಯಲ್ಲಿ ಪಡೆಯುವುದು ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಸಾರೂಪ್ಯ, ಪುನರಾವೃತ್ತಿರಹಿತ ಲೋಕ, ಪದವಿ, ಪರಮಾತ್ಮನ ಸಾಕ್ಷಾತ್ಕಾರ.

ಆದ್ದರಿಂದ ನಮ್ಮ ನಮ್ಮ ಆರಾಧ್ಯದೈವಗಳಲ್ಲಿ ಪೂರ್ಣ ವಿಶ್ವಾಸ, ಅನನ್ಯ ಶ್ರದ್ಧೆ, ಅವ್ಯಭಿಚಾರಿಣೀ ಭಕ್ತಿಗಳನ್ನು ಇಟ್ಟು ಆರಾಧಿಸಿದರೆ ಗುರಿಯನ್ನು ಸಾಧಿಸುವುದರಲ್ಲಿ ಸಂಶಯವಿಲ್ಲ.

''ಸಂಶಯಾತ್ಮಾ ವಿನಶ್ಯತಿ'' - ಅದರಿಂದ ನಂಬಿಕೆಯೇ ಸರ್ವಸ್ವದ ಜೀವಾಳ.

ಈ ಸಕಲ ದಾರಿಗಳಿಂದ ತಲಪುವುದು ಜ್ಯೋತಿಗಳ ಪತಿಯನ್ನೇ. ಅದಕ್ಕಾಗಿಯೇ ಅವನಿಗೆ ಜ್ಯೋತಿಷಾಂ ಪತಯೇ ನಮಃ ಎಂದು ನಮಸ್ಕರಿಸುತ್ತೇವೆ.

560. ಸ್ವಾಹಾಕಾರಾಯೈ ನಮಃ (ಸ್ವಾಹಾಕಾರಾಯ ನಮಃ)

ಸ್ವಾಹಾ - ಸ್ವಾಹಾ ದೇವಿಯು ಅಗ್ನಿಯ ಪತ್ನಿ, ಅಗ್ನಿದೇವನ ಹೆಂಡತಿ, ದಕ್ಷಬ್ರಹ್ಮನ ಪುತ್ರಿ.

ದೇವರಿಗೆ ಅರ್ಪಿಸಿದ ಆಹುತಿ, ದೇವರಿಗೆ ಅರ್ಪಿಸುವಾಗ ಹೇಳುವ ಶಬ್ದ.

ಸ್ವಾಹಾಕಾರ - ''ಸ್ವಾಹಾ'' ಎನ್ನುವ ಶಬ್ದ ಸ್ವಾಹಾ ದೇವಿಯ ಭಾವ. ''ಸ್ವಾಹಾ'' ಕಾರವಿಲ್ಲದೆ ಅರ್ಪಿಸಿದ ವಸ್ತುವನ್ನು ಅಗ್ನಿಯು ಸ್ವೀಕರಿಸುವುದಿಲ್ಲ. ಇದು ಅಗ್ನಿದೇವನು ಸ್ವಾಹಾದೇವಿಗೆ ಇತ್ತ ''ವರ''. ಎಲ್ಲೆಲ್ಲಿ ಅಗ್ನಿ ದೇವನು ಇರುವನೋ ಅಲ್ಲಿ ಸ್ವಾಹಾ ದೇವಿಯು ಇರುತ್ತಾಳೆ ಮತ್ತೂ ಹೆಚ್ಚೆಂದರೆ ಯಾವ ದೇವತೆಗೇ ಆಗಲಿ ಯಾರು ಏನೇ ಅರ್ಪಿಸಿದರೂ ಅದು ''ಸ್ವಾಹಾ'' ಕಾರದ ಮೂಲಕ, ಅಂದರೆ ಸ್ವಾಹಾ ದೇವಿಯು ಮೂಲಕವೇ ತಲಪಬೇಕು. ಇದು ಪರಮಾತ್ಮನು ಸ್ವಾಹಾ ದೇವಿಗೆ ಇತ್ತ ವರ. ಸ್ವಾಹಾ ಎಂದು ಅರ್ಪಿಸಿ ''ನ ಮಮ'' ಎಂದು ಉಚ್ಚರಿಸಿದರೆ ಪರಮಾತ್ಮನಿಗೆ ಸೇರುವುದು ಶತಸ್ಸಿದ್ಧ.

''ಸ್ವಾಹಾ'' ಎಂದರೆ ಪರಮಾತ್ಮನೇ ಇದನ್ನು ಸ್ವೀಕರಿಸು ಎಂದು ಅರ್ಥ. ಅರ್ಥವತ್ತಾಗಿ ಶ್ರದ್ಧೆಯಿಂದ ಭಕ್ತಿಯಿಂದ ಸ್ವಾಹಾ ದೇವಿಯ ಮೂಲಕ ಅರ್ಪಿಸಿದರೆ ಅಗ್ನಿದೇವನು ತೃಪ್ತನಾಗಿ ಪ್ರಜ್ವಲಿಸುತ್ತಾನೆ ಮತ್ತು ಅಗ್ನಿಯೇ ಹವ್ಯವಾಹನನಾಗಿ ಹವ್ಯವನ್ನು ತೆಗೆದುಕೊಂಡು ಹೋಗುವ ಸಾಧನವಾಗಿ ಪರಮಾತ್ಮನಿಗೆ ಮುಟ್ಟಿಸುತ್ತಾನೆ. ಪರಮಾತ್ಮನು ತೃಪ್ತನಾದ ಎಂಬುದನ್ನು ಅಗ್ನಿಯು ಪುನಃ ಪ್ರಜ್ವಲಿಸುವುದರಿಂದ ವ್ಯಕ್ತ ಪಡಿಸುತ್ತಾನೆ. ಅದಕ್ಕೆ ''ಸ್ವಾಹಾ'' ಕಾರಾಯೈ ನಮಃ ಎಂದು ನಮಸ್ಕರಿಸುತ್ತೇವೆ. ಪರಮಾತ್ಮನ ಅಪೂರ್ವ ರೂಪವೇ ಇದು.

ದಕ್ಷಬ್ರಹ್ಮ ಅಥವಾ ದಕ್ಷ ಪ್ರಜಾಪತಿಯು ಬ್ರಹ್ಮನ ಮಗ. ಸ್ವಾಯಂಭುವಿನ ಮೂರನೆಯ ಮಗಳು ಪ್ರಸೂತಿ. ಪ್ರಸೂತಿಯನ್ನು ದಕ್ಷನಿಗೆ ಕೊಟ್ಟು ಮದುವೆ ಮಾಡಿದರು. ಇವರಿಗೆ ಹದಿನಾರು ಹೆಣ್ಣು ಮಕ್ಕಳು. ಮೊದಲನೆಯ 13 ಕನ್ಯೆಯರನ್ನು ಯಮನಿಗೆ ಕೊಟ್ಟು ವಿವಾಹ ಮಾಡಿದರು, ಹದಿಮೂರನೆಯವಳಾದ ಮೂರ್ತಿ ಎಂಬುವಳಲ್ಲಿ ನರ, ನಾರಾಯಣರು ಹುಟ್ಟಿದರು. ಇವರೇ ಅಪ್ರತಿಮ ತಪೋನಿಷ್ಠರು. ದ್ವಾಪರ ಯುಗದಲ್ಲಿ ಕೃಷ್ಣಾರ್ಜುನರಾಗಿ ಹುಟ್ಟಿದವರು ಇವರೇ.

ಹದಿನಾಲ್ಕನೆಯ ಮಗಳು ಸ್ವಾಹಾದೇವಿ, ಇವಳನ್ನು ಅಗ್ನಿಗೆ ಕೊಟ್ಟು ಮದುವೆ ಮಾಡಿದರು.

ಹದಿನೈದನೆಯವಳು ಸ್ವಧಾ, ಇವಳನ್ನು ಪಿತೃದೇವತೆಗಳಿಗೆ ಕೊಟ್ಟರು.

ಹದಿನಾರೆಯವಳು ಸತೀದೇವಿ. ಈಕೆಗೆ ರುದ್ರನೇ ಪತಿ. ಮಕ್ಕಳಾಗುವ ಮುನ್ನವೇ ದಕ್ಷಯಜ್ಞದಲ್ಲಿ ದೇಹತ್ಯಾಗ ಮಾಡಿದಳು.

**561. ಸ್ವಧಾಕಾರಾಯ ನಮಃ**

ಸ್ವಧಾದೇವಿ ದಕ್ಷ ಪ್ರಜಾಪತಿಯ ಮಗಳು, ಪಿತೃದೇವತೆಗಳ ಪತ್ನಿ.

ಸ್ವಧಾ - ಪಿತೃದೇವತೆಗಳಿಗೆ ಅರ್ಪಿಸುವ ಅನ್ನ. ಪಿತೃದೇವತೆಗಳಿಗೆ ಅನ್ನವನ್ನು ಅರ್ಪಿಸುವಾಗ ಅನ್ನುವ ಉದ್ಗಾರಮಂತ್ರ.

ಸ್ವ - ಧಾ - ತನ್ನ ಸ್ವಂತ ಇಚ್ಛೆಗೆ ಸ್ವಧಾ ಎನ್ನುತ್ತೇವೆ.

ಇಲ್ಲಿ ಉದ್ಗಾರ ಮಂತ್ರವೆಂದು ಅರ್ಥಮಾಡಿದಾಗ - ಮಂತ್ರಗಳು ಎಲ್ಲವೂ ಪರಮಾತ್ಮನ ರೂಪಗಳು. ಮಂತ್ರಗಳನ್ನು ಉದ್ದೇಶಿಸುವ ದೇವ ದೇವತೆಗಳು ಪರಮಾತ್ಮನ ರೂಪವೇ. ಮಂತ್ರಗಳು ಪರಮಾತ್ಮನನ್ನೇ ಸೇರುತ್ತವೆ ಮತ್ತು ಈ ಸ್ವಧಾ ಮಂತ್ರವು ಮನುಷ್ಯರು ಅರ್ಪಿಸಿದ ಅನ್ನವನ್ನು ಪಿತೃದೇವತಗಳಿಗೆ ಮುಟ್ಟಿಸುತ್ತದೆ. ಅವರಿಗೆ ಪ್ರಿಯವಾದ ಮಂತ್ರನಾಮ - ಸ್ವಧಾಕಾರ.

ಪಿತೃದೇವತೆಗಳ ಪತ್ನಿಯೇ ಸ್ವಧಾದೇವಿಯಾಗಿರುವುದರಿಂದ ಆಕೆಯ ಮಂತ್ರವನ್ನೇ ಮಾನುಷರು ಉಪಯೋಗಿಸಿ ಕವ್ಯವನ್ನು ಕೊಡುವುದರಿಂದ ಅವರು ಬಹಳ ಬೇಗ ಸಂತೃಪ್ತರಾಗುತ್ತಾರೆ. ಮತ್ತು ಪ್ರಾರ್ಥಿಸಿದ ಪ್ರಾರ್ಥನೆಯನ್ನು ಬಹಳ ಬೇಗ ಕೊಡುತ್ತಾರೆ. ಸಂತತಿಯು ವೃದ್ಧಿಯನ್ನು ಮಾಡುತ್ತಾರೆ.

ಸ್ವ - ತನ್ನ ಸ್ವಂತ ಇಚ್ಛೆ ಎಂದಾಗ, ಈ ಇಚ್ಛೆಯನ್ನು ಉತ್ಪನ್ನ ಮಾಡುವುದು ಮನಸ್ಸಿನಲ್ಲಿ. ಬುದ್ಧಿಯಿಂದ ಈಡೇರುತ್ತದೆ. ಮನಸ್ಸೇ ಪರಮಾತ್ಮ. ಬುದ್ಧಿಯೇ ಪರಮಾತ್ಮ. ಅಹಂಕಾರವೇ ಪರಮಾತ್ಮನ ಸ್ವರೂಪ. ಚಿತ್ತವೇ ಆನಂದವನ್ನು ಕೊಡುತ್ತದೆ. ಆಗ ಪರಮಾತ್ಮನನ್ನೆ ಆರಾಧಿಸಿದ ಹಾಗೆ ಆಗುತ್ತದೆ. ಅದಕ್ಕೂ - ಸ್ವಧಾಕಾರಾಯ ನಮಃ ಎಂದು ನಮಸ್ಕರಿಸುತ್ತೇವೆ.

**562. ವಷಟ್ಕಾರಾಯ ನಮಃ**

ವಷಟ್ಕಾರ - ವೇದಮಂತ್ರ. ಪರಮಾತ್ಮನನ್ನು ನಿರ್ದೇಶಿಸಿ ಹೇಳುವ ಉದ್ಗಾರಮಂತ್ರ. ಈ ಮಂತ್ರದಿಂದ ಪರಮಾತ್ಮನು ತೃಪ್ತನಾಗಿ ಯಜ್ಞಕರ್ತೃವಿಗೆ ಈಪ್ಸಿತ ವರವನ್ನು ದಯಪಾಲಿಸುತ್ತಾನೆ. ಪರಮಾತ್ಮನನ್ನು ವಷಟ್ಕಾರಾಯ ನಮಃ ಎಂದು ನಮಸ್ಕರಿಸುತ್ತೇವೆ.

(ವಷಟ್ಕಾರ :- ಯಜ್ಞಸ್ವರೂಪನು. ಭಗವಂತನನ್ನೆ ಉದ್ದೇಶಿಸಿ ಯಜ್ಞಮಾಡುವುದರಿಂದ ಅವನು ವಷಟ್ಕಾರನು.)

ಅಥವಾ ಯಾವ ಯಜ್ಞದಲ್ಲಿ ವಷಟ್ಕಾರವು ಮಾಡಲ್ಪಡುವುದೋ ಆ ಯಜ್ಞಕ್ಕೆ ವಷಟ್ಕಾರ ಎಂದು ಹೆಸರು.

ಯಜ್ಞವು ವಿಷ್ಣುವೇ ಆಗಿರುವುದರಿಂದ ವಿಷ್ಣುವಿಗೂ ''ವಷಟ್ಕಾರ'' ಎಂದು ಹೆಸರು. - ವಿ.ಸ. 3)

563. ಕೃಪಾನಿಧಯೇ ನಮಃ

ಪರಮಾತ್ಮನು ಸಕಲ ಜೀವಿಗಳಿಗೂ ಈಪ್ಸಿತಾರ್ಥವನ್ನು ದಯಪಾಲಿಸುವ ನಿಧಿ, ಕಾಮಧೇನು, ಕಲ್ಪವೃಕ್ಷ, ಕಲ್ಪತರು, ಸಾಗರ. ಇಲ್ಲಿ ಎಷ್ಟು ಜೀವಿಗಳಿಗೆ ಎಷ್ಟು ದಯಪಾಲಿಸಿದರೂ ಬತ್ತದ ಸಾಗರ. ನಿಧಿ ಎಂದರೆ ಬೆಲೆ ಬಾಳುವ ಅಥವಾ ಅದರ ಬೆಲೆಯನ್ನು ಇಷ್ಟೇ ಎಂದು ನಿರ್ಧರಿಸಲು ಅಶಕ್ಯವಾದ ವಸ್ತು. ಅದು ಪರಮಾತ್ಮನೇ! ಅವನು ಅಪಾರ ಕರುಣಾಮಯ, ಕೃಪಾಸಾಗರ. ದಯೆಯನ್ನು ಕರುಣೆಯನ್ನು ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಹರಡಿರುವವನು. ದಯೆಯಲ್ಲಿ ಇವನಿಗೆ ಸಮರು ಯಾರೂ ಇಲ್ಲ. ನಮಗೆ ಏನೇ ಕಷ್ಟ ಕಾರ್ಪಣ್ಯ, ದುಃಖಗಳಿದ್ದರೂ ಅಂತಹ ಸ್ಥಿತಿಯಲ್ಲಿಯೂ ಬದುಕಿರಲು ಪರಿಸರವನ್ನು, ಜೀವಿಗಳನ್ನು ಕರುಣಿಸಿದ್ದಾನೆ. ಉತ್ತಮ ಸ್ಥಿತಿಯು ತಾನಾಗಿಯೇ ಬರುವಂತೆ ಮಾಡಲು ಪರಿಸರವನ್ನು ಇಟ್ಟಿದ್ದಾನೆ. ದುಃಖವು ಏನೇ ಇರಲಿ, ಹೇಳಿಕೊಳ್ಳಲು, ಹೇಳಿಕೊಂಡು ಅಳಲು ತನ್ನನ್ನೇ ಉದ್ದೇಶಿಸುವಂತೆ ಮನಸ್ಸನ್ನು ಮತ್ತು ಬುದ್ಧಿಯನ್ನು ಪ್ರೇರೇಪಿಸುತ್ತಾನೆ. ತನ್ನನ್ನೇ ಅಲ್ಲಿ ಒದಗಿಸಿಕೊಳ್ಳುತ್ತಾನೆ. ಇದಕ್ಕಿಂತ ಬೇರೆ ಯಾರಿದ್ದಾರೆ. ದುಃಖದಲ್ಲಿ, ಉದ್ವೇಗದಲ್ಲಿ ಆಗುವ ಮನಸ್ಸಿಗೆ ಬಂದಂತೆ ನಿಂದೆ ಮಾಡಿದಾಗ ತನಗಾಗಿಯೇ ಆ ನಿಂದೆಗಳನ್ನು ಒಳಪಡಿಸಿಕೊಳ್ಳುತ್ತಾನೆ. ಇದಕ್ಕಿಂತ ಕರುಣೆಯು ಬೇಕೇ! ಎಂತಹ ಅನಿಷ್ಟಗಳು ಬಂದಾಗ್ಯೂ, ಮೊದಲು ನಿಂದಿಸುವುದು ವಿಧಿಯನ್ನು, ಹಣೇಬರಹವನ್ನು, ದೇವರನ್ನು! ಆಗ ಇತರ ಗುರಿಗಳಿಗಿಂತ ತಾನೇ ಮೊದಲ ಗುರಿಯಾದ ಕೃಪೆಗಿಂತ ಬೇರೆ ಕೃಪೆ ಬೇಕೆ! ಯಾರು ಏನೇ ನಿಂದಿಸಿದರೂ ಮೂಕನಾಗಿ ಎಲ್ಲವನ್ನು ಕೇಳುತ್ತಾ ತನ್ನಲ್ಲಿಯೇ ಲೀನಮಾಡಿಕೊಳ್ಳುತ್ತಾನೆ. ಅಂದ ಎಲ್ಲ ನಿಂದೆಗಳೂ ಅವನಲ್ಲಿಯೇ ಲೀನವಾಗಿಬಿಡುತ್ತವೆ. ಇನ್ನು ನಿಂದೆಗಳನ್ನು ಹೇಳಿ ಹೇಳಿ ಬೇಸತ್ತಾಗ ಸಮಾಧಾನ ಎಂದಿಗೆ ಬರುವುದೋ ಆಗ ಪಶ್ಚಾತ್ತಾಪದ ಬಾಣಗಳು ಅವನೆಡೆಗೆ ಪ್ರಾರಂಭವಾಗುತ್ತವೆ. ನಂತರ ಇವೂ ಮುಗಿದ ಮೇಲೆ ಪುನಃ ಸಮಾಧಾನದ ನುಡಿಗಳು, ಆತ್ಮನಿಂದೆಗಳು ಪ್ರಾರಂಭ.... ಕೊನೇ ಹಂತದಲ್ಲಿ ವಿಧಿಯಿಲ್ಲದೆ ಬೇರೆ ಯಾರೂ ಸಮಾಧಾನಪಡಿಸಲು ಬಾರದಿರಲು ಅಥವಾ ಬಂದರೂ ಸಮಾಧಾನ ಸಾಧ್ಯವಿಲ್ಲದಿರಲು ಅಥವಾ ಆ ಅಸಮಾಧಾನ ಕ್ಷಣಿಕ, ತೋರಿಕೆಗಾಗಿ ಎಂದು ಮನಸ್ಸಿನಲ್ಲಿ ಪ್ರೇರೇಪಣೆಯಾದಾಗ ಅವನಲ್ಲಿಗೇ ಶರಣಾಗತರಾಗುತ್ತೇವೆ.

ಇದೇ ಆ ಕೃಪಾಸಾಗರನು ಹಂತ ಹಂತದಲ್ಲಿ ನಮ್ಮ ಅಹಂಭಾವವನ್ನು ಮುರಿದು ಜ್ಞಾನ ಜ್ಯೋತಿಯನ್ನು ಹಂತ ಹಂತದಲ್ಲಿ ಎಳೆ ಎಳೆಯಾಗಿ ಬೆಳಗಿಸಿ,

ಕೊನೆಗೆ ಪರಮಜ್ಯೋತಿಯನ್ನು ತೋರಿಸಿ, ತನ್ನಲ್ಲಿಗೇ ಮನಸ್ಸನ್ನು ಹರಣಮಾಡುತ್ತಾನೆ. ಇದಕ್ಕಿಂತ ಬೇಕೇ ''ಕೃಪಾನಿಧಿ'' ತನ.

ಪರಮ ಕೃಪಾನಿಧಿ - ಇವನಲ್ಲದೆ ಬೇರೆ ಯಾರೂ ಆಗುವುದಿಲ್ಲ, ಆಗಲು ಸಾಧ್ಯವಿಲ್ಲ. ಇವನ ಕೃಪಾನಿಧಿತನ ಅನಂತವಾದ್ದು, ಅವಿನಾಶಿ. ಸದಾ ಇರುವಂತಹದು, ನಿರಂತರವಾದುದು, ಕಳೆದು ಹೋಗದೇ ಇರುವಂತಹದು. ಅದರಿಂದ ಎಷ್ಟು ಸಲ ಹೇಳಿದರೂ ಕಡಿಮೆಯೇ! ಕೃಪಾನಿಧಯೇ ನಮಃ! ಕೃಪಾನಿಧಯೇ ನಮಃ!! ಕೃಪಾನಿಧಯೇ ನಮಃ!!!

ಅನಂತ, ಅವಿನಾಶಿ ಕೃಪೆಯಿಂದ ಭಕ್ತರು ಮೋಹಿತರಾಗಿ ಅವನ ಸೇವೆಯನ್ನು ನಿರಂತರ ಮಾಡುತ್ತಾರೆ. ಅವನಿಗೆ ಸೇವೆಯು ಒಂದೆ! ಎರಡೆ! ಅಗಣಿತ... ಭಜನೆಗಳು, ನಾಮ ಸಂಕೀರ್ತನೆಗಳು, ಪೂಜೆಗಳು, ಧ್ಯಾನಗಳು, ಜಪಗಳು, ಯಜ್ಞಯಾಗಗಳು - ಎಲ್ಲವೂ ಅವನ ಸುಪ್ರೀತಿಗಾಗಿಯೇ!! ಅವನಿಗಾಗಿ! ಅವನಿಗಾಗಿ!! ನಮ್ಮ ಜೀವನವೂ ಅವನಿಗಾಗಿ!! ನಮ್ಮ ಉಸಿರಿನಲ್ಲಿ ನಿಂತು ಹೃದಯದಲ್ಲಿ ನೆಲಸಿ ಹಂಸೋಽಹಂ, ಹಂಸೋಽಹಂ, ಸೋಽಹಂ, ಸೋಽಹಂ ಎಂದು ನಾದ ಮಾಡುತ್ತಾನೆ. ನಮಗೆ ತಿಳಿಯದೆಯೇ ನಾದಮಾಡಿ ದೇಹವನ್ನು ನಾಶವಾಗದಂತೆ ನೋಡುತ್ತಾನೆ. ಇದಕ್ಕಿಂತ ಬೇಕೆ ''ಕೃಪಾನಿಧಿ''ತನ! ದೇಹ ನಾಶವಾದರೂ ಬೇರೊಂದು ದೇಹವಿತ್ತು ಸಂಸ್ಕಾರ ಭಸ್ಮವಾಗುವ ತನಕ ಜೊತೆಯಲ್ಲಿಯೇ ನೆರಳಿನಂತೆ ಕಾಯುತ್ತಾನೆ.... ಇದಕ್ಕಿಂತ ಬೇಕೇ! ''ಕೃಪಾನಿಧಿ''ತನ. ಇದನ್ನು ಜೀವಿಗಳು ತಿಳಿಯುವುದಿಲ್ಲವಲ್ಲಾ ಎಂದು ಎಚ್ಚರಿಸಿ ತನ್ನೆಡೆಗೆ ಎಳೆದು ಶಾಂತಿಯನ್ನು ಕೊಡುತ್ತಾನೆ. ಇದನ್ನೇ ಯಾವ ಜೀವಿಯು ತಾನೇ ಮಾಡುತ್ತದೆ! ನಮಗೆ ನಮ್ಮ ಆತ್ಮನಿಗಿಂತ ಉತ್ತಮವಾದ್ದು ಏನೂ ಇಲ್ಲ.

''ಆತ್ಮಾರ್ಥೇ ಸಕಲಂ ತ್ಯಜೇತ್'' ಎಂಬಂತೆ ಪರಮಾತ್ಮನೊಬ್ಬನೇ ಉದ್ಧಾರಕನು. ಅವನನ್ನು ಬಿಟ್ಟರೆ ಬೇರೆ ಇಲ್ಲ - ಈ ಜ್ಞಾನವನ್ನು ಕೊಡುವುದೇ ಅವನ ಕೃಪಾನಿಧಿತನ - ಹಾಗೆಯೇ ''ಕೃಪಾನಿಧಯೇ ನಮಃ'' ಎಷ್ಟು ಸಾರಿ ಹೇಳಿದರೂ ನೆನೆದರೂ ಅದು ಕಡಿಮೆಯೆ! ಅವನ ಋಣವನ್ನು ನಾವು ತೀರಿಸಲು ಸಾಧ್ಯವೇ ಇಲ್ಲ. ಅದಕ್ಕೇ - ''ನಾಮಜಪ'' ನಿರಂತರ ಮಾಡುವುದು.

*ಅಹಂಕಾರೋ ನಿರಾಕಾರೋ ವೇಗಾಕಾರಶ್ಚ ಶಂಕರಃ ।*
*ಅಕಾರಾದಿಹಕಾರಾಂತ ಓಂಕಾರೋ ಲೋಕಕಾರಕಃ ॥96॥ (564-570)*

**564.** ಅಹಂಕಾರಾಯ ನಮಃ

ಅಹಂ - ನಾನು, ಕಾರ - 'ನಾನು' ತನ. ''ನನ್ನ'' ಎಂಬ ಭಾವವು ಯಾರೋ ಅವನು - ಪರಮಾತ್ಮನು.

ಅಹಂ - ಎಂದರೆ ಗರ್ವ, ನನ್ನದು, ನಾನು ಎಂಬ ಸ್ವಭಾವ. ಪ್ರತಿಯೊಂದು ವಿಶಯದಲ್ಲಿಯೂ ನಾನು, ನನ್ನದು, ನಾನೇ, ನನ್ನದೇ ಎಂದು ಮೊದಲು ಬರುವುದು. ಅದನ್ನೇ ಪ್ರಾಮುಖ್ಯವಾಗಿರಿಸಿಕೊಂಡು ಬೇರೆ ಎಲ್ಲವನ್ನು ಕೀಳು, ಕಡಿಮೆ ಎಂಬ ತುಚ್ಛ ಭಾವನೆಯಿಂದ ಎಣಿಸುವುದು - ಮನುಷ್ಯನ ಸ್ವಭಾವ, ಸ್ವಾಭಿಮಾನ.

ಆದರೆ ನಿಜಸ್ಥಿತಿ ಏನೆಂದರೆ ಪರಮಾತ್ಮನು ಪ್ರತಿಯೊಂದರಲ್ಲಿಯೂ, ಪ್ರತಿಯೊಬ್ಬರಲ್ಲಿಯೂ, ಪ್ರತಿಯೊಂದು ಜೀವಿಯಲ್ಲಿಯು "ನಾನು" ಎಂಬ ವಿಶೇಷತೆಯನ್ನು ಕೊಟ್ಟಿರುತ್ತಾನೆ. ಇದರ ಅವಶ್ಯಕತೆಯು ಪ್ರತಿಯೊಂದೂ ಉದಾತ್ತ ಭಾವವನ್ನು ಹೊಂದಿ ಕಾಪಾಡುವುದರಲ್ಲಿ ಸಹಾಯಮಾಡುತ್ತದೆ. ಆತ್ಮಕ್ಕೆ "ಅಹಂ"ಕಾರ, ಚಿತ್ತ, ಮನಸ್ಸು, ಬುದ್ಧಿ ಎಂಬ ನಾಲ್ಕು ವಿಶೇಷಗಳು ದೇವರು ಕೊಟ್ಟ ಅಲಂಕಾರಗಳು. ಇವುಗಳಿಲ್ಲದೆ ಆತ್ಮಕ್ಕೆ ಉದ್ಧಾರದ ದಾರಿ ಸಿಕ್ಕುವುದಿಲ್ಲ. ಇವುಗಳ ಸಹಾಯದಿಂದ ಪರಮಾತ್ಮನ ಕಡೆಗ ತಿರುಗಿಸುವುದರಿಂದ ಈ ಮಾಯೆಯಿಂದ ತುಂಬಿರುವ ಭವಸಾಗರದಿಂದ ಪಾರಾಗಲು ಸಹಾಯವಾಗುತ್ತದೆ. ಈ ಅಹಂಕಾರವು ಹೇಗಿದೆಯೆಂದರೆ ಮಾಯೆಯಿಂದ ಸೇರಿದಾಗ, ಸಂಸಾರದಲ್ಲಿ ಮುಳುಗಿ ಸ್ವಭಾವವನ್ನು ಮರೆಸಿಬಿಡುತ್ತದೆ. ಜೀವಿಗಳು ಸಂಸಾರ ಸಾಗರದಲ್ಲಿ ಅಂಟಿಕೊಳ್ಳುವುದರಿಂದ ಅಹಂನಿಂದ ಬಿಡಿಸಿಕೊಳ್ಳಲು ಸಾಧ್ಯವಿಲ್ಲ. ಈ ಜ್ಞಾನವು ಬರಬೇಕಾದರೆ ಪರಮಾತ್ಮನ ಕೃಪೆಯು ಬೇಕು. ಸಂಸ್ಕಾರದ ಪ್ರಭಾವ ಅತೀವ ಕ್ಲಿಷ್ಟವಾದುದು.

ಆದರೆ ಪರಮಾತ್ಮನ ಅಹಂಕಾರದಲ್ಲಿ ಅದು ಮಾಯಾತೀತ, ತ್ರಿಗುಣಾತೀತ, ಕಾಲಾತೀತ. ಅದರಿಂದ ಅದು ಶುದ್ಧವಾದುದು. ಅವನೇ ಅಹಂಕಾರ ಸ್ವರೂಪನು. ಅಹಂಕಾರಾಯ ನಮಃ ಎಂದೇ ಅವನನ್ನು ನಮಸ್ಕಾರ ಮಾಡುತ್ತೇವೆ.

**565.** ನಿರಾಕಾರಯ ನಮಃ

ನಿ - ಆಕಾರ, ರೂಪ, ರೇಖೆ ಇಲ್ಲದವನು ಯಾರೋ ಅವನು ನಿರಾಕಾರನು. ಪರಮಾತ್ಮನು ರೂಪ, ಹೀಗೆಯೇ ಇದ್ದಾನೆ, ಇದೇ ಅವನ ರೂಪ, ಅವಯವಗಳು, ಮುಂತಾಗಿ ನಮಗೆ ತಿಳಿದಿರುವ ರೂಪ, ಆಕಾರಗಳಿಂದ ಅವನನ್ನು ಊಹಿಸಿಕೊಳ್ಳುವ ಭಾವನೆಗೆ ಮತ್ತು ಅದರಿಂದ ಬರುವ ಆಕಾರಕ್ಕೆ ಸಾಕಾರಮೂರ್ತಿ ಎಂದು ತಿಳಿಯುತ್ತೇವೆ.

ಎರಡನೆಯದು, ಅವನು ಹೀಗೆಯೇ ಇದ್ದಾನೆ ಎಂದು ಭಾವಿಸದೆ ಅವನಿಗೆ ಯಾವ ಆಕಾರವೂ ಇಲ್ಲ ಎಂದು ಹೇಳುವುದಕ್ಕೆ ನಿರಾಕಾರನು ಎಂದು ಕರೆಯುವುದು. ನಮಗೆ ಅರಿವಿಗೆ ಸಿಕ್ಕದಿರುವ ರೂಪಕ್ಕೆ ನಿರಾಕಾರವೆಂದು ಹೆಸರು.

ಆದರೆ ನಮಗೆ ಸಿಕ್ಕದಿರುವ ಊಹಿಸಲು ಸಾಧ್ಯವಾದ ರೂಪವಿರಬಹುದೆಂದು ಇದರಿಂದ ತಿಳಿಯುತ್ತದೆ.

ಆದರೆ ಮೂರನೆಯದು ಯಾವ ಜೀವಿಗೂ ಸಿಕ್ಕದಿರುವ ಆಕಾರ. ಪರಮಾತ್ಮನೇ ಆದ "ನಿರಾಕಾರ ಸ್ವಭಾವ"ವೇ ಶುದ್ಧ ಸತ್ವವಾದ "ನಿರಾಕಾರ". ಇದನ್ನು ಗುರಿ ಇಟ್ಟುಕೊಂಡು ಪೂಜಿಸುವುದು ಒಂದು ರೀತಿ.

ಈ ಮೂರನೆಯ ರೀತಿಯೇ ಈ ನಾಮದಲ್ಲಿ ಬ್ರಹ್ಮದೇವರು ಉದ್ದೇಶಿಸಿರುವುದು.

ಆತ್ಮದ ವಿಚಾರ - ಆತ್ಮವು ನಿರಾಕಾರ ಸ್ವರೂಪದ್ದು ಎಂದು ಭಾವಿಸಬಹುದು. ಏಕೆಂದರೆ ಆತ್ಮವನ್ನೂ ಸಹ ಯಾರೂ ಗ್ರಹಿಸಿ ನೋಡಿಲ್ಲ. ಆದರೆ ಆತ್ಮವು ಪರಮಾತ್ಮನ ಸ್ವಭಾವವನ್ನೇ ಹೊಂದಿರುತ್ತದೆ. ಇದು ಬಹಳ ಗಹನವಾದ ವಿಚಾರ. ಪರಮಾತ್ಮನ ಅಂಶದಿಂದ ಭವಸಾಗರಕ್ಕೆ ಬಂದು, ನಂತರ ಪರಮಾತ್ಮನಲ್ಲಿಯೇ ಲೀನವಾಗುವುದರಿಂದ ಆತ್ಮನಿಗೂ ಪರಮಾತ್ಮನಿಗೂ ಬಹಳ ಸಾಮ್ಯವಿರುತ್ತದೆ. ಆದರೆ ಆತ್ಮನು ಪರಮಾತ್ಮನ ಅಧೀನ. ಅವನು ಸೂತ್ರಧಾರ, ಇದು ಸೂತ್ರಕ್ಕೆ ಸೇರಿದ ಬೊಂಬೆ. ಪರಮಾತ್ಮನು ಆಡಿಸಿದ ಹಾಗೆ ಆಡಬೇಕು. ಇದೇ ಪರಮಾತ್ಮನ ಮತ್ತು ಆತ್ಮನ ಸಂಬಂಧ. ಈ ನಿರಾಕಾರರೂಪಿಗಳಾದ ಪರಮಾತ್ಮನಿಗೂ ಆತ್ಮನೆಂಬ ತೇಜಶ್ಶಕ್ತಿಗೂ ನಮಸ್ಕಾರಗಳು. ಆಕಾರರಹಿತನಾದ ಪರಮೇಶ್ವರನಿಗೆ ನಮಸ್ಕಾರಗಳು.

**566. ವೇಗಾಕಾರಾಯ ನಮಃ**

ವೇಗ - ಎಂದರೆ ಸಮಯದ ವೇಗ, ಗಾಳಿಯು ಬೀಸುವ ವೇಗ, ಕಾರ್ಯಗಳು ನಡೆಯುವ ವೇಗ ಎಂಬ ಉದಾಹರಣೆಗಳಿಂದ ತಿಳಿಯಬಹುದು. ಬಹಳ ಬೇಗ ನಡೆಯುವ ಕಾರ್ಯಕ್ಕೆ ವೇಗ ಎನ್ನುತ್ತೇವೆ. ಎಷ್ಟು ಹೊತ್ತಾದರೂ ಮುಗಿಯದ ಕಾರ್ಯಕ್ಕೆ "ನಿಧಾನ" ಎನ್ನುತ್ತೇವೆ.

ಅಥವಾ ಬಹಳ ಕಡಿಮೆ ಸಮಯದ ಅಂತರದಲ್ಲಿ ಪ್ರಾರಂಭವಾಗಿ ಮುಗಿಯುವುದಕ್ಕೆ ವೇಗ ಎನ್ನಬಹುದು. ಪರಮಾತ್ಮನು ತನ್ನ ಸಂಕಲ್ಪಮಾತ್ರದಿಂದ ಸಕಲವನ್ನು ಅತಿ ಕಡಿಮೆ ಸಮಯದಲ್ಲಿ ಎಲ್ಲವನ್ನು ನಡೆಸಬಲ್ಲನು, ನಡೆಸುತ್ತಾನೆ.

ಅಥವಾ ಎರಡು ಘಟನೆಗಳು ಸಂಭವಿಸುವಾಗ ಅವುಗಳ ಮಧ್ಯೆ ಇರುವ ಸಮಯವನ್ನು ಕಾಲ ಎನ್ನುತ್ತೇವೆ. ಇದು ಕಡಿಮೆಯಾದಷ್ಟು "ವೇಗ" ಎನ್ನುತ್ತೇವೆ. ಇದು ಜಾಸ್ತಿಯಾದಷ್ಟು "ನಿಧಾನ, ಸಾವಧಾನ" ಎನ್ನುತ್ತೇವೆ.

ವೇಗಗಳಲ್ಲಿ ಅತಿಯಾದುದು - ವಾಯುವೇಗ, ಇದಕ್ಕಿಂತಲೂ ವೇಗವಾದ್ದು - ಮನೋವೇಗ. ಇವುಗಳಲ್ಲಿ ಏನನ್ನಾದರೂ ಯಾವಾಗಲಾದರೂ ಸಾಧಿಸಬಹುದು.

ಪರಮಾತ್ಮನದು ಸಂಕಲ್ಪವೇಗ. ಅಂದುಕೊಂಡ ಕ್ಷಣದಲ್ಲಿಯೇ ಘಟನೆಯು ನಡೆದು ಹೋಗುತ್ತದೆ.

567. ಶಂಕರಾಯ ನಮಃ

ಶಂ - ಶುಭವನ್ನು, ಕರ - ಮಾಡುವವನು ಯಾರೋ ಅವನು.

ಪ್ರಪಂಚದಲ್ಲಿ ಒಬ್ಬರಿಗೆ ಇನ್ನೊಬ್ಬರು ಶುಭವನ್ನು ಕೋರುವವರೇ, ಮಾಡುವವರೇ ಆಗಿದ್ದಾರೆ. ಇದಕ್ಕೆ ಕಾರಣ ಅವರಲ್ಲಿರುವ ಆತ್ಮದ ಸ್ವಭಾವ ಮತ್ತು ಸಾತ್ವಿಕ ಗುಣ. ಆದರೆ ಈ ಆತ್ಮದ ಸ್ವಭಾವ ಮಾಯೆಯಿಂದ ಮುಚ್ಚಿಹೋಗುತ್ತದೆ. ಸಾತ್ವಿಕಗುಣಗಳು ರಜೋ ಮತ್ತು ತಾಮಸ ಗುಣಗಳಿಂದ ಮುಚ್ಚಿಹೋಗುತ್ತಿರುತ್ತವೆ. ಸಂಸ್ಕಾರದಲ್ಲಿ ಪ್ರಾರಬ್ಧ, ಸಂಚಿತ, ಆಗಮ ಕರ್ಮಗಳ ಪ್ರಭಾವದಿಂದ ಸದಾ ಸರ್ವರೂ ಸರ್ವರಿಗಲ್ಲದಿದ್ದರೂ ಸಂಬಂಧದಲ್ಲಿ ಹತ್ತಿರದವರಿಗಾದರೂ ಶುಭವನ್ನೇ ಹಾರೈಸುವ ಸ್ವಭಾವ ಮೇಲೇರುವುದಿಲ್ಲ.

ಆದರೆ ಪರಮಾತ್ಮನೊಬ್ಬನು ಸದಾ ಸರ್ವ ಜೀವಿಗಳಿಗೂ ಶುಭವನ್ನೇ ಮಾಡುತ್ತಾನೆ. ಅವನು ಏನು ಮಾಡಿದರೂ ಶುಭವೇ, ಏಕೆಂದರೆ ಅವನು ಹಿಂದು ಮುಂದಿನದನ್ನು ಚೆನ್ನಾಗಿ ಅರಿತಿರುತ್ತಾನೆ. ನಮ್ಮ ಸಂಸ್ಕಾರದಂತೆ, ಕರ್ಮದಂತೆ ಯಾವ ಸಮಯದಲ್ಲಿ ಏನನ್ನು ದಯಪಾಲಿಸಬೇಕೆಂಬುದನ್ನು ತಿಳಿದಿರುತ್ತಾನೆ. ಕರ್ಮಮಾಡುವವರು ನಾವೇ ಅಂದರೆ ಜೀವಿಗಳೇ ಆದರೂ ನಮ್ಮ ಸಂಸ್ಕಾರದಂತೆ ಪರೋಕ್ಷದಲ್ಲಿ ನಿಂತು ಪ್ರಚೋದಿಸುವವನು ಅವನೇ. ನಮಗೆ ಯಾವ ಅರಿವೂ ಇಲ್ಲದಿರುವುದರಿಂದ ಅವನನ್ನು ಮನಸ್ಸಿಗೆ ಬಂದ ಭಾವನೆಗೆ ತಕ್ಕಂತೆ ಹೊಗಳುತ್ತೇವೆ, ತೆಗಳುತ್ತೇವೆ, ನಂತರ ಪಶ್ಚಾತ್ತಾಪ ಪಟ್ಟು ಮತ್ತೆ ಅವನನ್ನೇ ಮರೆ ಹೋಗುತ್ತೇವೆ. ಏಕೆಂದರೆ ಅವನೊಬ್ಬನೇ ಶಂ ಕರನು - ಶುಭವನ್ನು ಮಾಡುವವನು.

ಎಲ್ಲ ಸಹ ಜೀವಿಗಳಿಗಿಂತಲೂ ಪರಮಾತ್ಮನೊಬ್ಬನೇ ಸಕಲರಿಗೂ ಭೇದ ಭಾವವಿಲ್ಲದೆ, ಪಕ್ಷಪಾತವಿಲ್ಲದೆ ಶುಭವನ್ನು ಮಾಡುವವನು - ಈ ಕಾರಣದಿಂದ ಎಲ್ಲರನ್ನು ನೋಡಿ ನೋಡಿ, ಪರೀಕ್ಷಿಸಿ ನಂತರ ಅವನಲ್ಲಿಯೇ ಶರಣು ಹೋಗುತ್ತೇವೆ.

ಶಂಕರ - ಈಶ್ವರ, ಶಿವ, ಪಾರ್ವತಿಯ ಪತಿ, ಕೈಲಾಸವಾಸಿ, ಪರಮೇಶ್ವರ, ತ್ರಿಮೂರ್ತಿಗಳಲ್ಲಿ ಒಬ್ಬ, ಲಯಕರ್ತ.

ಶಂಕರ - ಕಲ್ಯಾಣಕಾರಕನು.

ಶಂಕರನು - ಶಿವನು, ವಿಷ್ಣುರೂಪನು. ತ್ರಿಮೂರ್ತಿಗಳು ಬೇರೆ ಬೇರೆಯಾದರೂ ಪರಮಾತ್ಮನ ಒಂದೊಂದು ರೂಪಗಳು - ಶಿವನೇ ವಿಷ್ಣು, ವಿಷ್ಣುವೇ ಶಿವನು ಹೇಗೆಂದರೆ -

*ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ ।*
*ಶಿವಸ್ಯ ಹೃದಯಗ್ಂ ವಿಷ್ಣುಃ ವಿಷ್ಣೋಶ್ಚಹೃದಯಗ್ಂ ಶಿವಃ ॥*
*ಯಥಾ ಶಿವಮಯೋ ವಿಷ್ಣುಃ ಏವಂ ವಿಷ್ಣುಮಯಃ ಶಿವಃ ।*
*ಯಥಾಂತರಂ ನ ಪಶ್ಯಾಮಿ ತಥಾ ಮೇ ಸ್ವಸ್ತಿರಾಯುಷಿ ॥*

ಹಾಗೆಯೇ, *ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ ॥*

ಎಲ್ಲ ನಮಸ್ಕಾರಗಳು ಕೇಶವನನ್ನೇ ಸೇರುತ್ತವೆ. ಎಲ್ಲಾ ದೇವರುಗಳೂ ಕಲ್ಯಾಣಕಾರಕ ದೇವ ದೇವತೆಗಳೇ! ಅನುಮಾನವಿಲ್ಲ, ಭೇದವಿಲ್ಲ, ಭಕ್ತಿಯು ಅಲ್ಲಿಗೆ ಹೋಗುತ್ತದೆ ಅಷ್ಟೆ!!

**568. ಅಕಾರಾದಿ ಹಕಾರಾಂತಾಯ ನಮಃ**

ವರ್ಣಮಾಲೆಯಲ್ಲಿ "ಅ" ಕಾರವು ಮೊದಲನೆಯ ಅಕ್ಷರ ಮತ್ತು "ಹ" ಕಾರವು ಕೊನೆಯ ಅಕ್ಷರ. ಈ ಎರಡು ಅಕ್ಷರಗಳಲ್ಲಿಯೂ ಪರಮಾತ್ಮನೇ ಇದ್ದಾನೆ.

ಅಕಾರವು ಉಕಾರ ಮತ್ತು ಮಕಾರ ಮತ್ತು ಅನುಸ್ವಾರ "ಮ್"ದೊಡನೆ ಸೇರಿ "ಓಂ"ಕಾರವಾಗುತ್ತದೆ. ಸಕಲ ದೇವ ದೇವತೆಗಳೂ ಅವರ ಶಕ್ತಿಯೂ ಓಂ ಎಂಬುದರಲ್ಲಿ ಲೀನವಾಗುತ್ತದೆ ಅಥವಾ ಐಕ್ಯವಾಗುತ್ತದೆ. ಓಂ ಎಂದರೆ ಎಲ್ಲ ದೇವತೆಗಳನ್ನು ಪ್ರಾರ್ಥಿಸಿದಂತಾಗುತ್ತದೆ. ಓಂಕಾರದಲ್ಲಿ ದೇವ ದೇವತೆಗಳ ರೂಪಗಳೂ ಇವೆ. ಸಾಕಾರದಿಂದಲೂ ಪೂಜಿಸಬಹುದು. ನಿರಾಕಾರದಲ್ಲಿರುವ ಪರಬ್ರಹ್ಮನನ್ನು ನಿರ್ದೇಶಿಸಿ ಪೂಜಿಸಬಹುದು. ಸಗುಣಬ್ರಹ್ಮನೂ ಇದ್ದಾನೆ. ನಿರ್ಗುಣ ಪರಬ್ರಹ್ಮನೂ ಇದ್ದಾನೆ. "ಓಂ ಇತ್ಯೇಕಾಕ್ಷರಂ ಬ್ರಹ್ಮ" ಎಂದು ವಂದಿಸುತ್ತೇವೆ.

ಅದೇ ರೀತಿ ನಾಮಜಪಗಳಲ್ಲಿಯೂ ಓಂಕಾರದೊಡನೆ ನಮಃ ಮತ್ತು ನಾಮವು ಸೇರಿ ಜಪಮಂತ್ರವಾಗುತ್ತದೆ. ಓಂ ನಮೋ ನಾರಾಯಣಾಯ, ಓಂ ನಮಃ ಶಿವಾಯ,... ಇತ್ಯಾದಿ. ಓಂ ಎಂದು ಹೇಳಿದರೆ ನಾಮಜಪಕ್ಕೆ ಶಕ್ತಿಯು ಬರುತ್ತದೆ. ಸಿದ್ಧಿಯು ಬೇಗ ಆಗುತ್ತದೆ. ಜಪವೂ ಬೇಗ ಪರಮಾತ್ಮನನ್ನು ಮುಟ್ಟುತ್ತದೆ.

ಹಕಾರವೂ ದೇವಿಯನ್ನು ಜಪಿಸುವಾಗ ಕರನ್ಯಾಸ, ಅಂಗನ್ಯಾಸಾದಿಗಳಲ್ಲಿ ಬರುತ್ತದೆ. "ಹ್ರೀಂ ಕಾರ" ದೇವಿಯ ಜಪಕ್ಕೆ ಶ್ರೇಷ್ಠ. ಓಂಕಾರದಷ್ಟೇ ಶಕ್ತಿಯುತ. ಸಿದ್ಧಿ ಕೊಡವ ಮಂತ್ರ. ಮಂತ್ರ ಸಮುದಾಯಕ್ಕೆ ಶಕ್ತಿದಾತ್ರ - ಹ್ರೀಂ ಕಾರ.

ಎಂದ ಮೇಲೆ ಪರಮಾತ್ಮನು ಎಷ್ಟು ದಯಾಮಯ! ಕರುಣಾಮಯ! ಎಷ್ಟು ನಾಮಗಳನ್ನು ಜೀವಕೋಟಿಗೆ ಕೊಟ್ಟಿದ್ದಾನೆ.

"ತೈಂತೀಸ್ ಕೋಟಿ ಸುರನರ ತೇರೇ ದ್ವಾರ್ ಖಡೇ" ಎಂದು ಗಣಪತಿಗೆ ವಂದಿಸುತ್ತೇವೆ.

ಅನೇಕ ಕೋಟಿ ದೇವತೆಗಳಿದ್ದಾರೆ. ಅನೇಕ ನಾಮಗಳು, ಅನೇಕ ಸಹಸ್ರ ನಾಮ ಸಮುದಾಯಗಳು, ಒಂದೇ, ಎರಡೇ ಎಷ್ಟೊಂದು. ಜೀವಕೋಟಿಯ ಪ್ರತಿ ಜೀವಿಯು ಯಾವ ನಾಮವನ್ನಾದರೂ ಆರಿಸಿ ಜಪಿಸಬಹುದು. ಎಷ್ಟು ನಾಮಗಳನ್ನಾದರೂ ತೆಗೆದುಕೊಳ್ಳಬಹುದು.

ಅದಕ್ಕೆ ಬ್ರಹ್ಮದೇವರು "ಅಕಾರಾದಿ ಹಕಾರಾಂತಾಯ ನಮಃ" ಎಂದು ನಮಿಸಿದ್ದಾರೆ.

ಅಥವಾ, ಅಕಾರದಿಂದ ಹಕಾರದವರೆಗೆ,ವರ್ಣಮಾಲೆಯಲ್ಲಿ ಬರುವ ಅಕ್ಷರಗಳ ಶಬ್ದಗಳೆಲ್ಲವೂ ದೇವಿಯದೇ ಮತ್ತು ಪರಮಾತ್ಮದೇ! ಅಥವಾ ಅವನ ಕೃಪೆಯಿಂದಲೇ ಬಂದದ್ದು!!

ಅಥವಾ ಶಬ್ದಬ್ರಹ್ಮನು ಅವನೇ! ನಾದ ಸರಸ್ವತಿಯೂ ಅವನ ರೂಪವೇ! ಅವನ ಶಕ್ತಿಯೇ! ಈ ಎರಡು ಅಕ್ಷರಗಳ ಮಧ್ಯೆ ಎಲ್ಲ ಅಕ್ಷರಗಳ ರೂಪ, ಶಬ್ದದಲ್ಲಿಯೂ ಪರಮಾತ್ಮನೇ ಇದ್ದಾನೆ.

ಸಕಲ ವೇದಗಳು, ಸ್ತುತಿಗಳು, ಪುರಾಣ ಇತಿಹಾಸ, ಉಪನಿಷತ್ತುಗಳು ಅವನೇ ಆಗಿರುವಾಗ ಯಾವುದರಲ್ಲಿ ಅವನಿಲ್ಲ! ಅವನು ಸರ್ವಾಂತರ್ಯಾಮಿ. ಅವನಿಲ್ಲದ ಸ್ಥಳವಿಲ್ಲ. ಅವನಿಲ್ಲದ ಕಾಲ ದೇಶ ಪ್ರಕೃತಿ, ಪುರುಷ, ಮಾಯೆ, ಅಹಂಕಾರ, ಚಿತ್ತ, ಮನಸ್ಸು, ಬುದ್ಧಿ, ಆತ್ಮಗಳು, ಬ್ರಹ್ಮಾಂಡಗಳು ಸಾಧ್ಯವೇ ಇಲ್ಲ. ಅವನು ಪ್ರಸರಿಸದ ಜಾಗವಿಲ್ಲ. ಇದೇ ಬ್ರಹ್ಮಜ್ಞಾನ, ಪರಜ್ಞಾನ. ಈ ಜ್ಞಾನವೇ ಜ್ಞಾನ, ಉಳಿದವೆಲ್ಲವೂ ಅಜ್ಞಾನ, ಕತ್ತಲು, ತಮಸ್ಸು, ಯಾರಿಗೂ ಬೇಡವಾದ್ದು. ಮಾಯೆಯನ್ನೂ ದಾಟಿದವರಿಗೆ ಇವು ಬೇಕಾಗಿಲ್ಲ. ಮಾಯೆದಾಟಿದವರಿಗೆ ಪರಮಾತ್ಮ ಜ್ಞಾನವೇ ಸದಾ ನಿರಂತರ ಬೇಕಾದ್ದು. ಈ ಕಾರಣದಿಂದ ಈ ಒಂದು ನಾಮವೇ ಎಲ್ಲವನ್ನು ನಿರ್ದೇಶಿಸುತ್ತದೆ. - ಅಕಾರಾದಿ ಹಕಾರಾಂತಾಯ ನಮಃ.

**569. ಓಂಕಾರಾಯ ನಮಃ**

ಪರಮಾತ್ಮನೇ "ಓಂ"ಕಾರ, ಅವನನ್ನು ಓಂಕಾರದಿಂದ ನಮಸ್ಕರಿಸುತ್ತೇವೆ. ಪರಮಾತ್ಮನಿಗೆ ಪ್ರಿಯವಾದ ಶಬ್ದ - ಓಂ ಕಾರ. ಪರಮಾತ್ಮನನ್ನು ಭಕ್ತರು ಜ್ಞಾನಿಗಳು ಆಕರ್ಶಿಸಿ ಕರೆಯುವ ಶಬ್ದ - ಓಂಕಾರ, ಅವನು ಎಲ್ಲಿದ್ದರೂ ಓಡಿ ಬರುತ್ತಾನೆ. ಅವರು ಎಲ್ಲಿಂದ ಹೇಗೆ ಯಾವ ಅವಸ್ಥೆಯಲ್ಲಿದ್ದು ಕರೆದರೂ ದೂರ, ಕಾಲ ದೇಶದ ಪರಿಗಣನೆಯಿಲ್ಲದೆ ಅವನು ಭಕ್ತನ ಹತ್ತಿರ ಬರುತ್ತಾನೆ. ಭಕ್ತನು ಅವನ ಹತ್ತಿರವಾಗುತ್ತಾನೆ. ಅವರಿಬ್ಬರ ಸಂಬಂಧ ಹೇಗೆಂದರೆ ಇಬ್ಬರೂ

ಒಂದಾಗುತ್ತಾರೆ. ಭೇದಗಳು ಶೂನ್ಯವಾಗುತ್ತವೆ. ಭಕ್ತ - ಪರಮಾತ್ಮನ ಆತ್ಮಗಳು, ತೇಜಸ್ಸುಗಳು ಒಂದಾಗಿ ಬೇರ್ಪಡಿಸದಷ್ಟು ಒಂದಾಗುತ್ತದೆ. ಗ್ರಹಿಸಲು ಅಸಾಧ್ಯವಾಗುತ್ತದೆ. ತೇಜಸ್ಸು ಒಂದಾಗುತ್ತದೆ ಶಕ್ತಿಯು ಒಂದಾಗುತ್ತದೆ. ಆತ್ಮಗಳು ಲೀನವಾಗಿ ''ತನ್ನ ತನವನ್ನು'' ಕಳೆದುಕೊಂಡಾಗ ಸಚ್ಚಿದಾನಂದ ಸಂತೋಷವಾಗಿ ಎಲ್ಲವೂ ಮರೆತು ಹೋಗುತ್ತದೆ ಅಥವಾ ಆತ್ಮಕ್ಕೆ ಪರಮಾತ್ಮನನ್ನು ಬಿಟ್ಟು ಬೇರೇನೂ ಇಲ್ಲವಾಗುತ್ತದೆ. ವಿಶಾಲ ಬ್ರಹ್ಮಾಂಡವೇ ಅವನಲ್ಲಿರುವಂತೆ ಭಾಸವಾಗುತ್ತದೆ. ಈ ಸ್ಥಿತಿಯೇ ಪರಮಪಾವನ ಸ್ಥಿತಿ. ಮನಸ್ಸಿನಲ್ಲಿ ಬರುವ ರೂಪ. ಮನಸ್ಸೇ ಇಲ್ಲವಾದಾಗ ಎಲ್ಲಿ ಏನು ಬರಲು ಸಾಧ್ಯ. ಎಲ್ಲ ಇಂದ್ರಿಯಾಧಿ ದೇವತೆಗಳೂ ಒಂದೊಂದಾಗಿ ಕಳಚಿ ಹೋಗುತ್ತವೆ. ಮನಸ್ಸು ಬುದ್ಧಿ, ಅಹಂಕಾರ, ಚಿತ್ತಗಳು ಒಂದೊಂದಾಗಿ ಬಿದ್ದುಹೋಗುತ್ತವೆ. ಆತ್ಮನೊಂದೇ ಉಳಿದು ಅವನ ತೇಜಸ್ಸಿನಲ್ಲಿ ಲೀನವಾಗುತ್ತದೆ. ಇದೇ ಸ್ಥಿತಿಯನ್ನು ಸಕಲ ಜೀವಿಗಳೂ ಪಡೆಯಲು ಹಾತೊರೆಯುತ್ತಿರುವುದು - ಇಷ್ಟು ಜ್ಞಾನ, ಭಾವನೆ, ಅನುಭವ ಬರಲಿಕ್ಕೂ ಅವನೇ ಕಾರಣ. ಓಂಕಾರಾಯ ನಮಃ.

ಇಷ್ಟೆಲ್ಲ ಬುದ್ಧಿ ಮನಸ್ಸಿಗೆ ಬಂದ ಮೇಲೆ ಓಂಕಾರದ ಒಂದೇ ಅಕ್ಷರದ ಪವಿತ್ರತೆ, ಶಕ್ತಿ ಎಷ್ಟಿರಬಹುದೆಂದು ವ್ಯಕ್ತವಾಗುತ್ತದೆ. ವೇದ, ಧ್ಯಾನ, ಪೂಜೆ, ಜಪ, ತಪಗಳಲ್ಲೆಲ್ಲ ಮೊದಲು ಬರುವುದು ಓಂಕಾರ. ಓಂ ಎಂಬ ಒಂದೇ ಅಕ್ಷರದಲ್ಲಿ ಪರಮಾತ್ಮನೇ ಇರುವಾಗ ಈ ಅಕ್ಷರದೊಂದಿಗೆ ಸೇರಿದ ನಾಮಗಳ ಶಕ್ತಿ ಎಷ್ಟಿರಬೇಕು? ಇದನ್ನು ಜಪಿಸುವ ದೇವನ ಶಕ್ತಿ ಎಷ್ಟಿರಬೇಕು?? ಜಪಿಸುವವನನ್ನು ಮೇಲೆತ್ತುವ ಶಕ್ತಿ ಎಷ್ಟಿರಬಹುದು - ಊಹಿಸಲಸಾಧ್ಯ. ಜಪಿಸುತ್ತಿದ್ದರೆ ಜಪಿಸುವವನೂ ಜಪದೇವತೆಯೇ ಆಗಬಹುದು! ಜಪಮಾಲೆಯೆ ಜಪದೇವನಾಗಬಹುದು. ಆತ್ಮ, ಬುದ್ಧಿ, ಮನಸ್ಸುಗಳು ಜಪದಲ್ಲಿಯೆ ನಿಲ್ಲಬಹುದು! ಎಂತಹಶಕ್ತಿ ಉತ್ಪನವಾಗಬಹುದು ಏಕೇ! ಆಗಿಯೇ ಆಗುತ್ತದೆ. ನಾಮದ ಬಲವೇ ಅವನ ಬಲ! ''ಭಗವಾನಯಂ ಮೇ ಭಗವತ್ತರಃ'' ಭಗವಂತನೇ ಭಕ್ತನನ್ನು ಉದ್ಧರಿಸುತ್ತಾನೆ. ಅವನ ಶಕ್ತಿಯನ್ನೇ ಇವನಿಗೆ ಕೊಡುತ್ತಾನೆ. ಇವನೂ ಅವನೇ! ಅವನೂ ಇವನೇ! ಆಗ ಇವನು ಮುಕ್ತಜೀವಿ! ಜೀವನ್ಮುಕ್ತ!! ಬೇರೆಯವರನ್ನು ಉದ್ಧರಿಸಲು ಉದ್ಯುಕ್ತನಾಗುತ್ತಾನೆ.

**570. ಲೋಕಕಾರಕಾಯ ನಮಃ**

ಲೋಕ - ಲೋಕಗಳನ್ನು, ಕಾರಕ - ಮಾಡುವವನು,

ಪರಮಾತ್ಮನು ಲೋಕಗಳನ್ನು ರಚಿಸಿದವನು. ತನ್ನ ಸ್ವ - ಇಚ್ಛೆಯಿಂದ ಕಾಮನೆಯಿಂದ ಸಕಲ ಬ್ರಹ್ಮಾಂಡಗಳನ್ನು ರಚಿಸಿದನು. ಅದರಲ್ಲಿ ಹದಿನಾಲ್ಕು ಲೋಕಗಳನ್ನು ಇಟ್ಟನು. ಜೀವಕೋಟಿಗಳನ್ನು ಸೃಷ್ಟಿ ಮಾಡಿದನು. ದೇವ

ದೇವತೆಗಳಾಗಿ ಶಕ್ತಿರೂಪಗಳಾಗಿ ತನ್ನನ್ನು ತಾನೇ ವಿಭಾಗಿಸಿಕೊಂಡನು. ವಿಚಿತ್ರ ರೂಪಗಳು, ವಿಚಿತ್ರ ಲೋಕಗಳು, ಲೆಕ್ಕವಿಲ್ಲದಷ್ಟು!! ಎಲ್ಲೆಲ್ಲಿಯೂ ತಾನೇ ತಾನಾಗಿ ವಿಜ್ರಂಭಿಸಿದನು. ತನ್ನನ್ನ ತಾನೇ ಹರಡಿಕೊಂಡನು.

ತಾನಿಲ್ಲದ ಸ್ಥಳ, ಕಾಲ ದೇಶವಿಲ್ಲದಂತೆ ಮಾಡಿದನು. ಸೃಷ್ಟಿಸಿದ್ದು ಮಾತ್ರವೇ ಅಲ್ಲ, ನಡೆಯುವಂತೆಯೂ ಮಾಡಿದನು. ನಿರಂತರ ನಡೆದು ಲಯ ಹೊಂದುವಂತೆಯೂ ಮಾಡಿದನು. ಸೃಷ್ಟಿ, ಸ್ಥಿತಿ, ಲಯಗಳು ನಿರಂತರ ನಡೆಯುವಂತೆ ಮಾಡಿದನು. ಇವನ ಬುದ್ಧಿ, ಚತುರತೆ ಮುಂತಾದ ಲಕ್ಷಣಗಳು ವಿಸ್ಮಯಕಾರಕಗಳು. ವಿಶಾಲ ವಿಶ್ವ - ಸಕಲವನ್ನು ಸಂಕಲ್ಪ ಮಾತ್ರದಿಂದ ನಡೆಸುವ ಶಕ್ತಿಯುಕ್ತಿಗಳನ್ನು ಹೊಂದಿದ್ದಾನೆ. ಅವನು ''ಲೋಕಕಾರಕಾಯ ನಮಃ'' ಎಂದು ನಮಸ್ಕರಿಸಲ್ಪಡುತ್ತಾನೆ.

*ಏಕಾತ್ಮಾ ತ್ವಮನೇಕಾತ್ಮಾ ಚತುರಾತ್ಮಾ ಚತುರ್ಭುಜಃ ।*
*ಚತುರ್ಮೂರ್ತಿಶ್ಚತುರ್ದಂಷ್ಟ್ರಶ್ಚತುರ್ವೇಗಮಯೋತ್ತಮಃ ॥97॥*
*(571-578)*

**571.** ಏಕಾತ್ಮಾ - ಏಕಾತ್ಮನೇ ನಮಃ

ಏಕ - ಒಂದು, ಆತ್ಮನೇ - ಆತ್ಮವುಳ್ಳವನೇ, ನಮಃ - ನಮಸ್ಕಾರಗಳು.

ಪರಮಾತ್ಮನನ್ನು ''ಒಬ್ಬನೇ ಆತ್ಮನು'' ಎಂದು ಹೇಳುತ್ತೇವೆ. ಪರಮಾತ್ಮನು ಒಬ್ಬನು. ಇಷ್ಟೊಂದು ದೇವರುಗಳೆಂದರೂ ಅವರೆಲ್ಲರೂ ಒಬ್ಬನೇ ಪರಬ್ರಹ್ಮನನ್ನು ನಿರ್ದೇಶಿಸುತ್ತಾರೆ. ಒಬ್ಬನನ್ನೇ ಆಯಾ ಕರೆಯಲ್ಲಿ ತೋರಿಸುತ್ತಾರೆ. ಪರಮಾತ್ಮನು ಒಬ್ಬನೇ. ಎರಡನೆಯವನು ಇಲ್ಲದವನು - ಅದ್ವಿತೀಯನು. ''ಏಕಮೇವಾದ್ವಿತೀಯಂ'' ಎನ್ನುವುದು ಇವನನ್ನೇ. ಇವನೇ ಅಖಂಡ ಬ್ರಹ್ಮಾಂಡ - ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕ - ಏಲ್ಲದಕ್ಕೂ ಅವನೇ ಸೂತ್ರಧಾರ - ಎಲ್ಲವನ್ನೂ ತನ್ನ ಸಂಕಲ್ಪಮಾತ್ರದಿಂದ ಇದ್ದಲ್ಲಿಂದಲೇ ನಡೆಸುವವನು - ಇವನ ಇಚ್ಛೆಗೆ ವಿರುದ್ಧವಾಗಿ ಏನೂ ನಡೆಯುವುದಿಲ್ಲ. ಇವನು ಹೊಂದಿರುವುದೂ ಏಕಾತ್ಮವೇ.

ಸಕಲ ಜೀವಕೋಟಿಯೂ ಇವನೊಬ್ಬನ ಅಂಶದಿಂದಲೇ ನಡೆಯುತ್ತದೆ. ಎಲ್ಲರೂ ಪ್ರಾರ್ಥಿಸುವುದು, ಪ್ರಾರ್ಥಿಸಿದುದನ್ನು ಪಡೆಯುವುದೂ ಇವನೊಬ್ಬನಿಂದಲೇ. ಅದಕ್ಕೆ ಏಕಾತ್ಮನೇ ನಮಃ ಎನ್ನುವುದು ಇವನನ್ನೇ. ಹೇ ಪರಮೇಶ್ವರನೇ, ನಿನಗೆ ನಮೋ ನಮಃ.

**572.** ಅನೇಕಾತ್ಮನೇ ನಮಃ

ಅನೇಕ - ಒಂದು ಅಲ್ಲದ, ಆತ್ಮನೇ ನಮಃ. - ಆತ್ಮವಿಲ್ಲದವನು,

ಒಂದಕ್ಕಿಂತ ಹೆಚ್ಚು ಆತ್ಮವುಳ್ಳವನು. ಜೀವಕೋಟಿಗಳಿಗೆಲ್ಲ ತನ್ನದೇ ಆದ ಗುಣ, ಸ್ವಭಾವಗಳುಳ್ಳ ಆತ್ಮಗಳನ್ನು (ಲೆಕ್ಕವಿಲ್ಲದಷ್ಟು, ಎಣಿಸಲಾರದಷ್ಟು) ಹೊಂದಿ ಇಟ್ಟುಕೊಂಡಿರುವವನು. ಒಬ್ಬನಲ್ಲಿಯೇ ಇವುಗಳನ್ನೆಲ್ಲ ಅಡಗಿಸಿ ಕೊಂಡಿರುವವನು.

ಅನೇಕ ಆತ್ಮಗಳನ್ನು ಹೊಂದಿರುವವನು.

ಅನೇಕ ಆತ್ಮಗಳನ್ನು ಅಡಗಿಸಿಕೊಂಡಿರುವವನು ಅಂದರೆ ಪರಬ್ರಹ್ಮ. ಪ್ರಳಯಕಾಲದಲ್ಲಿ ಎಲ್ಲ ಆತ್ಮಗಳನ್ನು ತನ್ನಲ್ಲಿ ಇಟ್ಟುಕೊಂಡು ಕಾಪಾಡಿ, ಕಲ್ಪಾದಿಯಲ್ಲಿ ಹೊರಬಿಡುವವನು.

573. **ಚತುರಾತ್ಮನೇ ನಮಃ**

ಚತುರ - ವಿಶೇಷ, ಸೂಕ್ಷ್ಮ, ತೀಕ್ಷ್ಣ ಗುಣಗಳುಳ್ಳ, ಆತ್ಮ - ಆತ್ಮವುಳ್ಳವನು, ತೀಕ್ಷ್ಣ ಸ್ವಭಾವದವನು.

ಸಕಲ ಬ್ರಹ್ಮಾಂಡಗಳಲ್ಲಿ ಜೀವಕೋಟಿಯನ್ನು, ಸಚರಾಚರ ವಸ್ತುಗಳನ್ನು ಅಳವಡಿಸಿ, ಸಂಸಾರ ಸಾಗರವು ನಿರಂತರ ಅಡೆತಡೆಯಿಲ್ಲದೆ ನಡೆಯುವಂತೆ ಮಾಡಿರುವವನು.

ಇಷ್ಟನ್ನೂ ನಡೆಸುತ್ತಿದ್ದರೂ ಅದರೊಳಗೆ ಪ್ರವೇಶಿಸಿದರೂ ಅಂಟಿಕೊಳ್ಳದೆ ಇರುವವನು. - ಇದೇ ಅವನ ಚತುರತೆ. ಬಹಳ ವಿಚಿತ್ರವಾದ ಗುಣ. ಯಾರ ಊಹೆಗೂ ನಿಲುಕದೆ ಇರುವವನು. ಎಲ್ಲ ಸನ್ನಿವೇಶದಲ್ಲಿಯೂ ಬಹಳ ಸೂಕ್ಷ್ಮವಾದ ತೀಕ್ಷ್ಣಬುದ್ಧಿ ವಿವೇಚನೆ ಚತುರತೆಯಿಂದ ಎದುರಿಸುವವನು - ಪರಮಾತ್ಮನೇ!

ಪರಮಾತ್ಮನು ತನ್ನ ಚತುರತೆಯನ್ನು ಜೀವಕೋಟಿಯ ಸಕಲ ಜೀವಿಗಳಿಗೂ ಕೊಟ್ಟಿರುತ್ತಾನೆ. ಆದರೆ ಈ ಗುಣವು ಪ್ರಕೃತಿ, ಪುರುಷ, ಮಾಯೆಗಳಿಂದ ಕೂಡಿದ ಪ್ರಪಂಚದೊಡನೆ ವಿವಿಧ ಭಾವಗಳಲ್ಲಿ, ರೀತಿಯಲ್ಲಿ ಸ್ಪಂದಿಸುವುದರಿಂದ ಎಲ್ಲರಲ್ಲಿಯೂ ಈ ಚತುರತೆಯು ಒಂದೇ ಸಮನಾಗಿ ವ್ಯಕ್ತವಾಗುವುದಿಲ್ಲ. ಅದು ಅವರವರ ವಾಸನಾರೂಪ, ಭಾವ, ಸಂಸ್ಕಾರ, ಕರ್ಮಗಳನ್ನು ಅವಲಂಬಿಸಿರುತ್ತದೆ. ಅದರಿಂದ ನಾವು ಕೆಲವರನ್ನು ಬಹಳ ಚತುರರನ್ನಾಗಿಯೂ, ಕೆಲವರನ್ನು ಸಮಯ ಸಮಯದಲ್ಲಿ ಚತುರರನ್ನಾಗಿಯೂ, ಕೆಲವರನ್ನು ಬಹಳ ಬುದ್ಧಿಮಾಂದ್ಯರನ್ನಾಗಿಯೂ ಕಾಣುತ್ತೇವೆ. ವಿವಿಧ ರೀತಿಯ ವಿವಿಧ ಕಾಲದಲ್ಲಿ ವಿವಿಧ ದೇಶದಲ್ಲಿ, ಸಮಯಗಳಲ್ಲಿ ಅತಿ ಕಡಿಮೆ ಪ್ರಮಾಣದಲ್ಲಿ ನೋಡುತ್ತೇವೆ.

ಬ್ರಹ್ಮ, ದಕ್ಷ ಪ್ರಜಾಪತಿ ಮೊದಲಾದವರು, ಕಾಲ ಮತ್ತು ಸಮಸ್ತ ಜೀವಿಗಳು - ನಾಲ್ಕು ಚತುರಾತ್ಮ ವಿಭೂತಿಗಳು. (ವಿ.ಸ. 137)

**574. ಚತುರ್ಭುಜಾಯ ನಮಃ**

ಪರಮಾತ್ಮನು ನಾಲ್ಕು ಭುಜಗಳುಳ್ಳವನು, ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿರುವ ಮಹಾವಿಷ್ಣುವಿಗೆ ಮತ್ತು ಅವನ ರೂಪಗಳಿಗೆ ಈ ಹೆಸರು ಬಂದಿದೆ.

ನಾಲ್ಕು ವೇದಗಳನ್ನು ನಾಲ್ಕು ಭುಜಬಲದಂತೆ ಧರಿಸಿರುತ್ತಾನೆ ಅವನೇ ಮಹಾವಿಷ್ಣು.

ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನೆ ನಾಲ್ಕು ಭುಜಗಳಂತೆ ನಡೆಸುತ್ತಾನೆ, ಇದರಿಂದ ಬೇಡಿದವರಿಗೆ ಇಷ್ಟಾರ್ಥಗಳನ್ನು ಕೊಡುತ್ತಾನೆ.

ಸಾರೂಪ್ಯ, ಸಾಲೋಕ್ಯ, ಸಾಯುಜ್ಯ, ಸಾಮಿಪ್ಯ ಪದವಿಗಳು ಅವನ ಚತುರ್ಭುಜಗಳು. ಈ ಭುಜಗಳ ಮೇಲೆ ತನ್ನ ಭಕ್ತರಿಗೆ ವಾಸಸ್ಥಾನಗಳನ್ನು ತನ್ನಲ್ಲಿ ಐಕ್ಯರಾದವನ್ನು ಇಟ್ಟುಕೊಂಡು ಅವರನ್ನು ಪ್ರೇಮದಿಂದ ಪ್ರೀತಿ ವಾತ್ಸಲ್ಯವನ್ನು ಕೊಡುತ್ತಾನೆ, ಲಾಲಿಸುತ್ತಾನೆ, ಪಾಲಿಸುತ್ತಾನೆ. ಭಕ್ತರ ಬಂಧು, ಚತುರ್ಭುಜನು.

**575. ಚತುರ್ಮೂರ್ತಯೇ ನಮಃ**

ಚತುರ್ಮೂರ್ತಿ - ಶ್ರೀಮನ್ನಾರಾಯಣನು ಚತುರ್ಮೂರ್ತಿಯಾಗಿ ಪ್ರಪಂಚವನ್ನು ನಿರ್ವಹಿಸುತ್ತಾನೆ. ವಿಷ್ಣುವು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂದು ನಾಲ್ಕು ಭಾಗಗಳಾಗಿ ಜಗತ್, ಸೃಷ್ಟಿ ಮೊದಲಾದವುಗಳನ್ನು ಮಾಡುತ್ತಾನೆ. ಅದರಿಂದ ಚತುರ್ಮೂರ್ತಿ, ಚತುರ್ವ್ಯೂಹ ಸ್ವರೂಪನು. (ವಿ.ಸ. 138)

**576. ಚತುರ್ದಂಷ್ಟ್ರಾಯ ನಮಃ**

ನಾಲ್ಕು ಕೋರೆಹಲ್ಲುಗಳುಳ್ಳ ನರಸಿಂಹ ರೂಪವನ್ನು ಧರಿಸಿರುವವನಾದ್ದರಿಂದ ಚತುರ್ದಂಷ್ಟ್ರನು.

ಅಥವಾ, ಹಲ್ಲುಗಳಂತಿರುವ ನಾಲ್ಕು ಕೊಂಬುಗಳುಳ್ಳವನು, "ಚತ್ವಾರಿ ಶೃಂಗಾಃ" (ಭಗವಂತನಿಗೆ ನಾಲ್ಕು ಕೊಂಬುಗಳು) ಎಂದು ಋಗ್ವೇದದಲ್ಲಿ ಹೇಳಿದೆ. (ವಿ.ಸ. 139)

ಚತುರ್ದಂಷ್ಟ್ರ ಎಂದರೆ ವಿಷ್ಣುವಿನ ನರಸಿಂಹಾವತಾರ.

**577. ಚತುರ್ವೇಗಮಯಾಯ ನಮಃ**

ಪರಮಾತ್ಮನ ನಾಲ್ಕು ವೇಗದ ರೂಪಗಳು, ವಿಧಾನಗಳು,

1. ಸಂಕಲ್ಪ ವೇಗ ಅಥವಾ ಭಗವಂತನ ಸ್ವ-ಇಚ್ಛೆ - ಕಾಮನೆಯ ವೇಗ.
2. ವಾಯುವೇಗ
3. ಮನೋವೇಗ
4. ಸಾಮಾನ್ಯ - ವೇಗ - ಜೀವಿಗಳ ಮನೋ, ಸಂಕಲ್ಪ ವೇಗ.

ಈ ಎಲ್ಲ ರೀತಿಯ ವೇಗಗಳನ್ನು ತನ್ನಲ್ಲಿಯೇ ಹರಡಿಕೊಂಡಿರುವವನು, ಪರಮಾತ್ಮನಿಗೆ ಚತುರ್ವೇಗಮಯನೆಂದು ಮೇಲೆ ಹೇಳಿದ ರೀತಿಯಲ್ಲಿ ಸಕಲವನ್ನು ಸಾಧಿಸುವವನಾದ್ದರಿಂದ ಚತುರ್ವೇಗಮಯನೆಂದು ಹೆಸರು ಬಂದಿದೆ.

ಇಷ್ಟೇ ಅಲ್ಲ, ಇವು ಕೇವಲ ಉದಾಹರಣೆಗಾಗಿ, ಅವನಿಗೆ ಇಷ್ಟೇ ಮತ್ತು ಇದೇ ''ವೇಗ'' ಎಂದು ನಿರ್ದೇಶಿಸುವವರು ನಾವು ಯಾರು! ವೇದ ಶಾಸ್ತ್ರ ಪುರಾಣೇತಿಹಾಸದಲ್ಲಿರುವ ವಿಚಾರಗಳನ್ನು ಅಳವಡಿಸಿ ಋಷಿ ಮುನಿಗಳು ಬ್ರಹ್ಮದೇವರು ಈ ಹೆಸರಿನಿಂದ ನಮಸ್ಕರಿಸಿದ್ದಾರೆ. ಇದು ಲೋಕವ್ಯವಹಾರಕ್ಕಾಗಿ ಮಾತ್ರ.

578. ಉತ್ತಮಾಯ ನಮಃ

ಉತ್ತಮನು - ಎಲ್ಲರಿಗಿಂತಲೂ ಶ್ರೇಷ್ಠ ಭಾವದಲ್ಲಿ, ಸ್ಥಾನದಲ್ಲಿ, ಗುಣಗಳಲ್ಲಿ ಶ್ರೇಷ್ಠನಾಗಿ ಇರುವವನು. ಇವನಿಗಿಂತ ಶ್ರೇಷ್ಠರು ಯಾರೂ ಇಲ್ಲ.

ಎಲ್ಲ ದೇಹಗಳನ್ನು ಧರಿಸಿರುವ ಆತ್ಮಗಳು ಮೊದಲಲ್ಲಿ ಸಂಸ್ಕಾರವು ಅಂಟದೆ ಇರುವಾಗ ಒಂದೇ ರೀತಿಯ ಶ್ರೇಷ್ಠತೆಯಲ್ಲಿದ್ದವು. ಆದರೆ ಭವಸಾಗರದ ಸಂಪರ್ಕದಿಂದ ಮಾಯೆಯ ವಿವಿಧ ಪ್ರಮಾಣದ ಪ್ರಭಾವದಿಂದ ಈ ಆತ್ಮಗಳ ಉತ್ತಮತೆಯು ವಿವಿಧ ಪ್ರಮಾಣದಲ್ಲಿ ಮುಚ್ಚಿಹೋಗುತ್ತದೆ.

ಆದರಿಂದ ವಿವಿಧ ಕಾಲ ದೇಶಗಳಲ್ಲಿ ಅಲ್ಪ ಸ್ವಲ್ಪ ಉತ್ತಮತೆಯು ಹೊರಕ್ಕೆ ಪ್ರಕಾಶವಾಗುತ್ತದೆ. ಈ ಪ್ರಕಾಶದ ಕಾಲ, ಸನ್ನಿವೇಶಗಳು ಬಹಳ ಅತ್ಯಲ್ಪ.

ಆದರೆ ಪರಮಾತ್ಮನ ಉತ್ತಮತೆಯ ಪ್ರಕಾಶವು ನಿರಂತರ ಹೊರ ಕಾಣುತ್ತಿರುತ್ತದೆ. ಏಕೆಂದರೆ ಅದು ಯಾವ ಮಾಯೆಯಿಂದಾಗಲೀ, ಪ್ರಕೃತಿ, ಪುರುಷ, ಸಂಸಾರ ಸಾಗರದ ಸಂಯೋಗ ವಿಯೋಗಗಳಿಂದಲಾಗಲೀ ಪ್ರಭಾವಿತವಾಗುವುದಿಲ್ಲ. ಭಗವಂತನು ಸರ್ವಕ್ಕೂ ಅತೀತನು, ಗುಣಾತೀತ, ಮಾಯಾತೀತ, ಭವಸಾಗರಾತೀತ.

ಅವನೇ ಉತ್ತಮನು. ಸದಾ ನಿರಂತರ ಉತ್ತಮೋತ್ತಮನು. ಇವನನ್ನು ಮೀರಿದವರಿಲ್ಲ. ಮೀರಿದ ಪುರುಷರಿಲ್ಲ. ಆದರಿಂದ ಪುರುಷೋತ್ತಮನು. ಸರ್ವೋತ್ತಮನು. ಶುದ್ಧಸತ್ವನು. ಶುದ್ಧಸತ್ಯನು. ಆದರಿಂದ ಉತ್ತಮಾಯ ನಮಃ.

*ಲೋಕಪ್ರಿಯೋ ಲೋಕಗುರುರ್ಲೋಕೇಶೋ ಲೋಕನಾಯಕಃ ।*
*ಲೋಕಸಾಕ್ಷೀ ಮಹಾಲೋಕೋ ಲೋಕೈಕೋ ಲೋಕಲೋಚನಃ ॥98॥*

*(579-586)*

579. ಲೋಕಪ್ರಿಯಾಯ ನಮಃ

ಪರಮಾತ್ಮನು ಲೋಕಗಳಿಗೆ ಬೇಕಾದವನು. ತಾನೇ ಸೃಷ್ಟಿಸಿದ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೆ ಮತ್ತು ಜೀವಿಗಳಿಗೆ ಬೇಕಾದವನು. ಪ್ರಿಯನಾದವನು. ಸರ್ವವನ್ನು ತನ್ನದೇ ಎಂದು ತಿಳಿದು ಪ್ರೀತಿಸುವವನು. ಇವನ ಪ್ರೀತಿ ಶುದ್ಧ ಸ್ವಚ್ಛವಾದುದು. ಇದರಲ್ಲಿ ತೋರಿಕೆ, ಹಾರಿಕೆ, ನಟನೆ ಯಾವುದೂ ಇಲ್ಲವೂ ಇಲ್ಲ ಮತ್ತು ಲವಲೇಶವೂ ಮಿಶ್ರವಿಲ್ಲ.

ಸಕಲ ಜೀವಕೋಟಿಗೂ ಏಕ ಪ್ರಕಾರವಾಗಿ ಬೇಕಾದವನು. ಇವನನ್ನು ಇಷ್ಟ ಪಡದ ಜೀವಿಯು ಇಲ್ಲವೇ ಇಲ್ಲ. ನಾಸ್ತಿಕನಾದರೂ "ಇವನು ಇಲ್ಲ" ಎಂದು ಹೇಳುವಾಗ ಇವನನ್ನೇ ಉದ್ದೇಶಿಸಿ ಇವನು ಇಲ್ಲ ಎಂದು ಹೇಳುತ್ತಾನೆ. ಇವನದು ನಾಸ್ತಿಕತೆಯನ್ನು ಹೇಳುವಲ್ಲಿ ಪ್ರಿಯತೆ.

ಪರಮಾತ್ಮನು ಲೋಕಪ್ರಿಯನು.

ಲೋಕ - ಎಂದರೆ ಜಗತ್ತು, ಪ್ರಜೆಗಳು, ಸಮೂಹ, ಭೂ ಭಾಗಗಳು, ಪರಮಾತ್ಮನು ಸೃಷ್ಟಿಸಿದ ಹದಿನಾಲ್ಕು ಲೋಕಗಳು, ಇತ್ಯಾದಿ. ಇವುಗಳಿಗೆ ಪ್ರಿಯನಾದವನು - ಲೋಕಪ್ರಿಯನು.

580. ಲೋಕಗುರವೇ ನಮಃ

ಗುರು - ಪೂಜ್ಯನು, ಎಲ್ಲವನ್ನು ತಿಳಿದವನು ಮತ್ತು ಬೋಧಿಸುವವನು.

ಲೋಕಗುರು - ಸಕಲ ಲೋಕಗಳಿಗೂ ಪೂಜ್ಯನು. ಸಮಾನ ರೀತಿಯಲ್ಲಿ ಗೌರವಿಸಲ್ಪಡುವವನು ಮತ್ತು ಎಲ್ಲವನ್ನು ತಿಳಿದಿರುವವನಾದ್ದರಿಂದ ಬೋಧಿಸುವವನು.

ಇವನಿಗಿಂತ ಪರಮ ಸಮಾನವಾದ, ಭೇದ ಭಾವವಿಲ್ಲದ, ಪಕ್ಷಪಾತವಿಲ್ಲದ ಗುರು - ಲೋಕಗುರುವು ಬೇರೊಬ್ಬರಿಲ್ಲ. ಸಕಲ ಜೀವಿಗಳಿಗೂ ಇವನನ್ನೇ ಗುರುವೆಂದು ತಿಳಿದು ಅಗ್ರಪೂಜೆ ಮಾಡುತ್ತಾರೆ.

ಪರಮಾತ್ಮನ ಸಕಲ ರೂಪಗಳೂ ಗುರು ರೂಪವೇ. ಸರ್ವರೂ ಪ್ರಾರ್ಥಿಸುವ ಗುರುವು ಬ್ರಹ್ಮ, ವಿಷ್ಣು, ಮಹೇಶ್ವರ. ಗುರುವಿನ ವಿಚಾರದಲ್ಲಿ ಭಗವಾನ್ ಶಂಕರನು ಪಾರ್ವತಿಗೆ ಬೋಧಿಸಿರುತ್ತಾನೆ. ಇದೇ ಗುರುಗೀತಾ. ಇದು ಪರಮ ಗುಹ್ಯವಾದ ಜ್ಞಾನ. ಅಲಕ್ಷ್ಯವಿರುವ, ತಿರಸ್ಕಾರವಿರುವ, ಅವಹೇಳನವಿರುವ ಸ್ಥಾನದಲ್ಲಿ ಜನರಲ್ಲಿ ಇದರ ವಿಚಾರವನ್ನು ಹೇಳಬಾರದು. ಹೆಚ್ಚೇಕೆ ಮನಸ್ಸಿನಲ್ಲಿಯೂ ಇದರ ಚಿಂತನೆಯನ್ನು ಮಾಡಬಾರದು - "ಮನಸಾಪಿ ನ ಚಿಂತವ್ಯಮ್" - ಅಷ್ಟು ಶ್ರೇಷ್ಠವಾದುದು - ಗುರುಗೀತಾ.

ಗುರುವಿನ ರೂಪ, ರೇಖೆ, ಭಾವ, ಪೂಜ್ಯತೆ, ಕೃಪೆ, ಕೃಪೆಯ ಶಕ್ತಿ

ಎಲ್ಲವೂ ಗಹನವಾದುದು. ಲೋಕಗುರುವಾದ ಪರಮಾತ್ಮನ ಭಾವವು ಎಷ್ಟು ಉತ್ತಮವಾದುದು - ವಿಶೇಷ ಮತ್ತ ಭಾವಿಸಿ ಮನನ ಮಾಡಬೇಕು.

ಲೋಕಗಳಿಗೆ ಗುರುವೆಂದಮೇಲೆ ಲೋಕಗಳನ್ನು ಸೃಷ್ಟಿಸಿದವನೇ ಇವನಾಗಿರುವಾಗ, ಇವನಿಗಿಂತ ಪೂಜ್ಯರು ಇನ್ನಾರು!! ಯಾರೂ ಇಲ್ಲ. ಪರಮಾತ್ಮನೇ ಪರಮ ಕರುಣಾಮಯನಾದ ಲೋಕಗುರುವು. - ಲೋಕಗುರುವೇ ನಮಃ.

**581. ಲೋಕೇಶಾಯ ನಮಃ**

ಪರಮಾತ್ಮನು ಲೋಕಗಳಿಗೆ ಈಶನು ಎಂದರೆ ಒಡೆಯನು, ಆಳುವವನು, ರಾಜಸ್ವರೂಪನು, ಈಶ್ವರನು, ಕಿರೀಟಪ್ರಾಯನು.

ಶಿರಸ್ಸು ದೇಹಕ್ಕೆ ಯಾವ ರೀತಿ ಉತ್ತಮ ಭಾಗವೋ ಅದೇ ರೀತಿ ಪರಮಾತ್ಮನು ಅವನು ಸೃಷ್ಟಿಸಿದ ಲೋಕಗಳಿಗೆ (ಹದಿನಾಲ್ಕು) ಕಿರೀಟಪ್ರಾಯನು.

ಅವನು ಸೃಷ್ಟಿಸಿದ ಸಕಲ ಅಖಿಲಾಂಡ ಕೋಟಿ ಬ್ರಹ್ಮಾಂಡ ಲೋಕಗಳಿಗೂ ಅದರಲ್ಲಿರುವ ಸಮಸ್ತ ಚರಾಚರ ವಸ್ತುಗಳಿಗೂ ಸಕಲ ಜೀವಕೋಟಿಗೂ ಒಡೆಯನು, ಸೂತ್ರಧಾರನು. ಸಕಲವನ್ನೂ ನಿರಂತರ ನಡೆಸುವವನು, ನಡೆಸುತ್ತಿರುವವನು, ನಡೆಸಿದವನು. ಕಾಲವೇ ಅವನ ಅಧೀನದಲ್ಲಿರುವುದರಿಂದ ಸಕಲ ಜೀವಿಗಳು ಅವನ ಇಚ್ಛಾಮಾತ್ರದಿಂದ ಅವನ ಇಚ್ಛೆಯಂತೆ ಕಾಲಚಕ್ರದಲ್ಲಿ ನಡೆಯುತ್ತಿರುವುದರಿಂದ ಆ ಸೃಷ್ಟಿಸ್ಥಿತಿಲಯಕರ್ತನಾದ ಪರಮಾತ್ಮನೇ ಲೋಕೇಶನು.

**582. ಲೋಕನಾಯಕಾಯ ನಮಃ**

ಪರಮಾತ್ಮನು ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೆ ನಾಯಕನು. ಅವುಗಳು ನಡೆಯಲು ದಾರಿ ತೋರಿಸುವವನು, ನಡೆಸುವವನು. ಲೋಕಗಳು ಸೃಷ್ಟಿಸ್ಥಿತಿಲಯ ಚಕ್ರದಲ್ಲಿ ಸಿಕ್ಕಿಕೊಂಡಿರುವಾಗ ದಾರಿ ತೋರಿಸುವ ಲೋಕನಾಯಕನು.

ಸಮಾಜದಲ್ಲಿ ಕೆಲವು ಜನರು ನಾಯಕರಾಗಿರುತ್ತಾರೆ. ಅವರುಗಳು ಕಾಲಕ್ರಮದಲ್ಲಿ ಬದಲಾಗುವವರು. ನಿರಂತರ ಇರಲಾರರು. ಇದ್ದರೂ ಹೆಚ್ಚೆಂದರೆ ಜೀವನಪರ್ಯಂತ ಇರುವವರು. ನಂತರ ಬೇರೆಯವರು ಪೀಠದಲ್ಲಿ ಬರುತ್ತಾರೆ. ಆದರೆ ಪರಮಾತ್ಮನ ವಿಚಾರ ಹಾಗಲ್ಲ. ಅವನು ತ್ರಿಕಾಲದಲ್ಲಿಯೂ ನಿರಂತರ ನಾಯಕನಾಗಿಯೇ ಇರುವವನು. ಬೇರೆಯವರು ಯಾರೂ ಬಂದು ಇವನನ್ನು ಆ ''ಸ್ಥಾನ''ದಿಂದ ಬದಲಿಸಲು ಸಾಧ್ಯವಿಲ್ಲ. ಅವನು ''ಏಕಮೇವಾದ್ವಿತೀಯ''ನು. ನಿರಂತರ ಇರುವುದರ ಕಾರಣ ಅವನು ಶ್ರೇಷ್ಠ ಲೋಕನಾಯಕನು.

583. **ಲೋಕಸಾಕ್ಷಿಣೇ ನಮಃ**

ಸಕಲ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಲ್ಲಿ ನಡೆಯುವ ಪ್ರತಿಯೊಂದು ಕಾರ್ಯಕ್ಕೂ, ಪ್ರತಿಯೊಂದು ಜೀವಿಯ ಪ್ರತಿಕ್ಷಣದ ಪ್ರತಿಯೊಂದು ಕಾರ್ಯಕ್ಕೂ, ಹಿಂದೆ ನಡೆದುದಕ್ಕೂ, ಈಗ ನಡೆಯುತ್ತಿರುವುದಕ್ಕೂ, ಮುಂದೆ ನಡೆಯುವುದಕ್ಕೂ ಪರಮಾತ್ಮನೇ ಸದಾ, ನಿರಂತರ, ಕ್ಷಣಮಾತ್ರವೂ ಬಿಡದೇ "ಲೋಕಸಾಕ್ಷಿ" ಯಾಗಿರುತ್ತಾನೆ.

ಯಾರೂ, ಯಾವ ಕ್ಷಣದಲ್ಲಿಯೂ ಇವನ ದೃಷ್ಟಿ, ನಿರೀಕ್ಷೆ, ಅಧೀಕ್ಷಣದಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಒಬ್ಬನೇ ಹೇಗೆ ಎಲ್ಲವನ್ನು ನೋಡುತ್ತಾನೆ ಎಂದು ಸಂದೇಹ ಬರಬಹುದು, ಪರಮಾತ್ಮನಿಗೆ ಅಸಾಧ್ಯವಾದ ಕೆಲಸ ಯಾವುದೂ ಇಲ್ಲ. ಅವನಿಗೆ ಕ್ಷಣಮಾತ್ರವೂ ಅಕರ್ಮ - ಕರ್ಮ ನಿಲ್ಲುವ ಸ್ಥಿತಿ ಇಲ್ಲ. ಅವನಂತಹ ಕರ್ಮಯೋಗಿ ಬೇರೊಬ್ಬರಿಲ್ಲ. ಇದಕ್ಕೆ ಇವನಿಗೆ ಸಾಕ್ಷೀಗೋಪಾಲ ಎಂದು ನಮಸ್ಕರಿಸುತ್ತೇವೆ. ಚಿತ್ರಗುಪ್ತರು ಈ ಸಾಕ್ಷಿ ಕೆಲಸವನ್ನು ಮಾಡುತ್ತಾರೆ. ಆತ್ಮಕ್ಕೆ ಅಂಟಿರುವ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಇಂದ್ರಿಯಗಳು - ಎಲ್ಲವೂ ಅವನೇ. ಆತ್ಮವೂ ಅವನೇ ಎಂದ ಮೇಲೆ ಭಗವಂತನೇ ನಮ್ಮ ಆತ್ಮದಲ್ಲಿ ಕುಳಿತು ಮಾಡಿಸುವುದರಿಂದ ಅವನೇ ನಮ್ಮ ಸಕಲ ಆಗು ಹೋಗುಗಳನ್ನು ನಿರ್ಧರಿಸುವುದರಿಂದ, ನಿರ್ದೇಶಿಸಿರುವುದರಿಂದ ನಮಗೆ ಅವನಿಗಿಂತ ಉತ್ತಮಪ್ರಿಯರು, ಗುರುಗಳು, ಸಾಕ್ಷಿಗಳು, ನಾಯಕರು, ಯಾರಿದ್ದಾರೆ!! ಅವರುಗಳಿದ್ದರೂ ಅವನ ಕೃಪಾಸಾಗರದಲ್ಲಿ ಅವರು ನಿರ್ವಹಿಸಬೇಕು. ಅವನ ಸಂಕಲ್ಪದಂತೆಯೇ ನಡೆಯಿಸಬೇಕು. ಎಂತಹ ವಿಶೇಷ ವ್ಯಾಖ್ಯಾನ, ಎಂತಹ ವಿಶೇಷ ವ್ಯಾಮೋಹ!! ಹೇಗೆ ಅವನು ಅವನ ಆತ್ಮಜ್ಞಾನವನ್ನು ಎಂತಹ ಸನ್ನಿವೇಶದಲ್ಲಿ ಪ್ರಚೋದಿಸುತ್ತಾನೆ. ಎಂತಹ ಅಪರೂಪದ ಕೃಪಾಬಿಂದು ಕರುಣಾಳುವಿನ ದಯೆ!! ಇದನ್ನು ತಿಳಿಯಲು ಪ್ರಚೋದನೆ, ಗ್ರಹಣಶಕ್ತಿಯನ್ನು ಹೇಗೆ ದಯಪಾಲಿಸುತ್ತಾನೆ ಅವನು!! ಈ ಜ್ಞಾನವು ಆತ್ಮ - ನಾನು, ಬುದ್ಧಿ, ಮನಸ್ಸು, ಇಂದ್ರಿಯಗ್ರಾಮಕ್ಕೆ ಬಂದುದೇ ಒಂದು "ಅದೃಷ್ಟ". ಅವನೇ ಸಾಕ್ಷಿಯಾಗಿ ನಾವು ಮಾಡುವ ಎಲ್ಲವನ್ನು ಸಾಕ್ಷಿಯಾಗಿ ನೋಡುತ್ತಿರುವನು ಎಂಬುದು ತಿಳಿವಳಿಕೆಗೆ ಬಂದಾಗ ನಾವು ಎಂತಹ ತಪ್ಪನ್ನು ಮಾಡುವ ಸನ್ನಿವೇಶ ಬಂದಾಗಲೂ ಅವುಗಳನ್ನು ಮಾಡದಿರಲು ಶಕ್ತಿ, ಯುಕ್ತಿ ಬರುತ್ತದೆ. ನಮ್ಮ ಚರಿತ್ರೆಯನ್ನು ಬದಲಾಯಿಸಲು ಸಾಧ್ಯ, ಶುದ್ಧ ಸಾತ್ವಿಕರಾಗಬಹುದು. - ಲೋಕಸಾಕ್ಷಿಣೇ ನಮಃ.

584. **ಮಹಾಲೋಕಾಯ ನಮಃ**

ಪರಮಾತ್ಮನೇ ಮಹಾಲೋಕನು. ಸಕಲ ಲೋಕಗಳನ್ನು, ಬ್ರಹ್ಮಾಂಡಗಳನ್ನು ತನ್ನಲ್ಲಿಯೇ ಅಡಗಿಸಿಕೊಂಡಿರುವುದರಿಂದ ಅವನ ದೇಹವೇ ಮಹಾಲೋಕ.

ಅಥವಾ ಅವನ ಮನಶ್ಶಕ್ತಿಯೇ ಮಹಾಲೋಕ.

ಅಥವಾ "ಸೋऽಕಾಮಯತ ಪ್ರಜಾಃ ಸೃಜೇಯೇತಿ" ಎಂದು ಅವನು ಇಚ್ಛಿಸಿದ್ದರಿಂದ ಅವನು ಕಾಮನೆಯೇ ಮಹಾಮಹಿಮ ಸಮಾನವಾದುದು.

ಅಥವಾ ಅವನು ವಾಸಿಸುವ ಸ್ಥಾನವೇ ಮಹಾ ವೈಕುಂಠ, ಸತ್ಯಲೋಕ - ಮಹಾಲೋಕಾಯ ನಮಃ.

ಸೃಷ್ಟಿಯಲ್ಲಿ ಅವನ ಶಿರದಲ್ಲಿಯೇ ದೇವಲೋಕವಿದೆ. ಪಾದದಲ್ಲಿ ಭೂಮಿ, ದಶದಿಶೆಗಳು ಉದ್ಭವವಾದವು ಎಂದು ಪುರುಷ ಸೂಕ್ತದಲ್ಲಿ ಅವನ ದೇಹವನ್ನು ಕಲ್ಪಿಸಿರುತ್ತಾರೆ. - "ಶೀರ್ಷ್ಣೋ ದ್ಯೌಸ್ಸಮವರ್ತತ । ಪದ್ಭ್ಯಾಂ ಭೂಮಿರ್ದಿಶಶ್ಶ್ರೋತ್ರಾತ್ । ತಥಾ ಲೋಕಾಗ್ಂ ಅಕಲ್ಪಯನ್॥" - ಎಂದಿದೆ.

ಅಥವಾ ಮಹಾಪ್ರಳಯಕಾಲದಲ್ಲಿ ಪರಮಾತ್ಮನೊಬ್ಬನೇ ವಟಪತ್ರಶಾಯಿಯಾಗಿ ಶಿಶು ರೂಪದಲ್ಲಿ ಮಲಗಿದ್ದಾಗಿನ ಲೋಕವೇ ಮಹಾಲೋಕ - ಆ ಇವನಿಗೆ ಇವನರೂಪದಲ್ಲಿ ಸರ್ವವನ್ನು ಅಡಗಿಸಿ ಕೊಂಡಿದ್ದರಿಂದ ಮಹಾಲೋಕನೆಂದು ಆಯಿತು.

ಅಥವಾ ಹದಿನಾಲ್ಕು ಲೋಕಗಳಲ್ಲಿ ಸತ್ಯಲೋಕವೇ ಮೇಲಿನದು ಪಾತಾಳವೇ ಕೆಳಗಿನದು. ಇವೆಲ್ಲವನ್ನು ಸೃಷ್ಟಿಸಿ ನಡೆಯಿಸಿ ಲಯಮಾಡುವ ಇವನ ಸಂಕಲ್ಪವೇ ಮಹಾಲೋಕ.

585. **ಲೋಕೈಕಾಯ ನಮಃ**

ಲೋಕಗಳು ಎಷ್ಟೇ ಇದ್ದರೂ, ಸಕಲದಲ್ಲಿಯೂ ಇವನು - ಪರಮಾತ್ಮನು ಹರಡಿರುವುದರಿಂದ ಸಕಲ ಬ್ರಹ್ಮಾಂಡಗಳು, ಲೋಕಗಳು, ಚರಾಚರ ವಸ್ತುಗಳು, ಜೀವಕೋಟಿಯ ಸಕಲ ಜೀವಿಗಳು - ಎಲ್ಲದರಲ್ಲಿಯೂ ಒಳಗೂ ಹೊರಗೂ ಅವನೇ ಅವನಾಗಿರುವುದರಿಂದ ಬೇರೆ ಬೇರೆಯಾದ ಎಲ್ಲವೂ ಒಂದೇ ಲೋಕವಾಗಿ ಹೋಗಿದೆ. ಇದು ಪರಮಾತ್ಮನ ವಿಶಾಲಲೋಕ, ಇಲ್ಲಿ ಇವನ ಅಧಿಕಾರ, ಅಧ್ಯಕ್ಷತೆ, ಒಡೆತನ ಮಾತ್ರ ನಡೆಯುತ್ತದೆ.

ಅಥವಾ ಲೋಕಗಳಲ್ಲೆಲ್ಲ ಅವನಿರುವ ಲೋಕವೇ ಲೋಕ. ಬೇರೆಯವೆಲ್ಲ ಅದರ ಅಧೀನನೇ. ಅವನೇ ಲೋಕಗಳಲ್ಲೆಲ್ಲ ಒಂದೇ ಒಂದು ಪರಮ ಪೂಜ್ಯ ಉದಾತ್ತಲೋಕ.

ಅವನು ಲೋಕೈಕ ಚಕ್ರವರ್ತಿ, ಚೋರಾಗ್ರಗಣ್ಯ ಚಕ್ರವರ್ತಿ, ಲೋಕೈಕಾಯ ನಮಃ.

586. **ಲೋಕಲೋಚನಾಯ ನಮಃ**

ಅವನು, ಪರಮಾತ್ಮನು ಸಕಲ ಲೋಕಗಳಿಗೂ ಕಣ್ಣಿನಂತಿರುವವನು.

ಸಕಲ ಲೋಕಗಳನ್ನು ತನ್ನ ದೃಷ್ಟಿಯಿಂದಲೇ ನೋಡುವವನು.

ಅಥವಾ ಪ್ರಪಂಚಗಳಿಗೆ ಅವನೇ ಕಣ್ಣು.

ಅಥವಾ ಅವನೇ ನಮ್ಮ ಕಣ್ಣುಗಳಲ್ಲಿ ನಿಂತು ಪ್ರಪಂಚವನ್ನು ನೋಡುತ್ತಾನೆ. ನಾವು ನೋಡುವ ಎಲ್ಲವೂ ಅವನ ಕೃಪೆಯಿಂದಲೇ ಕಾಣುತ್ತವೆ. ನೋಡುವವನೂ ಅವನೇ. ನೋಡಲ್ಪಡುವ ಪ್ರಪಂಚವೂ ಅವನೇ. ಇಂದ್ರಿಯಗಳು, ಅದರ ಅಧಿಷ್ಠಾನ ದೇವತೆಗಳು, ದೇಹಗಳು, ಆತ್ಮ, ಮನ, ಬುದ್ಧಿ, ಅಹಂಕಾರ, ಚಿತ್ತಗಳು ಅವನೇ. ಅವನ ಕರುಣೆಯಿಂದಲೇ ಇವು ಕೆಲಸ ಮಾಡುತ್ತಿವೆ. ಅವನ ಕೃಪೆ ಇಲ್ಲದಿದ್ದರೆ ಏನೂ ನಡೆಯುವುದಿಲ್ಲ. ಅವನ ಕೃಪೆಯಿಂದಲೇ ಆತ್ಮವು ದೇಹಗಳನ್ನು ಪರಿಗ್ರಹಿಸಿ, ಅವುಗಳಲ್ಲಿ ಇದ್ದು, ನಂತರ ಅವುಗಳನ್ನು ವಿಸರ್ಜಿಸುತ್ತದೆ. ಅವನ ಕೃಪೆಯಿಂದಲೇ ಈ ಜಗತ್ತು ನಡೆಯುತ್ತದೆ. ಅವನು ಅದರಲ್ಲಿ ಹರಡಿರುವುದರಿಂದ ಬೇರೆಯವರಿಗೆ ಗೋಚರಿಸುತ್ತಾನೆ. ಒಂದು ದೇಹದಲ್ಲಿರುವ ಆತ್ಮಕ್ಕೆ ಇತರರಲ್ಲಿರುವ ಆತ್ಮವು ಪ್ರಕಾಶವಾಗುತ್ತಾನೆ. ಇತರರಲ್ಲಿರುವ ಆತ್ಮಕ್ಕೆ ಇವನೂ ಪ್ರಕಾಶವಾಗುತ್ತಾನೆ. ವಾಸ್ತವ್ಯದಲ್ಲಿ ಅವನು ಅವನನ್ನು ಪರಸ್ಪರ ಪ್ರಕಾಶದ ಮೂಲಕ ನೋಡುತ್ತಾನೆ. ಇದು ಬಹಳ ಗುಹ್ಯವಾದ ಅಂತರಾತ್ಮನ ವಿಚಾರ. ಅಂದರೆ ಎಲ್ಲೆಲ್ಲಿಯೂ ಅವನೇ ಅವನಾಗಿ ಪ್ರಸರಿಸಿದ್ದಾನೆ. ಲೋಕ ಲೋಚನನಾಗಿ ಗೋಚರಿಸುತ್ತಾನೆ.

ಲೋಕ ಲೋಚನಾಯ ನಮಃ ಎಂದರೆ ಅವನಿಗೇ ಸಲ್ಲುತ್ತದೆ.

*ಲೋಕಾಧಾರೋ ಬೃಹಲ್ಲೋಕಃ ಸರ್ವಲೋಕಮಯೋ ವಿಭುಃ |*
*ಲೋಕಕರ್ತಾ ವಿಶ್ವಕರ್ತಾ ಕೃತಕರ್ತಾ ಕೃತಾಗಮಃ ||99||*

*(587-594)*

**587. ಲೋಕಾಧಾರಾಯ ನಮಃ**

ಲೋಕ - ಜಗತ್ತಿಗೆ, ಪ್ರಪಂಚಕ್ಕೆ, ಆಧಾರ - ಕಾರಣಭೂತನು, ಆಶ್ರಯಭೂತನು.

ಪ್ರಪಂಚ ನಡೆಯುವುದಕ್ಕೆ ಪರಮಾತ್ಮನೇ ಆಶ್ರಯನು. ಅಥವಾ ಕಾರಣಭೂತನು.

ಈ ಆಧಾರವು ಇಲ್ಲದಿದ್ದರೆ, ಲೋಕವು ನಿಲ್ಲಲು, ನಡೆಯಲು, ಸೃಷ್ಟಿ, ಸ್ಥಿತಿ, ಲಯಗಳಲ್ಲಿ ನಡೆಯಲು ಸಾಧ್ಯವಿಲ್ಲ.

ಈ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಲ್ಲಿ ಪರಮಾತ್ಮನೇ ಮೂಲಕಾರಣನು. ಅವನ ಇರುವಿಕೆಯಿಂದಲೇ ಇವೆಲ್ಲಾ ನಡೆಯುವುದು. ಚಿನ್ನದ ಆಭರಣಗಳಿಗೆ ಚಿನ್ನವು ಹೇಗೆ ಮೂಲಕಾರಣವಾಗಿ ಆಭರಣಗಳು ವಿವಿಧ ರೂಪದಲ್ಲಿ ಇರುವುವೋ ಮತ್ತು ಚಿನ್ನವಿಲ್ಲದೆ ಆಭರಣಗಳು ಹೇಗೆ ಸಾಧ್ಯವಿಲ್ಲವೋ ಅದೇ ರೀತಿ ಪರಮಾತ್ಮ ತತ್ವವಿಲ್ಲದೆ ಜಗತ್ತು ಆಗಲು

ಸಾಧ್ಯವಿಲ್ಲ. ಇದಕ್ಕಾಗಿಯೇ "ಆಧಾರ" ಎಂದು ಹೇಳುವುದು. ಅವನು ಲೋಕಾಧಾರನು.

ದೇಹಗಳ ಇರುವಿಕೆಗೆ ಆತ್ಮನೇ ಆಧಾರ. ಆತ್ಮನ ಜೊತೆ ಸೂಕ್ಷ್ಮ ದೇಹದಲ್ಲಿರುವ ಮನಬುದ್ಧಿ, ಅಹಂಕಾರ, ಚಿತ್ತ, ಹತ್ತು ಇಂದ್ರಿಯಗಳು, ಸತ್ವರಜೋ ತಮಸ್ಸು ಗುಣಗಳು, ಕರ್ಮ ಸಂಸ್ಕಾರಗಳು, ಕಾರಣ ಶರೀರಗಳು - ಇವುಗಳು ಆತ್ಮನನ್ನು ಬಿಟ್ಟು ಇರಲು ಸಾಧ್ಯವಿಲ್ಲ. ಆತ್ಮನೇ ಆಧಾರ. ಸೂಕ್ಷ್ಮ ದೇಹವೇ ಪಂಚಭೂತಗಳಿಂದಾದ ಸ್ಥೂಲ ಶರೀರಕ್ಕೆ ಆಧಾರ. ಇದೆಲ್ಲದರ ಇರುವಿಕೆ, ಆಗು ಹೋಗುಗಳಿಗೆ ಆತ್ಮವೇ ಆಧಾರ. ಆತ್ಮನಿಗೆ ಪರಮಾತ್ಮನ ಸಂಕಲ್ಪವೇ ಆಧಾರ. - ಇದೆಲ್ಲದರ ಇರುವಿಕೆ ಅಳಿವುಗಳಿಗೆ ಪರಮಾತ್ಮನೇ ಆಧಾರ. ಪ್ರತಿ ದೇಹವೂ ಒಂದು ಲೋಕ, ಈ ಲೋಕಕ್ಕೆ ಆತ್ಮನೇ ಆಧಾರ.

588. ಬೃಹಲ್ಲೋಕಾಯ ನಮಃ

ಪರಮಾತ್ಮನೇ ಒಂದು ಲೋಕ. ಅವನ ಸಂಕಲ್ಪವೇ ಒಂದು ದೊಡ್ಡ ಲೋಕ. ಅವನ ಕಾಮನೆಯೇ ಒಂದು ಲೋಕ. ಅವನ ಕ್ರಿಯೆಯೇ ಮಹಾಲೋಕ, ಈ ಸಕಲ ಬ್ರಹ್ಮಾಂಡ ಸ್ವರೂಪವಾದ ಜಗತ್ತೇ ಒಂದು ಲೋಕವಾದರೆ, ಅವನೇ ಯಾರಿಗೂ ತಿಳಿಯದ ಒಂದು ಪ್ರಪಂಚ. ಅವನ ಇಚ್ಛೆಯಂತೆ, ಸೂತ್ರಕ್ಕೆ ಅನುಗುಣವಾಗಿ ಎಲ್ಲವೂ ನಡೆಯುತ್ತದೆ.

ಪರಮಾತ್ಮನ ಸಗುಣಬ್ರಹ್ಮ, ನಿರ್ಗುಣಬ್ರಹ್ಮ, ಸಾಕಾರಮೂರ್ತಿ ಆರಾಧನೆ, ನಿರಾಕಾರಮೂರ್ತಿ ಆರಾಧನೆ; ಗುಣಾತೀತ ಲೋಕಾತೀತ, ಮಾಯಾತೀತ ಮುಂತಾದ ಅತೀತ ಭಾವನೆಗಳು, ಸಾಲೋಕ್ಯ, ಸಾರೂಪ್ಯ, ಸಾಯುಜ್ಯ, ಸಾಮಿಪ್ಯ, ಪುನರಾವೃತಿರಹಿತ ಲೋಕಗಳು ಮುಂತಾದ ಅವನ ಸಂಬಂಧದ ವಿಚಾರಗಳು - ಇವೇ ಒಂದು ಬೃಹಲ್ಲೋಕವಾಗಿ ಯಾರ ಬುದ್ಧಿ, ಮನಸ್ಸುಗಳ ಚಿಂತನೆಗೂ ಎಟುಕದವಾಗಿ ಪ್ರಶ್ನಾರ್ಥವಾಗಿಯೇ ಅನಾದಿ ಕಾಲದಿಂದಲೂ ನಿಂತಿವೆ, ಮುಂದೆಯೂ ಇರುತ್ತವೆ. ಇದು ತಿಳಿದ ಪಕ್ಷದಲ್ಲಿ ಪರಮಾತ್ಮನು ತಿಳಿವಳಿಕೆಗೆ ಅಳತೆಗೆ ಒಳಪಟ್ಟ ಹಾಗೆ ಆಗುತ್ತದೆ. ಆಗ ಅವನ ವಿಶೇಷ ಅವ್ಯಕ್ತ ಸ್ಥಿತಿ ನಿಲ್ಲಲು ಸಾಧ್ಯವಿಲ್ಲ. ಹಾಗಾಗಿ ಅವನು ಅವ್ಯಕ್ತವಾದ ಅವನೇ ಅವನಾದ ಬೃಹಲ್ಲೋಕವಾಗಿ ನಿಂತೇ ಇರುತ್ತಾನೆ. ಇದೇ ಸತ್ಯ, ಪರಮ ಸತ್ಯ - ಪರಬ್ರಹ್ಮತತ್ವ, ಅಭೇದ್ಯ ಶಕ್ತಿ, ಜ್ಯೋತಿಃ ತಮಸಃ ಪರಸ್ತಾತ್. ಹೀಗೆ ಅವ್ಯಕ್ತವಾಗಿ, ಅಭೇದ್ಯವಾಗಿ ಸಾಕಾರ, ನಿರಾಕಾರಗಳೆರಡೂ ಆಗಿ ಬೃಹಲ್ಲೋಕವಾಗಿ, ಅಣೋರಣೀಯಾನ್ - ಮಹತೋ ಮಹೀಯಾನ್ ಆಗಿ ನಿಂತಿರುವ ಪರಮಾತ್ಮನು ಯಾರಿಗೂ ತಿಳಿಯದ ಬೃಹಲ್ಲೋಕ ಸ್ವರೂಪನಾಗಿ ನಮಸ್ಕರಿಸಲ್ಪಡುತ್ತಿದ್ದಾನೆ. ಮಹಾ ಮಹಿಮನು - ಅವನೇ "ಬೃಹಲ್ಲೋಕಾಯ ನಮಃ" ಎಂದು ಆಗುವವನು.

**589. ಸರ್ವಲೋಕಮಯಾಯ ನಮಃ**

ಪರಮಾತ್ಮನು ಎಲ್ಲೆಡೆಯೂ ಹರಡಿರುವವನು, ಪ್ರಸರಿಸಿರುವವನು, ತಾನಿಲ್ಲದ ಸ್ಥಳದಂತೆ ಇರುವವನು, ಲೋಕದಲ್ಲೆಲ್ಲಾ ಇರುವವನು. ಅದರಿಂದ ಲೋಕಮಯನು. ಒಂದೇ ಲೋಕವಲ್ಲ, ಏನೇನು ಎಲ್ಲೆಲ್ಲಿ ಯಾವ ಯಾವ ಲೋಕವಿದೆಯೋ, ಯಾವ ಯಾವ ಲೋಕವು ವ್ಯಕ್ತವಾಗಿದೆಯೋ, ಯಾವ ಯಾವ ಲೋಕವು ಅವ್ಯಕ್ತವಾಗಿದೆಯೋ - ಅಲ್ಲೆಲ್ಲ ಹರಡಿಕೊಂಡಿರುವವನು. ಹಾಗೆಯೇ ಸಕಲ ಬ್ರಹ್ಮಾಂಡಗಳಲ್ಲಿಯೂ ಅವನು ಹರಡಿಕೊಂಡಿದ್ದಾನೆ. - ಅವನಲ್ಲಿಯೇ ಅವನಾಗಿದ್ದಾನೆ. ಸೃಷ್ಟಿಸಿದ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಲ್ಲಿಯೂ, ಸೃಷ್ಟಿಸಿದ ಬ್ರಹ್ಮಾಂಡಗಳಲ್ಲಿಯೂ, ಕಾಮಿಸಿದ, ಕಾಮಿಸಲ್ಪಡುವ ಸಕಲದರಲ್ಲಿಯೂ ಅವನೇ ಅವನಾಗಿ ಪ್ರಸರಿಸಿರುವುದರಿಂದ ಸರ್ವಲೋಕಮಯನಾಗಿ ನಮಸ್ಕರಿಸಲ್ಪಡುತ್ತಾನೆ - ಸರ್ವಲೋಕಮಯಾಯ ನಮಃ.

**590. ವಿಭವೇ ನಮಃ**

ವಿಭು - ಸರ್ವವ್ಯಾಪಿ ಪರಮಾತ್ಮನು. ಎಲ್ಲ ಕಡೆಯೂ ಇರುವ ಪರಮಾತ್ಮ.

ವಿಭವೇ - ಸಂಪತ್ತು, ಸಾಮರ್ಥ್ಯ - ಇದೇ ಪರಮಾತ್ಮ.

ಪರಮಾತ್ಮನು ಸರ್ವವ್ಯಾಪಿ, ಸರ್ವ ಸಾಮರ್ಥ್ಯವುಳ್ಳವನು.

ಒಂದು ರೀತಿಯಲ್ಲಿ ಪ್ರತಿಯೊಂದು ಆತ್ಮವೂ ಸರ್ವವ್ಯಾಪಿ. ಇದರ ಪ್ರಸರಣ ಪರಮಾತ್ಮನಷ್ಟು ವಿಸ್ತಾರವಲ್ಲ. ತನ್ನ ಜೊತೆಯಿರುವ ಮನಸ್ಸು ಬುದ್ಧಿಯ ಕಾರಣ ಆತ್ಮನ ಪ್ರಸಾರ ವ್ಯಕ್ತವಾಗುತ್ತದೆ. ಆತ್ಮನ ರೂಪ ರೇಖೆಗಳು ಪರಮಾತ್ಮನದರಂತೆಯೇ. ಆದರೆ ಕ್ಲುಪ್ತ, ಅಷ್ಟೆ. ಪರಮಾತ್ಮನು ಪರಮವಾದ, ಉದಾತ್ತವಾದ, ಉತ್ತಮವಾದ ಆತ್ಮ. ಅವನು ಆತ್ಮಗಳಿಗೆಲ್ಲಾ, ಆತ್ಮಗಳಲ್ಲೆಲ್ಲಾ ಆತ್ಮನು. ಹಾಗೆ ಪರಮಾತ್ಮನೇ ವಿಭವೇ ನಮಃ ಎಂದರೆ ಅದೇ ಪರಮಾತ್ಮನಿಗೆ ಸೇರುತ್ತದೆ.

**591. ಲೋಕಕರ್ತ್ರೇ ನಮಃ**

ಕರ್ತೃ - ಎಂದರೆ ಮಾಡುವವನು, ಸೃಷ್ಟಿಸುವವನು.

ಲೋಕಕರ್ತೃ - ಲೋಕಗಳನ್ನು ಮಾಡುವವನು, ಸೃಷ್ಟಿಸುವವನು. ಇವನು ಸರ್ವೋತ್ತಮನಾದ ಪರಮಾತ್ಮನೇ. ಅವನೇ ಪರಬ್ರಹ್ಮ, ಬ್ರಹ್ಮ, ಮಹಾವಿಷ್ಣು, ವಟಪತ್ರಶಾಯಿ ಎಲ್ಲವೂ ಅವನೇ. ಅವನ ರೂಪಗಳು, ನಾಮಗಳು, ಕಾರ್ಯಕಾರಣ ವಿಭಾಗದ ರೂಪಗಳು.

ನಮ್ಮ ದೇಹದಲ್ಲಿರುವ ಆತ್ಮವೂ ಸಹ ಲೋಕಕರ್ತೃವೇ. ಇದು ತನ್ನಲ್ಲಿ ತನ್ನ ದೇಹೇಂದ್ರಿಯ ಮನೋ ಬುದ್ಧಿಗಳಲ್ಲಿ ಲೋಕಗಳನ್ನು ಸೃಷ್ಟಿಸಿಕೊಳ್ಳುತ್ತದೆ.

ಮತ್ತು ಇತರ ಸಮಾನವಾದ ಆತ್ಮಗಳಿಗೆ ಸ್ಪಂದಿಸಿ ಲೋಕಗಳನ್ನು ಸಂಖ್ಯೆಗಳಲ್ಲಿ ಮತ್ತು ತಮ್ಮ ತಮ್ಮ ಲೋಕಗಳಲ್ಲಿ ವಿಸ್ತಾರಿಸುತ್ತದೆ. ಇದು ಬಹಳ ವಿಚಿತ್ರವಾದ ಸಂಯೋಗ, ವಿಯೋಗಗಳ ಬಾಹ್ಯಾಭ್ಯಂತರ ಲೋಕಸೃಷ್ಟಿ - ಅವೇ ಲೋಕಕರ್ತೃ.

ಪರಮಾತ್ಮನಿಗೂ, ಆತ್ಮಗಳಿಗೂ ನಮಸ್ಕಾರಗಳು.

**592. ವಿಶ್ವಕರ್ತ್ರೇ ನಮಃ**

ವಿಶ್ವ - ಎಂದರೆ ಎಲ್ಲೆಲ್ಲಿ ಪರಮಾತ್ಮನು ಪ್ರವೇಶಿಸಿ ನಿಲ್ಲುವನೋ ಅವೆಲ್ಲಾ ವಿಶ್ವ. ಅವನ ಕಾಮನೆಯಿಂದ ಪ್ರಸರಿಸಿ ವಿಶ್ವವನ್ನು ಸೃಷ್ಟಿಸುತ್ತಾನೆ. ಹಾಗೆ ಸೃಷ್ಟಿಸಿದ ವಿಶ್ವವೇ ನೋಡುವ ದೃಷ್ಟಿಯಿಂದ ಲೋಕ ಎಂದು ಹೇಳಲ್ಪಡುತ್ತದೆ. ಲೋಕ, ವಿಶ್ವ ಎಂಬುದರಲ್ಲಿ ಸೂಕ್ಷ್ಮ ವ್ಯತ್ಯಾಸ, ಒಂದು ನೋಡುವ ದೃಷ್ಟಿಯಿಂದ ಹೆಸರು ಪಡೆಯುತ್ತದೆ ಇನ್ನೊಂದು ವಿಸ್ತರಿಸುವ ದೃಷ್ಟಿಯಿಂದ ಹೆಸರು ಪಡೆಯುತ್ತದೆ. ಆದರೆ ಪರಿಣಾಮ - ಅಖಿಲಾಂಡ ಕೋಟಿ ಬ್ರಹ್ಮಾಂಡಗಳು, ಜೀವಕೋಟಿಗಳು, ಸಚರಾಚರ ವಸ್ತುಗಳು, ಪ್ರಕೃತಿ, ಪುರುಷ ಮತ್ತು ಮಾಯೆ ಮತ್ತು ಅವುಗಳ ಸಂಪರ್ಕದಿಂದ ಆಗುವ ಲೋಕಗಳು, ವಿಶ್ವ ಮತ್ತು ನಡೆಯುವ ಸ್ಥಿತಿ, ನಿರಂತರ ಚಾಲನೆಯಲ್ಲಿರುವ ಜಗತ್ತು. ಆದರಿಂದ ವಿಶ್ವಕರ್ತೃವೆಂದರೆ ಅವನೇ - ವಿಶ್ವಕರ್ತ್ರೇ ನಮಃ ಎಂದರೆ ಅವನಿಗೇ ಸೇರುತ್ತದೆ.

**593. ಕೃತಕರ್ತ್ರೇ ನಮಃ**

ಕರ್ತಾ - ಎಂದರೆ ಮಾಡುವವನು.

ಕೃತ - ಎಂದರೆ ಮಾಡಲ್ಪಟ್ಟಿದ್ದು.

ಈಗ ಇರುವ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ಸೃಷ್ಟಿಸಿದವನು.

ಯಾವುದಾದರೂ ಕೆಲಸವನ್ನು ಮಾಡಿದ ನಂತರ ಮಾಡಿದವನಿಗೆ ಕೃತ ಕರ್ತೃ ಎಂದು ಹೇಳುತ್ತೇವೆ. ಇದು ಆತ್ಮನಿಗೆ ಸಲ್ಲುತ್ತದೆ. ಅದರಿಂದ ಪರಮಾತ್ಮನಾಗಲೀ, ಆತ್ಮನಾಗಲೀ ನಿರಂತರವಾಗಿ ಕಾರ್ಯಗಳನ್ನು (ಏನಾದರೂ) ಮಾಡುತ್ತಲೇ ಇರುವುದರಿಂದ ಸದಾ ಕೃತ ಕರ್ತೃರಾಗಿರುತ್ತಾರೆ. ಯಾವ ಕಾಲದಲ್ಲಿಯೂ ಯಾವ ಕಾರಣಕ್ಕೂ ಈ ಕೆಲಸ ನಿಲ್ಲದಿರುವುದರಿಂದ ಅವರು - ಆತ್ಮಗಳು, ಪರಮಾತ್ಮನು - ಕೃತಕರ್ತರು. ಆದರೆ ಪರಮಾತ್ಮನು ಶ್ರೇಷ್ಠತರ ಕೃತಕರ್ತಾ.

**594. ಕೃತಾಗಮಾಯ ನಮಃ**

ಕೃತ - ಎಂದರೆ ಮಾಡಲ್ಪಟ್ಟ ಕೆಲಸ, ಕಾರ್ಯ.

ಆಗಮ - ನಂತರ ಬಂದವನು ಅಥವಾ ಕೆಲಸಮಾಡಿ ಬಂದವನು.

ಪ್ರತಿ ಆತ್ಮನು ಮಾಡುವ ಕೆಲಸಗಳಿಗೂ ಹೆಸರನ್ನು ಅನ್ವಯಿಸಬಹುದು, ಕೃತಾಗಮನು.

ಪರಮಾತ್ಮನು ಸಕಲ ಬ್ರಹ್ಮಾಂಡಗಳನ್ನು ಮತ್ತು ಅವುಗಳಲ್ಲಿರುವ ಜೀವಕೋಟಿ, ಸಚರಾಚರ ವಸ್ತುಗಳನ್ನು ಸೃಷ್ಟಿಸಿದ ನಂತರ ಬಂದವನು ಉಪಸ್ಥಿತನಾಗಿದ್ದಾನೆ. ಅಥವಾ ಅವುಗಳಲ್ಲಿ ತಾನೇ ಉಪಸ್ಥಿತನಾಗಿದ್ದಾನೆ.

ಈ ರೀತಿಯಲ್ಲಿ ಆತ್ಮನಿಗೂ ಈ ನಾಮ ಅನ್ವಯಿಸುತ್ತದೆ. ಹೆಚ್ಚಾಗಿ ಬುದ್ಧಿ, ಮನಸ್ಸು, ಚಿತ್ತ, ಅಹಂಕಾರ, ಇಂದ್ರಿಯಗಳು, ಗುಣಗಳು - ಇವುಗಳ ಸಮುದಾಯಕ್ಕೆ ಅನ್ವಯಿಸುತ್ತದೆ. ಕೃತಾಗಮಃ ಎಂದು ಸಮಂಜಸ ನಾಮವಾಗುತ್ತದೆ.

ಪ್ರಕೃತ, ನರಸಿಂಹನ ಅವತಾರಕಾರ್ಯಗಳು - ಹಿರಣ್ಯಕಶಿಪುವನ್ನು ಸಂಹರಿಸಿದ್ದು, ಪ್ರಹ್ಲಾದನನ್ನು ರಕ್ಷಿಸಿದ್ದು, ಬ್ರಹ್ಮನ ವರವನ್ನು ಪಾಲಿಸಿದ್ದು. ನಂತರ ಬ್ರಹ್ಮದೇವರ ಪ್ರಾರ್ಥನೆಯನ್ನು ಲಾಲಿಸುತ್ತಿದ್ದಾನೆ. ನರಸಿಂಹನು ಇಷ್ಟೆಲ್ಲವನ್ನು ನಡೆಸಿದ ನಂತರ ಬ್ರಹ್ಮದೇವರು ಪ್ರಾರ್ಥಿಸುತ್ತಿರುವ ಕಾರಣ 'ಕೃತಕರ್ಮ' ಎಂದು ನರಸಿಂಹನನ್ನು ಹೊಗಳಿ ಶಾಂತಗೊಳಿಸಲು ಪ್ರಯತ್ನಿಸುತ್ತಿರುವಂತಿದೆ.

*ಅನಾದಿಸ್ತ್ವಮನಂತಸ್ತ್ವಮಭೂತೋ ಭೂತವಿಗ್ರಹಃ ।*
*ಸ್ತುತಃ ಸ್ತವಃ ಸ್ತವಪ್ರೀತಃ ಸ್ತೋತಾ ನೇತಾ ನಿಯಾಮಕಃ ।।100।।*
*(595-604)*

**595. ಅನಾದಯೇ ನಮಃ**

ಅನಾದಿ - ಆದಿ ಎಂದರೆ ಮೊದಲು, ಪ್ರಾರಂಭ, ಅ - ಇಲ್ಲದವನು. ಯಾವನು ಎಲ್ಲಿಂದ ಯಾವಾಗ ಎಲ್ಲಿ ಮೊದಲಾಗಿ ಶುರುವಾದನೋ ಅಂತಹ ಸ್ಥಳ, ಸಮಯವನ್ನು ಕಂಡು ಹಿಡಿದು ನಿರ್ದೇಶಿಸಲು ಸಾಧ್ಯವಲ್ಲದವನು - ಪರಮಾತ್ಮನೇ

ಪರಮಾತ್ಮನು ಸದಾ, ನಿರಂತರವಾಗಿ ಇರುವವನು, ಪ್ರಳಯಕಾಲದಲ್ಲಿಯೂ ಅಂದರೆ ನಿತ್ಯಪ್ರಳಯ, ನೈಮಿತ್ತಿಕ ಪ್ರಳಯ, ಬ್ರಹ್ಮದೇವನ ಮಹಾಪ್ರಳಯಕಾಲದಲ್ಲಿಯೂ, ಪ್ರತಿ ಕಲ್ಪಾದಿ ಕಲ್ಪಾಂತಗಳಲ್ಲಿಯೂ, ಪ್ರತಿ ಕಲ್ಪಾದಿಯಿಂದ ಕಲ್ಪಾಂತದ ಅಂತರ ಸಮಯದಲ್ಲಿಯೂ, ಕಾಲದ ಮಹಾಚಕ್ರಗಳಲ್ಲಿಯೂ ಇರುವವನು ಪರಮಾತ್ಮನೊಬ್ಬನೇ. ಅದರಿಂದ ಇವನಿಗೆ "ಆದಿ" ಎಂಬುದೇ ಇಲ್ಲ. ಅನಾದಿ - ಅದರಿಂದ ಇವನಿಗೆ ಅನಾದಯೇ ನಮಃ ಎಂದು ನಮಸ್ಕರಿಸುತ್ತೇವೆ.

ಪರಮಾತ್ಮನು ಸರ್ವಸ್ವತಂತ್ರನು. ಆದರೆ ಅವನು ಸರ್ವಕ್ಕೂ ಅಂದರೆ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೆ ಮತ್ತು ಅವುಗಳಲ್ಲಿರುವ ಸಕಲ ಜೀವಕೋಟಿಗೂ ಸಚರಾಚರ ವಸ್ತುಗಳಿಗೂ ಮತ್ತು ಸರ್ವದ ಆಗು

ಹೋಗುಗಳಿಗೂ ಕಾರಣ ಸ್ವರೂಪನು, ಸೂತ್ರಧಾರನು ಮತ್ತು ನಿರಂತರ ತನ್ನ ಸಂಕಲ್ಪಕ್ಕನುಗುಣವಾಗಿ ನಡೆಸುವವನು. ಇವನೇ ಅನಾದಿ ಸ್ವರೂಪನು.

ಆತ್ಮದ ವಿಚಾರ - ಸಕಲ ಆತ್ಮಗಳು ಯಾವಾಗಲೂ ನಾಶವಾಗುವುದಿಲ್ಲ. ಆದರೆ ಕೆಲವು ಕಾಲ ವ್ಯಕ್ತವಾಗುತ್ತವೆ. ಕೆಲವು ಕಾಲ ಅವ್ಯಕ್ತವಾಗುತ್ತವೆ. ಎಂದರೆ ಆಗ ಅವುಗಳು ಪರಮಾತ್ಮನಲ್ಲಿ ಲೀನವಾಗುತ್ತವೆ ಮತ್ತೆ ವ್ಯಕ್ತವಾಗುತ್ತವೆ. ಎಂದರೆ ಪರಮಾತ್ಮನ ಸಂಕಲ್ಪಕ್ಕನುಗುಣವಾಗಿ ವ್ಯಕ್ತಾವ್ಯಕ್ತ ಸ್ಥಿತಿಯನ್ನು ಪಡೆಯುತ್ತವೆ. ಒಂದು ವಾದ ಸರಣಿಯಂತೆ ಪರಮಾತ್ಮನಂತಯೇ ಆತ್ಮಗಳು ಇರುತ್ತವೆ ಮತ್ತು ಅವನ ಗುಣಗಳನ್ನೇ ಹೊಂದಿರುತ್ತವೆ. ಆದರೆ ವ್ಯತ್ಯಾಸವೆಂದರೆ ಪರಮಾತ್ಮನು ಆತ್ಮಗಳನ್ನು ನಿರ್ದೇಶಿಸುತ್ತಾನೆ. ಆತ್ಮಗಳು ಪರಮಾತ್ಮನ ಅಧೀನದಲ್ಲಿ ನಡೆಯುತ್ತವೆ. ಎರಡೂ ಅನಾದಿಯೇ. ಅನಾದಯೇ ನಮಃ ಎಂದರೆ ಆತ್ಮಕ್ಕೂ ಅನ್ವಯಿಸುತ್ತದೆ.

596. ಅನಂತಾಯ ನಮಃ

ಅಂತ - ಎಂದರೆ ಕೊನೆ, ಅ - ಎಂದರೆ ಇಲ್ಲದ್ದು.

ಅನಂತ - ಎಂದರೆ ಕೊನೆ ಇಲ್ಲದವನು - ಅಂದರೆ ಯಾರ ಅವತಾರ ಸಮಾಪ್ತಿ ಇಲ್ಲವೋ ಅವನು - ಅನಂತನು.

ಯಾವನು ಅನಾದಿಯೋ ಅವನಿಗೆ ಅಂತವಿರಬಹುದೆಂದು ಯೋಚಿಸಬಹುದು. ಆದರೆ ಪರಮಾತ್ಮನು ಹೇಗೆ ಅನಾದಿಯೋ ಅದೇ ರೀತಿ ಅನಂತನು. ಅಂತವಿದ್ದರೆ ಆದಿ ಇರಲೇ ಬೇಕು. ಆದಿ, ಅಂತಗಳು ಪರಸ್ಪರ ಪೂರಕಗಳು. ಒಂದರ ಆದಿಯಾದರೆ ಇನ್ನೊಂದರ ಅಂತವಾಗಿರಬೇಕು. ಉದಾಹರಣೆಗೆ ಒಂದು ಸುಖದ ಸಮಯ ಅಂದರೆ ಸುಖವು ಪ್ರಾರಂಭವಾಗಿ ಕೊನೆಗೊಂಡಾಗ, ದುಃಖವು ಪ್ರಾರಂಭವಾಗುತ್ತದೆ. ದುಃಖವು ಕೊನೆಗೊಂಡಾಗ ಮತ್ತೆ ಸುಖವು ಪ್ರಾರಂಭವಾಗುತ್ತದೆ. ಹೀಗೆ ಜೀವನದಲ್ಲಿ ಸುಖ ದುಃಖಗಳ ಚಕ್ರವು ಕ್ರಮಿಸುತ್ತಲೇ ಇರುತ್ತದೆ. ಇದೇ ರೀತಿ ಲಾಭ ನಷ್ಟ, ರಾತ್ರಿ ಹಗಲು ಚಕ್ರದೋಪಾದಿಯಲ್ಲಿ ನಡೆಯುತ್ತಿರುತ್ತದೆ. ಮುಂದೆ ಮುಂದೆ ಯೋಚನಾ ತರಂಗವನ್ನು ಓಡಿಸಿದರೆ ಜನನ - ಮರಣ - ಜನನಗಳೂ ಚಕ್ರವೇ.

ಆದರೆ ಆತ್ಮನು ಮಾತ್ರ ಉದ್ದಕ್ಕೂ ಜನನ - ಮರಣ - ಜನನ ಚಕ್ರದಲ್ಲಿ ಒಬ್ಬನೇ ನಿರಂತರ ಕ್ರಮಿಸುತ್ತಿರುತ್ತಾನೆ. ಅದರಿಂದ ಅವನಿಗೆ ಆದಿ, ಅಂತಗಳು ಇರುವುದಿಲ್ಲ. ಇದು ಪರಮಾತ್ಮನ ಅಧೀನವಾಗಿ ನಡೆಯುತ್ತದೆ.

ಪರಮಾತ್ಮನಿಗೆ ಆದಿ, ಅಂತಗಳು ಯಾವುದೂ ಇಲ್ಲ. ಅವನು ಅನಾದಿಯು, ಅನಂತನು, ಅದರಿಂದ ಅವನನ್ನು ಅನಂತಾಯ ನಮಃ ಎಂದು ನಮಸ್ಕರಿಸುತ್ತೇವೆ.

ಅನಂತ - ಎಂದರೆ ಆದಿಶೇಷನು. ಇವನು ಪರಮಾತ್ಮನಿಗೆ ಪರ್ಯಂಕವಾಗಿ ಸೇವೆ ಮಾಡುತ್ತಾನೆ. ಅನಂತನು - ಸರ್ಪರೂಪಿ. ಪರಮಾತ್ಮನು ನಾಭಿಕಮಲದಿಂದ ಬ್ರಹ್ಮನನ್ನು ಹೊರತಂದು ಅನಂತನೆಂಬ ಹಾಸಿಗೆಯ ಮೇಲೆ ಮಲಗಿರುವುದರಿಂದ ಅವನಿಗೆ ಅನಂತಪದ್ಮನಾಭಸ್ವಾಮಿ ಎಂದಾಗಿ ನಮಸ್ಕರಿಸುತ್ತೇವೆ.

ಕಾಲದೇವನು ಎಂದರೆ "ಸಮಯ". "ಕಾಲ" ದ ದೇವತೆಯು ಪರಮಾತ್ಮನಿರುವವರೆಗೆ ಅವನ ಅಪೇಕ್ಷೆಯಂತೆ ಇರುತ್ತಾನೆ. ಎಲ್ಲವನ್ನು ನಿರಂತರ ನಿರೀಕ್ಷಿಸುವ "ದೇವತೆ". ಅದರಿಂದ ಇವನೂ ಸಹ "ಅನಾದಿ". ಅನಂತನು. ಹಾಗಾಗಿ ಅನಂತಾಯ ನಮಃ ಎಂದರೆ ಕಾಲದೇವನಿಗೆ ನಮಸ್ಕರಿಸಿದಂತಾಯಿತು.

ಕಾಲದೇವ - ಎಂದರೆ ಮೃತ್ಯುದೇವ - ಯಮ. ಸಕಲ ಪ್ರಾಣಿಗಳಿಗೂ ಪ್ರಾಣವನ್ನು ದೇಹದಿಂದ ಹರಣಮಾಡಿ ಮುಂದಿನ ದೇಹಕ್ಕೆ ಸೂಕ್ಷ್ಮ ಶರೀರವು ಸೇರುವ ಹಾಗೆ ಮಾಡುವವನು. ಒಂದು ರೀತಿಯಲ್ಲಿ ಇವನೂ ಸಹ ಅನಂತನೇ. ಆದರೆ ಇವನಿಗೆ ಒಂದು ಮಿತಿಯಿದೆ. ಪರಮಾತ್ಮನ ಅಂಶದಲೇ ಇರುವುದರಿಂದ ಕಾಲಾನುಕಾಲಕ್ಕೆ ಅವನನ್ನೇ ಸೇರುವುದರಿಂದ ಇತರ ದೇವ ದೇವತೆಗಳಂತೆಯೇ ಆಯಿತು.

ಅನಂತ - ಎಂದರೆ ಕೃಷ್ಣ, ವಿಷ್ಣು, ಶೇಷ, ವಾಸುಕಿ, ಆಕಾಶ, ಬ್ರಹ್ಮ, ಎಂದೂ ಹೇಳಬಹುದು.

ಶೇಷ, ವಾಸುಕಿ, ಬ್ರಹ್ಮ ಇವರುಗಳು ಪರಮಾತ್ಮನು ಇಚ್ಛಿಸಿದ ಕಾರ್ಯಗಳನ್ನು ನಡೆಸುವ ಸಲುವಾಗಿ ಅವನಿಂದಲೇ ಅವನ ರೂಪಗಳನ್ನೂ ತಾಳಿದವರು. ಮೂಲದಲ್ಲಿ ಅವನೇ ಮತ್ತು ಅವತಾರದ ಕೊನೆಯಲ್ಲಿ ಅವನನ್ನೇ ಸೇರುತ್ತಾರೆ.

**597. ಅಭೂತಾಯ ನಮಃ**

ಭೂತ - ಎಂದರೆ ಪಂಚಭೂತಗಳಾದ ಪೃಥವೀ (ಭೂಮಿ), ಆಪಃ (ನೀರು), ತೇಜಃ (ಅಗ್ನಿ), ವಾಯು (ಗಾಳಿ), ಆಕಾಶ (ಆಕಾಶ, ನಭ). ಇವು ಪರಮಾತ್ಮನಿಂದ ಮೊದಲು ಸೃಷ್ಟಿಯಾದವು. ಪರಮಾತ್ಮನು ಇವುಗಳಲ್ಲಿ ತಾನೇ ತಾನಾಗಿ ಹರಡಿದ್ದಾನೆ. ಕಣ ಕಣಗಳಲ್ಲಿ ಇವುಗಳಲ್ಲಿ ಹರಡಿದ್ದಾನೆ. ಅವನು ಇರದ ಸ್ಥಳವೇ ಇಲ್ಲ. ಆದರೂ ಅವನು ಇವುಗಳನ್ನು ಮೀರಿ ಹೊರಗೆ ಇದ್ದಾನೆ. ಅದರಿಂದ ಭೂತನೂ ಅವನೇ, ಅಭೂತನೂ ಅವನೇ.

ಭೂತ - ಎಂದರೆ ಜೀವಿಗಳು. ಜೀವಿಗಳು - ಎಂದರೆ ಆತ್ಮಗಳು. ಆತ್ಮಗಳು ಪರಮಾತ್ಮನಿಂದ ತೇಜೋರೂಪದಲ್ಲಿ ಬಂದ ಅಂಶಗಳು. ಅದರಿಂದ ಆತ್ಮಗಳು ಅವನೇ. ಆದರೆ ಅವನು ಪ್ರತಿ ಆತ್ಮವನ್ನು ತನ್ನ ಅಧೀನದಲ್ಲಿಟ್ಟು

ನಡೆಸುವುದರಿಂದ ಅವುಗಳಿಂದ ಅವನು ಮೀರಿದವನು, ಅತೀತನು ಆಗಿದ್ದಾನೆ. ಅದೇ ಕಾರಣದಿಂದ ಅವನನ್ನು ''ಅಭೂತ'' ಎನ್ನುತ್ತೇವೆ.

ಅ - ಭೂತ - ಭೂತ ಎಂದರೆ ಗತಿಸಿಹೋದ ಭಾವನೆ. ಇವನಿಗೆ ಹಿಂದೆ ಗತಿಸಿ ಹೋದ ಭಾವವೇ ಇರುವುದಿಲ್ಲ. ಕಾಲಮಾಪನದಲ್ಲಿ ಭೂತಕಾಲ - ಎಂದರೆ ಗತಿಸಿಹೋದ ಅಥವಾ ಹಿಂದೆ ನಡೆದಿರುವ ಕಾಲ ಎಂದಾಗುತ್ತದೆ. ಅವನು ಅಭೂತನು. ಇವನು ಕಾಲಾತೀತನಾದ್ದರಿಂದ ಅಭೂತನು - ಅಭೂತಾಯ ನಮಃ ಎಂದೇ ಹೇಳುತ್ತೇವೆ. ಅದು ಪರಮಾತ್ಮನಿಗೇ ಸೇರುತ್ತದೆ. ಸ್ವಲ್ಪ ಪರಿಮಿತಿಯಲ್ಲಿ ಆತ್ಮವನ್ನೂ ನಾವು ನಿರ್ದೇಶಿಸಬಹುದು.

ಆತ್ಮನಿಗಿಂತ ಶ್ರೇಷ್ಠವಾದವನು - ಪರಮಾತ್ಮನು, ಶ್ರೇಷ್ಠ ರೀತಿಯ ಅಭೂತನು.

598. ಭೂತವಿಗ್ರಹಾಯ ನಮಃ

ಭೂತ - ಪಂಚಭೂತಗಳನ್ನು, ವಿಗ್ರಹ - ಪ್ರಭೇದ ಮಾಡಿದವನು, ಪಂಚಮಹಾಭೂತಗಳನ್ನು ಬೇರೆ ಬೇರೆಯಾಗಿ ವಿಂಗಡಿಸಿದವನು ಯಾರೋ ಅವನು - ಪರಮಾತ್ಮನು.

ಹಾಗೆಯೇ ಆತ್ಮಗಳನ್ನು ಬೇರೆ ಬೇರೆಯಾಗಿ ತನ್ನ ದೇಹದಿಂದ ಹೊರತಂದು ಬೇರೆ ಬೇರೆಯಾಗಿ ಸಂಸಾರ ಸಾಗರ, ಪ್ರಕೃತಿ, ಪುರುಷ, ಮಾಯೆಗಳಲ್ಲಿ ಸ್ಪಂದಿಸಿ ಕಾಲಚಕ್ರದಲ್ಲಿ ಜೀವನದ ಹಾದಿಯನ್ನು ಕಂಡುಕೊಂಡು ನಿರಂತರ ನಡೆಯುವಂತೆ ಮಾಡಿದವನು - ಭೂತವಿಗ್ರಹನು.

ವಿಗ್ರಹ - ಎಂದರೆ ಪ್ರತಿಮೆ, ಪ್ರತಿರೂಪ.

ಅಖಂಡ ಸೃಷ್ಟಿಯಲ್ಲಿ ಪ್ರತಿಯೊಂದರಲ್ಲಿಯೂ ಪರಮಾತ್ಮನೇ ಇರುವುದರಿಂದ ಪ್ರತಿಯೊಂದೂ ಅವನ ಪ್ರತಿರೂಪವನ್ನೇ ನಿರ್ದೇಶಿಸುತ್ತದೆ. ಅದರಿಂದ ಅವನು ಭೂತವಿಗ್ರಹನು. ಅವನನ್ನು ಬಿಟ್ಟು ಅವನಿರದ ಸೃಷ್ಟಿಯಿಲ್ಲ. ಅದರಲ್ಲಿರುವ ವಸ್ತುವಾಗಲೀ ಜೀವವಾಗಲೀ ಇಲ್ಲ. ಅವನಿಲ್ಲದೆ ಯಾವುದೂ ಇಲ್ಲ.

599. ಸ್ತುತಾಯ ನಮಃ

ಸ್ತುತಿ - ಎಂದರೆ ಹೊಗಳುವುದು, ಹೊಗಳುವ ಮಾತುಗಳು. ಪ್ರಶಂಸೆಯ ಶಬ್ದಗಳು, ಕೃತಜ್ಞತೆಯನ್ನು ತೋರಿಸುವ ಮಾತುಗಳು.

ಅತ್ಯಂತ ಪ್ರಶಂಸೆಯನ್ನು ನಾವು ಯಾರು ನಮಗೆ ಅಸ್ತಿತ್ವವನ್ನು ಕೊಟ್ಟಿರುವವರೋ, ನಮಗೆ ಆಧಾರಭೂತವಾಗಿ ಇರುವವರೋ ಅವರಿಗೆ ತೋರಿಸುತ್ತೇವೆ. ಇದಕ್ಕೆ ಪರಮಾತ್ಮನೊಬ್ಬನೇ ಸರಿಯಾದ ಅರ್ಹವಾದ ವ್ಯಕ್ತಿತ್ವ, ಗುರಿ.

ಯಾರು ಹೊಗಳಲ್ಪಡುವವರೋ ಅವರು ಸ್ತುತರು. ಪರಮಾತ್ಮನು ಸ್ತುತನು. ಅದರಿಂದ ಅವನಿಗೆ ಸ್ತುತಾಯ ನಮಃ ಎನ್ನುತ್ತೇವೆ.

ಪರಮಾತ್ಮನನ್ನು ಯಾವ ನಾಮದಿಂದ ಕರೆದರೂ ಎಷ್ಟೇ ನಾಮದಿಂದ ಕರೆದರೂ ಅದು ಅವನಿಗೇ ಹೋಗುತ್ತದೆ. ಅದರಿಂದ ''ಸ್ತುತ ಏವಂ ನ ಸಂಶಯಃ'' ಎಂದು ವಿಷ್ಣುಸಹಸ್ರನಾಮದಲ್ಲಿ ಭೀಷ್ಮರು ಹೇಳಿದ್ದಾರೆ.

ಸ್ತುತ - ಹೊಗಳಲ್ಪಡುವವನು ಪರಮಾತ್ಮನೆ. ಹೊಗಳುವವನು ಹೊಗಳುವ ಆತ್ಮವೂ ಅವನ ಅಂಶವೇ. ಹೊಗಳುವ ಶಬ್ದಗಳು - ಶಬ್ದಬ್ರಹ್ಮನೇ - ಅಂದರೆ ಅವನೇ. ಅಂದರೆ ಈ ಕಾರ್ಯ - ಕಾರಣ ಕರಣಗಳಲ್ಲಿ ಅವನೇ ಅವನಾಗಿದ್ದಾನೆ.

**600. ಸ್ತವಾಯ ನಮಃ**

ಸ್ತವ - ಎಂದರೆ ಸ್ತೋತ್ರಮಾಡಲ್ಪಟ್ಟ ಮತ್ತು ಸ್ತೋತ್ರ ಮಾಡಲ್ಪಡುವ ಶಬ್ದ ಸಮೂಹಗಳು - ಹೊಗಳಿಕೆ, ಸ್ತುತಿಗಳು.

ಯಾರನ್ನ ಕುರಿತು ಹೊಗಳಿದರೂ ಅದು ಸ್ತವವೇ. ಆದರೆ ಅದು ಸ್ತವ ಎಂಬ ಅಂತಸ್ತನ್ನು ಸೇರುವುದಿಲ್ಲ. ಪರಮಾತ್ಮನೊಬ್ಬನನ್ನೇ ಕುರಿತು ಹೇಳುವ ಪ್ರಶಂಸನೀಯ ಪದ ಸಮೂಹಕ್ಕೆ ಮಾತ್ರ ಸ್ತವ ಎಂದು ಹೇಳುತ್ತೇವೆ. ಅವನೊಬ್ಬನಿಗೇ ಸ್ತವಾಯ ನಮಃ ಎಂದು ಹೇಳುತ್ತೇವೆ. ಮತ್ತೆ ಬೇರೆಯವಕ್ಕೆ ಪ್ರಶಂಸಾ ಪದಗಳು, ಪ್ರಶಂಸಾ ಪತ್ರಗಳು ಎಂದು ಹೇಳುತ್ತೇವೆ. ತಮ್ಮನ್ನು ತಾನೇ ಹೊಗಳಿಕೊಳ್ಳುವುದಕ್ಕೆ ಆತ್ಮಪ್ರಶಂಸೆ ಎಂದು ಹೇಳುತ್ತೇವೆ, ಆದರೆ ಅವುಗಳು ಸ್ತವ ಎಂದು ಎನಿಸುವುದಿಲ್ಲ.

**601. ಸ್ತವಪ್ರೀತಾಯ ನಮಃ (ಸ್ತವ)**

ಸ್ತವ - ಎಂದರೆ ಹೊಗಳುವ ಮಾತುಗಳ ಸಮೂಹಗಳಿಂದ,

ಪ್ರೀತಃ - ಸಂತೋಷಗೊಂಡವನು ಯಾರೋ ಅವನು ಸ್ತವಪ್ರೀತನು - ಅಂದರೆ ಯಾರಾದರೂ ಆಗಬಹುದು, ಆದರೆ ಸ್ತವಪ್ರೀತರ ಆ ಸಮಯದ ಸ್ಥಿತಿಯ ಮೇಲೆ ನಿರ್ಧರಿಸಲ್ಪಡುತ್ತದೆ. ಇದು ಸಾಮಾನ್ಯವಾಗಿ ಪರಮಾತ್ಮನೊಬ್ಬನಿಗೇ ಅನ್ವಯಿಸುತ್ತದೆ, ಏಕೆಂದರೆ ಅವನಷ್ಟು ನಿಷ್ಕಾಮ ಸ್ತವಪ್ರೀತರು ಯಾರೂ ಇಲ್ಲ. ಬೇರೆಯ ಯಾರಿಗೇ ಅನ್ವಯಿಸಿದರೂ ಅಥವಾ ಅನ್ವಯಿಸಲು ಪ್ರಯತ್ನ ಪಟ್ಟರೂ ಅವರ ಪ್ರೀತಿ ತತ್ಕಾಲಿಕ, ಕ್ಷಣಿಕ ಮತ್ತು ತೋರಿಕೆಯದು, ಕಪಟ ರೀತಿಯದು. ಪರಮಾತ್ಮನೊಬ್ಬನೇ ಯಾರಿಂದಲೂ ಯಾವ ರೀತಿಯ ಸ್ತವವನ್ನೇ ಸಹ ಅಪೇಕ್ಷಿಸದವನು. ಅವನು ತನಗಾಗಿ ಏನನ್ನೂ ಆಶಿಸುವುದಿಲ್ಲ. ಎಲ್ಲವೂ ಭಕ್ತನಿಗಾಗಿಯೇ ಇಟ್ಟಿರುತ್ತಾನೆ. ಭಕ್ತನಲ್ಲದವನಿಗೂ ಸಮಾನ ದೃಷ್ಟಿಯಿಂದ ಕಾಣುತ್ತಾನೆ. ಉದಾಹರಣೆಗೆ ಸೂರ್ಯನ ರಶ್ಮಿಗಳು ಯಾರನ್ನೂ ಪಕ್ಷಪಾತದಿಂದ ನೋಡುವುದಿಲ್ಲ. ನದಿಯಲ್ಲಿ ಹರಿಯುವ ನೀರು, ಗಾಳಿ, ಆಕಾಶಗಳು, ಅಗ್ನಿ ಎಲ್ಲವೂ ಎಲ್ಲರನ್ನು

ಸಮಭಾವದಿಂದ ಕಾಣುತ್ತವೆ. ಸಮಭಾವದಿಂದ ತಮ್ಮ ಕ್ರಿಯೆಯನ್ನು ಮಾಡುತ್ತವೆ.

ಅನೇಕರು ಮಾಡಿದ ಸ್ತವಗಳಿಂದ ಪರಮಾತ್ಮನು ಪ್ರೀತನಾದಾಗ ಅವನು ಕೊಡುವುದು ''ಶಾಂತತೆ'', ಮನಸ್ಸಿಗೆ ಸಮಾಧಾನ, ಯಾವಾಗ ಸ್ತೋತ್ರ ಮಾಡಿದಾಗ ಮಾಡುವವರಿಗೆ ಮನಸ್ಸಿನ ಸ್ಥಿತಿ ಮಾಡುವುದಕ್ಕೆ ಮುಂಚೆ ಇದ್ದ ಸ್ಥಿತಿಗಿಂತ ನಂತರ ಹೆಚ್ಚು ಪರಿವರ್ತಿತ ಸಮಾಧಾನ ಸ್ಥಿತಿಯು ಉಂಟಾಗುವುದೋ ಆಗ ಪರಮಾತ್ಮನು ಸ್ತವಗಳಿಂದ ಸುಪ್ರೀತನಾಗಿದ್ದಾನೆ ಎಂದು ತಿಳಿಯಬಹುದು. ಇದು ಅವನು ಭಕ್ತರಿಗೆ ಕೊಡುವ ಉದಾರ ವರ - ಮನಶ್ಶಾಂತಿ. ಇದೇ ಅವನು ಪ್ರೀತಿಗೊಂಡನೆಂಬುದಕ್ಕೆ ಮಾನದಂಡ. ಅವನು ನಮ್ಮ ಅತ್ಯಂತ ಶ್ರದ್ಧೆ, ಅನನ್ಯ ಅವ್ಯಭಿಚಾರಿಣೀ ಭಕ್ತಿಗಳಿಂದ ಸುಪ್ರೀತನಾಗದೇ ಇರುವುದೇ ಇಲ್ಲ. ಅದಕ್ಕೆ ತಕ್ಕ ಪ್ರಮಾಣದ ಫಲವನ್ನು ಕೊಟ್ಟೇ ಬಿಡುತ್ತಾನೆ. ಏನನ್ನೂ ಅವನು ಮುಂದಕ್ಕೆ ಹಾಕಿ ಹೊರೆ ಎತ್ತಿಕೊಳ್ಳುವುದಿಲ್ಲ. ಇದು ಬಹಳ ಸತ್ಯ.

ಯಾರೇ ಆಗಲೀ ದೇವಸ್ಥಾನಕ್ಕೆ ಹೋಗಿ ಬಂದಾಗ ಪಡುವ ಶಾಂತಿ ಮೊದಲಿದ್ದದ್ದಕ್ಕಿಂತ ಭಿನ್ನವಾದುದು. ಸಾಧು ಸಜ್ಜನರು ದೇವರು ಕೃಪೆಮಾಡಿ ಕೊಟ್ಟ ತೀರ್ಥ ಪ್ರಸಾದಗಳ ಸೇವನೆಯಿಂದ ಅಪಾರ ಶಾಂತಿಯನ್ನು ಪಡೆಯುತ್ತೇವೆ. ಅವರು ನಮಗಿಂತ ಉತ್ತಮರು, ಸಾಧನೆಮಾಡಿದವರು, ಮುಕ್ತರು. ನಮ್ಮನ್ನು ಮೇಲೆತ್ತುವುದಕ್ಕಾಗಿಯೇ ನಮಗೆ ದರ್ಶನಕೊಡುತ್ತಾರೆ ಮತ್ತು ಮಾರ್ಗದರ್ಶನ ಮಾಡುತ್ತಾರೆ. ಗುರುವು ಅನಿರೀಕ್ಷಿತವಾಗಿ ಭಗವಂತನ ಪ್ರೇರಣೆಯಿಂದ ದೊರಕುತ್ತಾನೆ. ದೊರಕಿದಾಗ ಉಪಯೋಗಿಸಿಕೊಳ್ಳುವುದು ನಮ್ಮ ಸಂಸ್ಕಾರ, ಪ್ರಾರಬ್ಧ ಕರ್ಮಗಳನ್ನು ಅವಲಂಬಿಸಿರುತ್ತದೆ. ಪರಮಾತ್ಮನು ಸದಾಪ್ರೀತನು, ಆಶುತೋಷನು, ಕ್ಷಿಪ್ರಪ್ರಸಾದನು.

## 602. ಸ್ತೋತ್ರೇ ನಮಃ

ಸ್ತೋತ್ರ - ಎಂದರೆ ಹೊಗಳಲ್ಪಡುವ ಪದಸಮೂಹ ಅಥವಾ ಕೃತಜ್ಞತಾಪೂರ್ವಕವಾಗಿ ಪ್ರಶಂಸೆಮಾಡಲ್ಪಡುವ ಪದಸಮೂಹ. ಸ್ತೋತ್ರ ಮಾಡಲ್ಪಡುವವನು - ಸ್ತೋತ್ರಾ ಅಥವಾ ಯಾರನ್ನು ಕುರಿತು ಪ್ರಶಂಸಿಸಲು ಸ್ತೋತ್ರಗಳು ಮಾಡಲ್ಪಟ್ಟಿವೆಯೋ ಅವನು - ಸ್ತೋತ್ರಾ.

ಪರಮಾತ್ಮನೇ ಅತ್ಯುತ್ತಮವಾಗಿ ಸ್ತೋತ್ರಮಾಡಲ್ಪಡುವವನು. ಅತ್ಯುತ್ತಮವಾಗಿ, ಅತಿ ವಿವರವಾಗಿ, ಅತಿ ವೈಶಾಲ್ಯವಾಗಿ, ಯಥೇಚ್ಛವಾಗಿ, ಮನಸ್ಸಿಗೆ ತೃಪ್ತಿಯಾಗುವವರೆಗೆ ಪ್ರಶಂಸಿಸಲ್ಪಡುವವನು ಪರಮಾತ್ಮನೊಬ್ಬನೇ. ಸಕಲ ಚರಾಚರ ವಸ್ತುಗಳಿಂದಲೂ, ಸಮಸ್ತ ಜೀವಕೋಟಿಯಿಂದಲೂ ಪ್ರತ್ಯೇಕವಾಗಿ ಎಣಿಸಲಸಾಧ್ಯವಾದ ರೀತಿಯಲ್ಲಿ, ಅಗಣಿತವಾಗಿ ಪ್ರಶಂಸಿಲ್ಪಡುವವನೂ ಪರಮಾತ್ಮನೊಬ್ಬನೇ.

ಸ್ತೋತ್ರಗಳಿಗೆ ರೀತಿ, ನೀತಿಗಳಿಲ್ಲ. ಅವನನ್ನು ಕುರಿತು ಏನನ್ನೇ ಹೇಳಿದರೂ, ಹೇಗೇ ಹೇಳಿದರೂ, ವ್ಯಾಕರಣಬದ್ಧವಾಗಿಯಾಗಲೀ, ರಾಗ ತಾಳ ಲಯಬದ್ಧವಾಗಲೀ, ಬದ್ಧವಿಲ್ಲದ ರೀತಿಯಲ್ಲಾಗಲೀ, ಅವರವರ ಮನೋಗತ ರೀತಿಯಲ್ಲಾಗಲೀ, ಹೇಗೆ ಹೇಳಿದರೂ ಅವು ಸ್ತೋತ್ರಗಳೇ! ಆಯಾ ಜೀವಿಗೆ ಅದದೇ ಹೆಚ್ಚು - ಅದದೇ ರೀತಿಯೇ ಭಾವನಾಮಾತ್ರ ರೀತಿ. ಭಾವನಾಮಾತ್ರ ಸಂತುಷ್ಟಾಯ ನಮಃ ಎನ್ನುತ್ತೇವೆ - ಲಲಿತಾದೇವಿಯನ್ನು - ಪರಮಾತ್ಮನನ್ನು. ಆಳವಾದ ಭಾವಾವೇಶವೇ ಸ್ತೋತ್ರವನ್ನು ತಾನಾಗಿಯೇ ಹೊರ ಹೊಮ್ಮುವಂತೆ ಮಾಡುತ್ತದೆ. ಸ್ತೋತ್ರ ಮಾಡುವವನು ತನ್ನನ್ನೇ ಮರೆತು ಪರಮಾತ್ಮನನ್ನು ತನ್ನವನನ್ನಾಗಿ ಮಾಡಿಕೊಳ್ಳುವ ರೀತಿಯೇ ಈ ಸ್ತೋತ್ರಗಳು. ಪ್ರತಿಯೊಂದು ಜೀವಿಯ ಸ್ತೋತ್ರವೂ ಅವನನ್ನೇ ಕುರಿತಾದ್ದರಿಂದ ಅವನೇ ಆ ಜೀವಿಯ ತನು, ಮನ ಆತ್ಮಗಳಲ್ಲಿ ಕುಣಿಯುತ್ತಾನೆ. ಹಾಗೆ ಕುಣಿಯುವಾಗ ತಿಳಿದೋ ತಿಳಿಯದೆಯೋ ಹೊರಬರುವ ಭಾವನಾ ಪದಸಮೂಹವೇ ಈ ಸ್ತೋತ್ರಗಳು. ಹೀಗೆ ಸ್ತೋತ್ರ ಮಾಡಲ್ಪಡುವವನೇ - ಸ್ತೋತ್ರಾ.

**603.** ನೇತಾಯ ನಮಃ / ನೇತ್ರೇ ನಮಃ

ನೇತಾಯ ನಮಃ ನಯತಿ ಯಃ ಸಃ ನೇತಾ, ಎಳೆದುಕೊಳ್ಳುವನು, ತನ್ನ ಎಡೆಗೆ ಎಳೆದುಕೊಳ್ಳುವನು.

ನೇತ್ರೇ ನಮಃ - ಒಯ್ಯುವವನು, ಕಣ್ಣುಗಳುಳ್ಳವನು.

ನೇತಾ - ಮುಖಂಡನು.

ಮೇಲಿನ ಯಾವ ಅರ್ಥವನ್ನೇ ಕುರಿತು ಮನನ ಮಾಡಿದರೂ ಆ ಕಾರ್ಯವನ್ನು ನಿರ್ವಿಘ್ನವಾಗಿ, ನಿಶ್ಕಲ್ಮಶವಾಗಿ, ನಿಷ್ಕಾಮವಾಗಿ ಮಾಡುವವನು - ಪರಮಾತ್ಮನೊಬ್ಬನೇ. ಯಾವ ರೀತಿಯ ಪ್ರತಿ ಫಲವನ್ನೂ ನಿರೀಕ್ಷಿಸದೆ ಮಾಡುವವನೆಂದರೆ ಪರಮಾತ್ಮನೊಬ್ಬನೇ. ಅವನೊಬ್ಬನಿಂದಲೇ ನಿಷ್ಪಕ್ಷಪಾತವಾಗಿ ಎಲ್ಲವೂ ನಡೆಯುತ್ತದೆ. ಯಾವ ಕಾಲ ದೇಶದಲ್ಲಿ ಎಂತಹ ಸ್ಥಿತಿಯಲ್ಲಿರುವ ಜೀವಿಯೇ ಆಗಲಿ, ಅದನ್ನು ತನ್ನ ಹತ್ತಿರ ಎಳೆದುಕೊಳ್ಳುವವನು ಪರಮಾತ್ಮನೊಬ್ಬನೇ. ಅದನ್ನು ತನ್ನ ಕರುಣಾರಸಪೂರಿತವಾದ ದೃಷ್ಟಿಯಿಂದ ಹತ್ತಿರ ಕರೆಯುವವನು ಇವನೊಬ್ಬನೇ. ಯಾವ ಇತರ ಜೀವಿಯೂ ಇಷ್ಟು ವಿಶಾಲತೆಯಿಂದ ಯಾವ ಜೀವಿಯನ್ನಾಗಲೀ, ಸಚರಾಚರ ವಸ್ತುವನ್ನಾಗಲೀ ನೋಡುವುದಿಲ್ಲ. ಈ ಕಾರಣದಿಂದಲೇ ಸರ್ವರೂ ಅವನನ್ನೇ ಆಶ್ರಯಿಸುತ್ತಾರೆ.

ನೇತ್ರ - ಮಾರ್ಗದರ್ಶನ ಮಾಡುವವನು.

ಸಕಲ ಭೂಮಂಡಲದಲ್ಲಿ, ಬ್ರಹ್ಮಾಂಡದಲ್ಲಿ ಪ್ರತಿಯೊಂದು ಜೀವಿಯ ಅಂತರಂಗದಲ್ಲಿ ಕುಳಿತು ಸಾರಥಿಯಾಗಿ ವರ್ತಿಸುತ್ತಾ ಪ್ರತಿಕ್ಷಣದಲ್ಲಿಯೂ

ಮಾರ್ಗದರ್ಶನ ಮಾಡುವವನು ಪರಮಾತ್ಮನೊಬ್ಬನೇ ಹೊರತು ಬೇರೆ ಯಾರೂ ಇಲ್ಲ. ನಿರಂತರವಾಗಿ ತನ್ನ ಸಂಕಲ್ಪಕ್ಕನುಗುಣವಾಗಿ ಪ್ರತಿ ಜೀವಿಯನ್ನೂ ಇತರ ಜೀವಿಗಳು, ಬ್ರಹ್ಮಾಂಡದ ಸೃಷ್ಟಿ ವೈಖರಿಯಲ್ಲಿ ಸ್ಪಂದಿಸುವಂತೆ ಮಾಡುವವನು ಅವನೇ - ಕಾಲಚಕ್ರದಲ್ಲಿ ಸಿಲುಕಿಸಿದರೂ ಅದರಿಂದ ಬಿಡಿಸಲು ದಾರಿ ತೋರಿಸುವವನೂ ಅವನೇ - ಅವನೇ ನೇತ್ರನು - ನೇತ್ರೇ ನಮಃ ಎಂದರೆ ಅವನಿಗೇ ಸಲ್ಲುತ್ತದೆ.

**604. ನಿಯಾಮಕಾಯ ನಮಃ**

ನಿಯಾಮಕ - ಎಂದರೆ ನಿಯಮಿಸುವವನು.

ಒಂದು ರೀತಿಯಲ್ಲಿ ನೋಡಿ ವಿಮರ್ಶೆ ಮಾಡಿದರೆ ಸಕಲ ಜೀವಿಗಳೂ ಒಂದೊಂದಕ್ಕೆ ಅಥವಾ ಬೇರೆಯವಕ್ಕೆ ನಿಯಮಿಸುವವುಗಳೇ, ನಿಯೋಜಿಸುವವುಗಳೇ, ಕಾರ್ಯಭಾರವನ್ನು ಮಾಡಲು ನಿರ್ದೇಶಿಸುವವುಗಳೇ! ಆದರೆ ಅದರಂತೆ ನಡೆಯುವುಗಳೇ! ಆದರೆ ಪರಮಾತ್ಮನ ನಿಯೋಜನೆಯಂತೆ ಸರ್ವರೂ ಸರ್ವಕಾಲದಲ್ಲಿಯೂ ಎಳ್ಳಷ್ಟೂ ಎಡೆಬಿಡದೆ, ವ್ಯತ್ಯಾಸವಿಲ್ಲದೆ ಮಾಡಲೇಬೇಕು, ಮಾರ್ಪಾಡು ಮಾಡಲು ಸಾಧ್ಯವೇ ಇಲ್ಲ. ಅವನ ಸಂಕಲ್ಪದಂತೆ ನಡೆಯಲೇಬೇಕು ಮತ್ತು ನಡೆಸಲೇಬೇಕು, ಇದಕ್ಕೆ ಪ್ರತಿರೋಧವೇ ಇಲ್ಲ.

ಅದರಿಂದ ಪರಮಾತ್ಮನೇ ನಿಯಾಮಕನು.

ಪರಮಾತ್ಮನಿಗಿಂತ ಉತ್ತಮ ನಿಯೋಜಕರು ಸಾಧ್ಯವೇ ಇಲ್ಲ, ಇಲ್ಲವೂ ಇಲ್ಲ. ಅವನಿಗೆ ಹಿಂದುಮುಂದಿನದು ಈಗಿನದು ಎಲ್ಲ ತಿಳಿದೇ ಇರುತ್ತದೆ. ಅವನಿಗೆ ತಿಳಿಯದುದು ಇಲ್ಲವೇ ಇಲ್ಲ. ಅವನಿಂದ ಬಚ್ಚಿಡಲು ಸಾಧ್ಯವೇ ಇಲ್ಲ. ಅವನೇ ಸರ್ವವೇದ್ಯನು, ಸರ್ವೋತ್ತಮ ನಿಯಾಮಕನು.

*ತ್ವಂ ಗತಿಸ್ತ್ವಂ ಮತಿಸ್ತ್ವಂ ಧೀಃ ಪಿತಾ ಮಾತಾ ಗುರುಃ ಸಖಾ ।*
*ಸುಹೃದಶ್ಚಾತ್ಮರೂಪಸ್ತ್ವಂ ತ್ವಾಂ ವಿನಾ ನಾಸ್ತಿ ಮೇ ಗತಿಃ ॥101॥*
*(605-614)*

**605. ಗತಯೇ ನಮಃ**

ಗತಿಃ - ಎಂದರೆ ಮಾರ್ಗ, ಆಧಾರ, ಆಶ್ರಯ, ಜ್ಞಾನ, ಸಾಧನೆ, ಅವಕಾಶ.

ಪ್ರತಿಯೊಂದು ಜೀವಿಗೂ ಈ ಭವಸಾಗರದಿಂದ ಉತ್ತೀರ್ಣವಾಗಬೇಕಾದರೆ ಗತಿಯು ಪರಮಾತ್ಮನೇ. ಅವನೇ ಮಾರ್ಗ ಮತ್ತು ಮಾರ್ಗದರ್ಶಕ, ಅವನೇ ಆಶ್ರಯದಾತನು. ಅವೇ ಅವನ ರೂಪಗಳೇ ಜ್ಞಾನವನ್ನು ಮುಕ್ತಿಯನ್ನು ಪಡೆಯಲು ಸಾಧನಗಳು ಮತ್ತು ಅವಕಾಶಗಳು. ಈ ವಿಚಾರದಲ್ಲಿ ಬೇರೆ ಯಾವ ಜೀವಿಗೂ ಸಹಾಯ ಮಾಡಲು ಸಾಧ್ಯವೇ ಇಲ್ಲ. ಸಾಧ್ಯವಾದರೂ ಅವುಗಳ ಪ್ರಭಾವ ಒಂದು ಪರಿಮಿತಿಯಲ್ಲಿಯೇ ಇರುತ್ತದೆ.

ಪರಮಾತ್ಮನಷ್ಟು ಪಕ್ವವಾದ, ಸಂದೇಹರಹಿತವಾದ ಸಹಾಯಕ ಯಾರೂ ಇಲ್ಲ. ಇದನ್ನು ಅರಿತರೇ ದೊಡ್ಡ ಜ್ಞಾನವನ್ನು ಪಡೆದಂತೆಯೇ.

ಪರಮಾತ್ಮನ ರೂಪಗಳಾಗಿರುವ ಪ್ರತಿಯೊಂದು ದೇವ / ದೇವಿಯರ ವರಗಳೂ ಸಹ ಕ್ಲುಪ್ತವೇ. ಆದರೆ ಪರಮೋತ್ತಮವಾದ ಪರದೈವ - ಪರಬ್ರಹ್ಮ ಮತ್ತು ಓಂಕಾರದಲ್ಲಿ ಸಕಲ ಶಕ್ತಿಯೂ ಅಡಗಿದೆ. ಇದೇ ಸಕಲ ಇಷ್ಟಗಳನ್ನು ಅತ್ಯುತ್ತಮವಾದ ಸಾಮಿಪ್ಯ, ಸಾಯುಜ್ಯ, ಸಾಲೋಕ್ಯ, ಸಾರೂಪ್ಯ ಭಾವಗಳನ್ನು ಮತ್ತು ಪುರಾವೃತ್ತಿರಹಿತ ಸ್ಥಾನಗಳನ್ನು ಕೊಡಲು ಏಕೈಕ ಸಾಧನಕಾರ - "ಓಂ" ಶಕ್ತಿ - ಆದರಿಂದ ಗತಯೇ ನಮಃ ಎಂದರೆ ಈ ಶಕ್ತಿಗೇ ಅನ್ವಯಿಸುತ್ತದೆ.

**606. ಮತಯೇ ನಮಃ**

ಮತಿಃ - ಎಂದರೆ ಬುದ್ಧಿಶಕ್ತಿ, ಅಭಿಪ್ರಾಯ, ಇಚ್ಛಾಶಕ್ತಿ, ಕಲ್ಪನೆ.

ಪರಮಾತ್ಮನೇ ಬುದ್ಧಿಶಕ್ತಿ, ಇಚ್ಛಾಶಕ್ತಿಯಾಗಿ ಸಕಲ ಆತ್ಮಗಳೊಡನೆಯೂ ಇರುತ್ತಾನೆ. ಈ ಶಕ್ತಿ ಇಲ್ಲದಿದ್ದರೆ ಆತ್ಮನಿಗೆ ಒಂದು ದೊಡ್ಡ ಆಧಾರಸ್ಥಂಬವೇ ಇಲ್ಲದಂತಾಗುತ್ತದೆ.

ಮತಿಯಿಲ್ಲದೆ ಆತ್ಮನ ಕಾರಣ ಶರೀರವು ಪರಿಪೂರ್ಣವಲ್ಲ. ಅಂದರೆ ಕಾರಣ ಶರೀರಕ್ಕೆ ಇದು ಅತಿ ಅವಶ್ಯಕ. ಇಂದ್ರಿಯಗಳನ್ನು ಮತ್ತು ಮನಸ್ಸನ್ನು ಹತೋಟಿಯಲ್ಲಿ ಇಡಲು ಮತಿಯು ಅತ್ಯಾವಶ್ಯಕ. ಪರಮಾತ್ಮನೇ ಈ ಮತಿಯಲ್ಲಿ ನಿಂತು ಕೆಲಸ ಮಾಡಿಸುತ್ತಾನೆ. ಆದರಿಂದ ಅವನು ಮತಿಃ ಎಂದು ನಮಸ್ಕರಿಸಲ್ಪಡುತ್ತಾನೆ.

**607. ಧಿಯೇ ನಮಃ**

ಧೀ ಶಕ್ತಿಯು ಸಕಲ ಆತ್ಮಗಳಿಗೆ ಅಂಟಿರುವ ಕಾರಣ ಶರೀರದ ಒಂದು ಅಂಗ, ಸಾಮಾನ್ಯವಲ್ಲ, ಬಹಳ ಪ್ರಭಾವಪೂರಿತ ಅಂಗ.

ಧೀ - ಎಂದರೆ ಬುದ್ಧಿ, ಮನಸ್ಸು, ಪ್ರಾರ್ಥನೆ, ಜ್ಞಾನ. ಧೀಶಕ್ತಿಯು ಬುದ್ಧಿ, ಮನಸ್ಸು, ಜ್ಞಾನಗಳನ್ನು ನಿರ್ದೇಶಿಸುತ್ತದೆ. ಎಂದರೆ ಕಾರಣ ಶರೀರದ ಮುಖ್ಯವಾದ ಶಕ್ತಿ. ಸೂಕ್ಷ್ಮ ದೇಹದಲ್ಲಿರುವುವುಗಳೇ ಮತ್ತೆ ಸ್ಥೂಲಕಾಯದಲ್ಲಿ ವೇದ್ಯವಾಗುತ್ತದೆ. ಸ್ಥೂಲಕಾಯವು ಹೊರಗೆ ಕಾಣುವ ಶರೀರ, ಸೂಕ್ಷ್ಮ ಶರೀರವು ಇದೇ ರೂಪ ಆಕಾರ, ಅವಯವಗಳನ್ನು ಹೊಂದಿರುವ ಅತಿ ಚಿಕ್ಕ ಪ್ರಮಾಣದ್ದು.

ಈ ಧೀಶಕ್ತಿಯು ಕಾರಣದೇಹದಲ್ಲಿ ಸದಾ ಇದ್ದೇ ಇರುತ್ತದೆ. ಆತ್ಮನು ಪರಮಾತ್ಮನಿಂದ ಹೊರಬಂದಾಗಿನಿಂದ ಮತ್ತೆ ಅವನಲ್ಲಿ ಸೇರುವವರೆಗೆ ಇದು ವ್ಯವಸ್ಥಿತವಾಗಿ ಇದ್ದೇ ಇರುತ್ತದೆ. ಪ್ರಕೃತಿ, ಪುರುಷ, ಮಾಯೆ, ಸಂಸಾರ ಸಾಗರದ ಸಂಪರ್ಕದಿಂದ ಮುಚ್ಚಲ್ಪಡುತ್ತದೆ. ಇದು ಸಾತ್ವಿಕವಾಗಿ

ಪ್ರವರ್ಧಮಾನವಾಗಿ ಪರಮಾತ್ಮನ ಕಡೆ ತಿರುಗಿದಾಗ ಆತ್ಮದ ಬಿಡುಗಡೆಗೆ ಸಹಾಯವಾಗುತ್ತದೆ. ಆದ್ದರಿಂದ ಧೀಶಕ್ತಿಯು ಬಹಳ ಮುಖ್ಯವಾದುದು, ಅದೇ ಪರಮಾತ್ಮನು. ಅವನಿಗೆ ಧಿಯೇ ನಮಃ ಎನ್ನುತ್ತೇವೆ.

**608. ಪಿತ್ರೇ ನಮಃ**

ಪಿತಾ - ಎಂದರೆ ತಂದೆ.

ಸಕಲ ಜೀವಿಗಳೂ ಅವನಿಂದಲೇ ಹೊರ ಬಂದದ್ದರಿಂದ ಅವನೇ ಅವುಗಳಿಗೆ ತಂದೆಯು.

ಜೀವಿಯು ದೇಹದಿಂದ ದೇಹಕ್ಕೆ ಬಂದಲಾಯಿಸುವಾಗ ಅವಲಂಬಿಸುವ ತಂದೆ ತಾಯಿಗಳು (ಯಾವ ಯೋನಿಯಲ್ಲಿಯೇ ಆದರೂ) ಕೇವಲ ನೆಪಮಾತ್ರ. ಇವರು ದೇಹ ಧಾರಣೆಗೆ ತಂದೆ ತಾಯಿಗಳು, ಆಯಾ ಮತ್ತು ಕೆಲಸಮಯದಲ್ಲಿ ಮಾತ್ರ ಪ್ರೀತಿ ವಾತ್ಸಲ್ಯವನ್ನು ಕೊಡುತ್ತಾರೆ. ಇದು ಏಕ ರೀತಿಯಾಗಿ ನಿರಂತರ ಇರುವುದಿಲ್ಲ. ಆದರೆ ಪರಮಾತ್ಮನು ನಿರಂತರ ಆತ್ಮವನ್ನು ನಡೆಸುವ ಪಿತಾ, ಮಾತಾ. ಇವನ ಸಮಾನರು ಯಾರೂ ಇಲ್ಲ. ಮತ್ತು ಇವನಷ್ಟು ನಿಷ್ಕಾಮತೆಯಿಂದ ಜೀವಿಗಳನ್ನು ನೋಡುವವರು ಯಾರೂ ಇಲ್ಲ. ಪರಮಾತ್ಮನ ಸಮಾನರು ಯಾರೂ ಇಲ್ಲ.

ಜೀವಿಗಳಿಗೆ ಆತ್ಮಗಳಿಗೆ ಲಿಂಗಬೇಧವಿಲ್ಲ. ಅದು ಕೇವಲ ದೇಹ ಧರಿಸಿರುವವರೆಗೆ ಮಾತ್ರ. ಆತ್ಮನು ನಿರ್ಲಿಂಗಸ್ವರೂಪಿ. ಪ್ರಕೃತಿ, ಪುರುಷರಂತೆ ಪ್ರಜಾಭಿವೃದ್ಧಿಗಾಗಿ ಲಿಂಗಧಾರಣೆಯಾಗುತ್ತದೆ. ಪರಮಾತ್ಮನನ್ನು ಬಿಡುವಾಗ ಸೇರುವಾಗ ನಿರ್ಲಿಂಗವಾಗಿಯೇ ಇರುತ್ತದೆ.

ಪಿತೃ - ತಂದೆ, ತಾಯಿಗಳು, ತಂದೆ, ಹಿರಿಯರು, ಪೂಜ್ಯರು, ಮೃತ ಹಿರಿಯರು, ಇತ್ಯಾದಿ. ಪಿತೃದೇವತೆಗಳನ್ನು ನಿರ್ದೇಶಿಸುತ್ತದೆ. ಪಿತೃದೇವತೆಯಾಗಿ ವಂಶಜರ ಶ್ರೇಯೋಭಿವೃದ್ಧಿಗೆ ಪರಮಾತ್ಮನು ಸಹಾಯಕನಾಗುತ್ತಾನೆ.

ಪಿತಾ, ತಂದೆಯ ರೂಪದಲ್ಲಿ ಮಕ್ಕಳ ಶ್ರೇಯೋಭಿವೃದ್ಧಿಗೆ ಕಾರಣನಾಗಿ ಸದಾ ಹಿತಚಿಂತಕನಾಗಿರುತ್ತಾನೆ.

ಸಕಲ ಜೀವಿಗಳು, ಸಕಲ ಬ್ರಹ್ಮಾಂಡಗಳು, ಜಗತ್ತು ಪರಮಾತ್ಮನಿಂದ ಕಲ್ಪಿತವಾದ್ದು. ಅವನೇ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೂ, ಅವುಗಳಲ್ಲಿರುವ, ಇದ್ದ, ಇರುವ, ಮುಂದೆ ಇರುವ ಸಕಲಕ್ಕೂ ಅವನೇ ಪಿತೃ ಸ್ವರೂಪಿ, ಪಿತಾ, ಪಿತೃ - ಆದರಿಂದ ಅವನಿಗೇ ಪಿತ್ರೇ ನಮಃ ಎನ್ನುತ್ತೇವೆ.

**609. ಮಾತ್ರೇ ನಮಃ**

ಮಾತಾ - ತಾಯಿ ಸ್ವರೂಪನು, ಪಿತನು ಹೇಗೋ ತಾಯಿಯೂ ಹಾಗೆಯೇ. ಪರಮಾತ್ಮನೇ ತಂದೆ, ತಾಯಿ ಎಲ್ಲವೂ ಅವನೇ.

ಸಕಲ ಜೀವಿಗಳಿಗೂ ಚರಾಚರ ಜಗತ್ತಿಗೂ ಅವನೇ ತಾಯಿ.

ಮಮಯೋನಿರ್ಮಹದ್ಬ್ರಹ ತಸ್ಮಿನ್ ಗರ್ಭಂ (ಯೋನಿ) ದದಾಮ್ಯಹಂ। ಪರಮಾತ್ಮನ ಯೋನಿಯೇ ಮಹದ್ಬ್ರಹ್ಮ. ಅದರಲ್ಲಿಯೇ ಸಕಲ ಜೀವಿಗಳೂ ದೇಹಗಳನ್ನು ಹೊಂದುತ್ತವೆ. ಅವನ ಸಂಕಲ್ಪ ಮತ್ತು ಕಾಮ (ಇಚ್ಛೆ)ಗಳೇ ಯೋನಿರೂಪ.

ಸಕಲ ಬ್ರಹ್ಮಾಂಡಗಳನ್ನು ತನ್ನ ಉದರದಲ್ಲಿ ಅಡಗಿಸಿಕೊಳ್ಳುವುದರಿಂದಲೂ ಮತ್ತೆ ಹೊರಹಾಕುವುದರಿಂದಲೂ ಅವನೇ ಮಾತಾ, ಮಹಾಮಾತಾ, ಶ್ರೀಮಾತಾ, ಶ್ರೀಶಕ್ತಿ, ಸಕಲವೂ ಅವನೇ.

ದೇಹಧಾರಣೆಯಲ್ಲಿ ಆಗುವ ಮಾತೆಯು ಕೇವಲ ಕಾರಣರೂಪಳು. ಅವಳೂ ಸಹ ಪೂಜ್ಯಳೇ, ಪರಮಾತ್ಮನಷ್ಟೇ ಪೂಜ್ಯಳು. ಆತ್ಮಕ್ಕೆ ದೇಹವನ್ನು ಒದಗಿಸಿಕೊಟ್ಟ ಲೌಕಿಕ ತಂದೆ ತಾಯಿಗಳು ಪರಮಾತ್ಮನ ರೂಪವೇ!

ಜನ್ಮ ತಾಳಿದ ಶಿಶುವು ಬಾಲ್ಯ, ಕೌಮಾರ್ಯ, ಯೌವನ, ವಾರ್ಧಿಕ್ಯದ ಹಾದಿಯಲ್ಲಿ ಪ್ರಯಾಣಮಾಡುವಾಗ ಎಲ್ಲಿಯವರೆಗೆ ಪರಮಾತ್ಮನೇ ಮೂಲ ತಂದೆ, ತಾಯಿ ಮತ್ತು ಸಕಲ ರೀತಿಯಲ್ಲಿ ಭವಸಾಗರದಿಂದ ದಾಟಿಸುವವನು ಎಂಬ ಜ್ಞಾನ ಬರುವುದಿಲ್ಲವೂ ಅಲ್ಲಿಯವರೆಗೆ ಪ್ರಾಪಂಚಿಕ ತಂದೆ ತಾಯಿಗಳು ಜನ್ಮ ಕೊಟ್ಟ ಮಹತ್ವ ತಿಳಿಯುವುದಿಲ್ಲ. ಆದರೆ ಜ್ಞಾನ ಬಂದಾಗ ಅವರು ಶಿಶುವನ್ನು ಪಡೆದ ಆರ್ತತೆ, ಈ ಶಿಶುವಿಗೆ ಕಾರಣ ತಂದೆ, ತಾಯಿಗಳ ಹುಡುಕುವಿಕೆಯ ಪ್ರಾಮುಖ್ಯತೆ ಅರಿವಾಗುತ್ತದೆ.

ಆದರೆ ಅವನಷ್ಟು ನಿಷ್ಕಾಮತೆಯನ್ನು ಇವರಲ್ಲಿ ನಿರೀಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ ಅವರ ಜೀವನದಲ್ಲಿ ತಂದೆ ತಾಯಿಗಳು ಮಕ್ಕಳಿಂದ ಬಹಳವನ್ನು ನಿರೀಕ್ಷಿಸುತ್ತಾರೆ. ಅದರಿಂದ ಪರಮಾತ್ಮನಷ್ಟು ನಿಸ್ಪೃಹರಾಗಿರಲು ಸಾಧ್ಯವಿಲ್ಲ. ಇದು ಸೃಷ್ಟಿಯ ವೈಖರಿ.

ನಮ್ಮಿಂದ ಪರಮಾತ್ಮನು ಕೇಳುವುದು ಭಕ್ತಿ, ಶ್ರದ್ಧೆಗಳನ್ನು. ಯಾವ ಸಂಪತ್ತನ್ನೂ ಕೇಳುವುದಿಲ್ಲ. ಇದರಿಂದ ಅವನು ಉತ್ತಮೋತ್ತಮ ಮಾತಾ, ಪಿತಾ, ಎಲ್ಲವೂ ಅವನೇ.

**610. ಗುರುವೇ ನಮಃ**

ಜಗತ್ತಿನಲ್ಲಿ ಪ್ರತಿಯೊಂದು ಜೀವಿಗೂ, ಸಚರಾಚರ ವಸ್ತುವಿಗೂ, ದೇವ ದೇವಿಯರಿಗೂ, ಸೃಷ್ಟಿ, ಸ್ಥಿತಿ, ಲಯದ ಸಕಲ ಕಾರ್ಯಕಾರಣಗಳಿಗೂ ಗುರುವಿನ ಅವಶ್ಯಕತೆ ಬೇಕೇ ಬೇಕು, ಇದ್ದೇ ಇರುತ್ತದೆ ಮತ್ತು ಗುರುವಿನ ಕರುಣೆ ಪ್ರತ್ಯಕ್ಷವಾಗಿಯಾಗಲೀ, ಪರೋಕ್ಷವಾಗಿಯಾಗಲೀ ಭಗವಂತನ ಕರುಣೆಯಿಂದ

ದೊರಕಿಯೇ ದೊರಕುತ್ತದೆ. ಇದು ಶತಃಸಿದ್ಧ ಮತ್ತು ನಗ್ನಸತ್ಯ. ಇದರಲ್ಲಿ ಲವಲೇಶವೂ ಸಂದೇಹವೇ ಇಲ್ಲ ಮತ್ತು ಇರಕೂಡದು.

ಗುರು ಎಂದರೆ ಮಾರ್ಗದರ್ಶನ ಕೊಡುವವನು. ಅಹಂಕಾರ, ಅಜ್ಞಾನವೆಂಬ ಅಂಧಕಾರ, ಮಮಕಾರ, ಮೊದಲಾಗಿ ತಮಸ್ಸಿನ ಮತ್ತು ರಜೋಗುಣದ ದುಷ್ಪರಿಣಾಮಗಳನ್ನು ತನ್ನ ಕೃಪೆ, ಕರುಣೆ, ದಯೆಯಿಂದ ತೊಲಗಿಸುವವನು.

ಗುರುವು ಪರಮಾತ್ಮನ ಕಡೆಗೆ ಮನಸ್ಸು, ಬುದ್ಧಿ, ಇಂದ್ರಿಯಗಳು ಹರಿಯುವಂತೆ ದಾರಿ ತೋರಿಸಿ ಉದ್ಧರಿಸುವವನು. ಆತ್ಮನು ನಿತ್ಯ ಶುದ್ಧನೇ ಆದರೂ ಅದಕ್ಕೆ ಅಂಟಿಕೊಂಡಿರುವ ಸಂಸ್ಕಾರ, ಪೂರ್ವಾರ್ಜಿತ ಮತ್ತು ಪ್ರಾರಬ್ಧ ಮತ್ತು ಸಂಚಿತ ಕರ್ಮಗಳನ್ನು ತೊಡೆದು ಹಾಕಲು ಒಬ್ಬ ''ಗುರು''ವು ಬೇಕೇ ಬೇಕು. ಪರಮಾತ್ಮನಿಂದ ಬಂದಾಗ ಶುದ್ಧವಾಗಿದ್ದ ಆತ್ಮವು ಕಾಲಾನುಕಾಲಕ್ಕೆ ಮಾಯೆಯಲ್ಲಿ ಸಿಲುಕಿದ ಕಾರಣ ಶುದ್ಧತೆಯನ್ನು ಮಾಯೆ ಮತ್ತು ಸಂಸ್ಕಾರಗಳು ಮುಚ್ಚಿಹಾಕುತ್ತವೆ. ಸಂಸಾರ ಸಾಗರದಲ್ಲಿ ದಾರಿ ತೋರದೆ ತೇಲುತ್ತ ಮುಳುಗುತ್ತ ಇರುತ್ತದೆ. ಮತ್ತೆ ಪರಮಾತ್ಮನಲ್ಲಿ ಆತ್ಮವು ಲೀನವಾಗಬೇಕಾದಾಗ ಅಂಟಿಕೊಂಡಿದ್ದ ಸಂಸ್ಕಾರಗಳನ್ನು ಗುರುವಿನ ಸಹಾಯದಿಂದ ಮತ್ತು ತನ್ನ ಸಾಧನೆಗಳಿಂದ ಹೋಗಲಾಡಿಸಿಕೊಳ್ಳುತ್ತದೆ. ಎಂದ ಮೇಲೆ ಗುರುವಿನ ಪ್ರಭಾವ ಎಷ್ಟೆಂದು ಊಹಿಸಲು ಅಸಾಧ್ಯ. ಅಂತಹ ಗುರುವಿಗೆ ಎಷ್ಟು ನಮಸ್ಕರಿಸಿದರೂ ಗುರು ಋಣವನ್ನು ತೀರಿಸಲು ಸಾಧ್ಯವೇ ಇಲ್ಲ. ಹೇಗೆ ಭಗವಂತನಿಗೆ ಅವನು ಕೊಟ್ಟಿರುವ ಅವಕಾಶಗಳಿಗೆ ಕೃತಜ್ಞತೆಯನ್ನು ಅರ್ಪಿಸಿ ಹಿಂದಿರುಗಿಸಲು ಸಾಧ್ಯವಿಲ್ಲವೋ ಅದೇ ರೀತಿ ಗುರುವಿಗೆ ಋಣವನ್ನು ಪರಿಹರಿಸಿಕೊಳ್ಳಲು ಸಾಧ್ಯವಿಲ್ಲ. ಇದು ಪರಮಾತ್ಮನು ಸೃಷ್ಟಿಯಲ್ಲಿ ಕಲ್ಪಿಸಿರುವ ಮಹತ್ತಾದ ಸಹಾಯ, ಆಶ್ರಯ, ಕೃಪೆ.

ಗುರುವಿನ ಹಿರಿಮೆಯನ್ನು ಈಶ್ವರನು ಪಾರ್ವತಿಗೆ ಹೇಳುತ್ತಾ, ಗುರುಗೀತೆಯಲ್ಲಿ ಹೀಗೆ ಹೇಳುತ್ತಾನೆ.

*''ನ ಗುರೋರಧಿಕಂ ನ ಗುರೋರಧಿಕಂ*
*ನ ಗುರೋರಧಿಕಂ ನ ಗುರೋರಧಿಕಂ ।*
*ಶಿವಶಾಸನತಃ ಶಿವಶಾಸನತಃ*
*ಶಿವಶಾಸನತಃ ಶಿವಶಾಸನತಃ ॥96॥*
*ಇದಮೇವ ಶಿವಂ ಇದಮೇವ ಶಿವಂ*
*ಇದಮೇವ ಶಿವಂ ಇದಮೇವ ಶಿವಂ ।*
*ಮಮ ಶಾಸನತಃ ಮಮ ಶಾಸನತಃ*
*ಮಮ ಶಾಸನತಃ ಮಮ ಶಾಸನತಃ ॥97॥*

*ಏವಂ ವಿಧಂ ಗುರುಂ ಧ್ಯಾತ್ವಾ ಜ್ಞಾನಮುತ್ಪದ್ಯತೇ ಸ್ವಯಮ್ ।*
*ತತ್ಸದ್ಗುರುಪ್ರಸಾದೇನ ಮುಕ್ತೋಽಹಮಿತಿ ಭಾವಯೇತ್ ॥98॥*
*ಗುರುದರ್ಶಿತಮಾರ್ಗೇಣ ಮನಃ ಶುದ್ಧಿಂ ತು ಕಾರಯೇತ್ ।*
*ಅನಿತ್ಯಂ ಖಂಡಯೇತ್ಸರ್ವಂ ಯತ್ಕಿಂಚಿದಾತ್ಮ ಗೋಚರಮ್ ॥99॥"*

ಗುರುವಿನ ರೂಪ, ರೇಖೆ, ಕಾರ್ಯ, ಕೃಪೆ, ಪ್ರಭಾವ, ಮಹಿಮೆಯನ್ನು ಅದರಲ್ಲಿ ಆಸಕ್ತಿ ಗೌರವವಿಲ್ಲದವನಿಗೆ "ಮನಸಾಪಿ ನ ವಕ್ತವ್ಯಂ" ಎಂದು ಶಿವನು ಆಜ್ಞಾಪಿಸಿದ್ದಾನೆ. ಪರಮಾತ್ಮನೇ ಪರಮೋಚ್ಚ, ಪರಮೋತ್ತಮ ಸದ್ಗುರು. ಇವನಿಗಿಂತ ಬೇರೆಯವರು ಇಲ್ಲ.

ಎಲ್ಲಾ ಗುರುಗಳೂ ಇವನ ಅಂಶಮಾತ್ರದಿಂದ, ಪರಂಪರೆಯಿಂದ ಬಂದವರೇ. ಗುರುವಿನ ಗುರು, ಅವರ ಗುರು, ಅವರ ಗುರು .. ಇದೇ ರೀತಿ ಪರಂಪರೆಯು ಪರಬ್ರಹ್ಮನಲ್ಲಿ ಹೋಗಿ ನಿಲ್ಲುತ್ತದೆ. ಏನೇ ಉಪದೇಶಗಳನ್ನು ಯಾವ ಗುರುವಿನಿಂದ ಪಡೆದರೂ ಅದು ಪರಬ್ರಹ್ಮನಿಂದಲೇ ಬಂದದ್ದು. ಪರಮಾತ್ಮನ ಕೃಪೆಯಿಂದಲೇ ನಮಗೆ ಬಂದದ್ದು ಎಂದು ತಿಳಿದು ಸಾಧನೆ ಮಾಡಬೇಕು. ಇಂತಹ ಸಾಧಕನಿಗೆ ಪರಮಾತ್ಮನೇ ಕ್ಷಿಪ್ರದಲ್ಲಿಯೇ ಒಲಿಯುತ್ತಾನೆ. ಇದು ಸಿದ್ಧಃ ಹೀಗೆ ಪರಮಾತ್ಮನೇ ಗುರುವಾಗಿ ನಿಂತಿರುವಾಗ ಜೀವಿಗಳಿಗೆ ಭಯವೇಕೆ? ಉದ್ಧಾರ, ಸಂಸಾರಸಾಗರದಿಂದ ಉತ್ತೀರ್ಣವು ಶತಃಸಿದ್ಧ. ಆದರೆ ಗುರುವಿನ ಕಡೆ ಮನಸ್ಸು, ಬುದ್ಧಿ, ಇಂದ್ರಿಯಗಳು ತಿರುಗಬೇಕು, ಅಷ್ಟೇ!

ಗುರುವೇ ನಮಃ ಗುರುವೇ ನಮಃ ಎಂದು ಎಷ್ಟು ಬಾರಿ ಹೇಳಿದರೂ ಅದು ಅಲ್ಪ ರೀತಿಯ ಕೃತಜ್ಞತೆ! ಅದು ಕೊನೆಯಾಗಬಾರದು! ಅಷ್ಟೆ. ಗುರುವೇ ನಮಃ.

**611. ಸಖ್ಯೇ ನಮಃ**

ಪರಮಾತ್ಮನು ಸಖನು, ಸ್ನೇಹಿತನು. ಪರಮಹಿತ ಸಖನು. ನಮ್ಮ ಮೇಲ್ಮೆಗಾಗಿ ನಿಂತಿರುವವನು.

ಸ್ನೇಹಿತನು ಯಾರಾದರೂ ಆಗಬಹುದು ಆದರೆ ಸಖ್ಯವು ನಿಷ್ಕಪಟವಾಗಿರಬೇಕು, ಶುದ್ಧ ಸಖ್ಯವಾಗಿರಬೇಕು. ರಾಮ ಸುಗ್ರೀವರ ಸಖ್ಯ ಬಹಳ ಪ್ರಸಿದ್ಧವಾದ್ದು.

ಪರಮಾತ್ಮನು ಸರ್ವರ ಹಿತೈಷಿ, ಅವನಿಗೆ ಬೇರೆಯ ಇಚ್ಛೆಯೇ ಇಲ್ಲ. ಜೀವಿಗಳನ್ನುದ್ಧರಿಸುವುದೇ ಮುಖ್ಯ. ಇದಕ್ಕೆ ಸಖತನ, ಸ್ನೇಹವನ್ನು ಅವನು ಆರಿಸುತ್ತಾನೆ.

ಭಕ್ತಿಯ ಒಂದು ವಿಧ - ಸಖ್ಯ - ಪರಮಾತ್ಮನನ್ನು ನಮ್ಮ ಸಖ - ಸ್ನೇಹಿತ ಎಂದು ತಿಳಿದು ಅವನಿಗೆ ನಮ್ಮ ಮನಸ್ಸನ್ನು ಬಿಚ್ಚಿ ಹೇಳುವುದು

ಒಂದು ರೀತಿ. ಭಕ್ತನ ಇನ್ನೊಂದು ರೀತಿಯೆಂದರೆ ಅವನೇ ಪರಮಾತ್ಮನಿಗೆ ಬೇಕಾದ ಹಿತ ಸ್ನೇಹಿತ ಆದ್ದರಿಂದ ಪರಮಾತ್ಮನು ಭಕ್ತನಿಗೆ ತನ್ನ ಅಭಿಲಾಷೆಗಳನ್ನು ಹೇಳುತ್ತಾನೆ ಎಂದು ಭಾವಿಸಿ ಅವನಿಗೆ ನಾವೇ ಆಶ್ರಯ ಕೊಡುವುದು ಅವನನ್ನು ಸ್ಪಂದಿಸಿ, ಸಾಂತ್ವನ ನೀಡುವುದು - ಇದು ಎಂತಹ ಉದಾತ್ತ, ಉತ್ತಮ, ಹಿರಿಮೆಯ ರೀತಿ! ಭಕ್ತರಿಗೆ ತಿಳಿಯದ ಭಾವವಿಲ್ಲ. ಪರಮಾತ್ಮನನ್ನು ನಮ್ಮಂತೆಯೇ ತಿಳಿದು ಅವನ ಕಷ್ಟ ಸುಖಗಳನ್ನು ಅಂದರೆ - ಈ ಬ್ರಹ್ಮಾಂಡ ಕೋಟಿಗೆ ನಾಯಕನಾಗಿ ಅವನು ನಡೆಸಲು ಪಡಬೇಕಾದ ಕಷ್ಟ ಕೋಟಲೆಗಳು, ಅದಕ್ಕೆ ಬೇಕಾಗುವ ಚತುರತೆ, ಸದಾ ಸುಸ್ಥಿತಿಯಲ್ಲಿರುವುದು, ಜೀವಕೋಟಿಯ ಆಗು ಹೋಗುಗಳನ್ನು ತನ್ನ ಸಂಕಲ್ಪದಂತೆ ನಡೆಸುವುದು, ಇವೆಲ್ಲ ಕಷ್ಟವೇ! ಇದೇ ರೀತಿ ಯೋಚಿಸಿ ಅವನನ್ನು ಸಮಾಧಾನಪಡಿಸುವುದು - ಇದು ಅತ್ಯಂತ ಅಂತರಂಗದ ಸಖತನ. ಇದು ಪರಮಾತ್ಮನಿಗೆ ಬಹು ಪ್ರಿಯವಾಗಿ ಹಿಡಿಸುತ್ತದೆ. ಅವನಿಗಾಗಿ ಒಬ್ಬರು ಸಹನೆ, ಸಹಕಾರ, ಸಾಂತ್ವನಕೊಡುವವರು ಸೃಷ್ಟಿಯಲ್ಲಿ ಇದ್ದಾರಲ್ಲ ಎಂದು ಅವನಿಗೆ ಸಂತೋಷ, ಸಮಾಧಾನವಾಗುತ್ತದೆ. ಇದು ಭಕ್ತನ ಸಖ್ಯ.

ಪ್ರಕೃತಿಗೆ ಪುರುಷನು ಸಖ, ಪರಮಾತ್ಮನಿಗೆ ಭಕ್ತನು ಸಖ, ಜೀವ ಕೋಟಿಗೆ ಪರಮಾತ್ಮನು ಸಖ, ಹೀಗೆ ... ಇತ್ಯಾದಿ. ಸಖ್ಯವಿಲ್ಲದೆ ಸಂಸಾರವಿಲ್ಲ.

**612. ಸುಹೃದ್ಭ್ಯೋ ನಮಃ**

ಹೃದಯ - ಎಂದರೆ ಕಾರುಣ್ಯವನ್ನು ಹೊರಡಿಸುವ ಸ್ಥಳ, ಹೃದಯವಿರುವವನು. ಸು - ಎಂದರೆ ಸಾತ್ವಿಕ ಗುಣದಿಂದ ಕೂಡಿದ್ದು.

ಸಕಲ ಜೀವಿಗಳಿಗೂ ಹೃದಯವಿರುತ್ತದೆ. ಆದರೆ ಅದು ಇತರ ಜೀವಿಗಳೊಡನೆ ಯಾವ ರೀತಿ ಸ್ಪಂದಿಸುತ್ತದೆ ಎಂಬುದು ಮುಖ್ಯ. ಸಾತ್ವಿಕ ರೀತಿ ಸ್ಪಂದಿಸುವುದೇ ಪರಮ ಉಚ್ಚ ರೀತಿಯದು, ಆದರೆ ಅದು ಎಷ್ಟು ಕಾಲ, ಎಷ್ಟು ಸಲ ಈ ರೀತಿ ಸ್ಪಂದಿಸುತ್ತದೆ ಎಂಬುದು ಮುಖ್ಯ.

ಸರ್ವರಿಗೂ ಸುಹೃದಯವಿರುತ್ತದೆ. ಆದರೆ ಅವರು ಯಾವಾಗ, ಎಷ್ಟು ಸಲ, ಯಾವ ರೀತಿ, ಯಾರಿಗೆ ಉಪಯೋಗಿಸುತ್ತಾರೆ ಎಂಬುದು ಮುಖ್ಯ. ಯಾರಿಗೆ ಇವರ ಒಳ್ಳೆಯ ಹೃದಯ ಸ್ಪಂದಿಸಬೇಕೋ ಅವರಿಗೆ ಕೊಡಬೇಕು.

ಆದರೆ ಪರಮಾತ್ಮನೊಬ್ಬನೇ ಇದಕ್ಕೆಲ್ಲಾ ಉತ್ತಮ ಸ್ಪಂದಕನು. ಅವನಷ್ಟು ಬುದ್ಧಿವಂತರು, ಚತುರರು, ದೇಶ ಕಾಲ ಪರಿಜ್ಞಾತರು ಬೇರೊಬ್ಬರಿಲ್ಲ.

ಅದರಿಂದ ಅವನೊಬ್ಬನೇ ಸರ್ವ ಜೀವಿಗಳಿಗೂ ನಿರಂತರ ಸುಹೃದಯನು - ಸುಹೃದಾಯ ನಮಃ.

ಹೃದಯ - ಎಂದರೆ ಕಾರುಣ್ಯವನ್ನು ಹೊರ ಚಿಮ್ಮಿಸುವ ಸ್ಥಳ.

**613. ಆತ್ಮರೂಪಾಯ ನಮಃ**

ಆತ್ಮಗಳು ದೇಹವನ್ನು ಧರಿಸಿರುತ್ತವೆ. ದೇಹವೇ ನಾನೆಂದು ಲೋಕ ವ್ಯವಹಾರದಲ್ಲಿ ನಡೆಯುತ್ತವೆ. ಆದರೆ "ನಾನು" ಎಂಬುದರ ನಿಜರೂಪವೇ "ಅಹಂ", ಅಹಂಕಾರವು ಪರಮಾತ್ಮನಿಂದ ಬಂದದ್ದು. ಇದು ಆತ್ಮನೊಡನೆ ಬೆರೆತು ಹೋಗಿರುತ್ತದೆ.

ಆತ್ಮನೊಡನೆ ಮನಸ್ಸು, ಬುದ್ಧಿ, ಅಹಂಕಾರ, ಚಿತ್, ಗುಣಗಳು ಇಂದ್ರಿಯಗಳು, ಪ್ರಾಣಗಳು ಬೆರೆತು ಒಂದು ಸಮುದಾಯದ ರೀತಿ ಆತ್ಮನೊಡನೆಯೇ ಹೋಗುತ್ತಿರುತ್ತವೆ. ದೇಹದಿಂದ ಹೋಗುವಾಗ ಕಾರಣ ಶರೀರದ ರೂಪವಾಗಿ ಮುಂದುಮುಂದೆ ಆತ್ಮನೊಡನೆ ಕಾಲಯಾನದಲ್ಲಿ ಪ್ರಯಾಣಮಾಡುತ್ತವೆ. ಆದರೆ "ಆತ್ಮ" ಎಂಬುದು ನಿಗೂಢ ತೇಜಶ್ಶಕ್ತಿಯು ಪರಮಾತ್ಮನಿಂದ ಕಲ್ಪಾದಿಯಲ್ಲಿ ಹೊರಹೊಮ್ಮಿದೆ. ಇದು ಪರಮಾತ್ಮನ ಎಲ್ಲಾ ಸ್ವಭಾವಗಳನ್ನು ಹೊಂದಿರುತ್ತದೆ. ಅವನ ಅಂಶದಿಂದಲೇ ಅವನಿಂದಲೇ ಹೊರಬಂದ ಭಾಗ. ಮತ್ತೆ ಅವನಲ್ಲಿಯೇ ಲೀನವಾಗುತ್ತದೆ.

ಆತ್ಮರೂಪವು ಪರಮಾತ್ಮನದೇ ಆದುದು. ಆದರಿಂದ ಪರಮಾತ್ಮನು ಆತ್ಮದ ಮೂಲರೂಪ, ಅದಕ್ಕೆ ಅವನಿಗೆ ಆತ್ಮರೂಪಾಯ ನಮಃ ಎಂದು ಹೇಳುವುದು.

**614. ಅನನ್ಯಗತಯೇ ನಮಃ (ತ್ವಾಂ ವಿನಾ ನಾಸ್ತಿಮೇ ಗತಿಃ)**

ಗತಿಃ - ಎಂದರೆ ಒಳ್ಳೆಯ ದಾರಿ, ಮುಕ್ತಿ, ಆಶ್ರಯ, ಆಶ್ರಯದಾತನು.

ಅನ್ಯ - ಬೇರೆಯುವರು, ಅ - ಎಂದರೆ ಇಲ್ಲದವನು.

ಪರಮಾತ್ಮನನ್ನು ಬಿಟ್ಟರೆ ಬೇರೆ ಅವನ ಹಾಗೆ ದಾತರು ಇಲ್ಲ ಎಂದು ಅರ್ಥ.

ಇದು - ಈ ನಾಮವು ಅವನ ಹಿರಿಮೆಯನ್ನು ಮತ್ತು ಅವನ ಅವಶ್ಯಕತೆಯನ್ನು ಸೂಚಿಸುತ್ತದೆ.

ಜೀವಕೋಟಿಗೆ ಆಯಾ ಸಮಯ ದೇಶ ಕಾಲಗಳಲ್ಲಿ ಹಾಗೆ ಹಾಗೆಯೇ ಅವರವರ ಇಷ್ಟಾರ್ಥದಂತೆ ಕೋರಿಕೆಗಳನ್ನು ಈಡೇರಿಸುವವನು ಪರಮಾತ್ಮನೊಬ್ಬನೇ! ಅವರು ಬೇರೆ ಯಾರನ್ನು ಪ್ರಾರ್ಥಿಸುವುದಿಲ್ಲ. ಏಕೆಂದರೆ ಯಾರೂ ತೃಪ್ತಿಕರವಾಗಿ ಆಗಲಾರರು!!

ಈ ಕಾರಣಗಳಿಂದಲೇ ಸಾಕ್ಷಾತ್ ಬ್ರಹ್ಮದೇವರು ನರಸಿಂಹಸ್ವಾಮಿಯನ್ನು ಶಾಂತಗೊಳಿಸಲು ಹೇಳುತ್ತಿರುವ ಸಹಸ್ರನಾಮದಲ್ಲಿ ಈ ರೀತಿ "ನಿನ್ನ ಬಿಟ್ಟು ಬೇರೊಬ್ಬರು ಗತಿಯಿಲ್ಲ" ಎಂದಿದ್ದಾರೆ. ಅವರೇ ಹೀಗೆ ಹೇಳಿರಬೇಕಾದರೆ ಇದರಲ್ಲಿ ಸಂಶಯಪಡಬೇಕಾದ್ದೇನಿದೆ??

*ನಮೋ ಮಂತ್ರಾಸ್ತ್ರರೂಪಾಯ ತಂತ್ರಾರಾಧ್ಯಾಯ ತೇ ನಮಃ ।*
*ಬಹುರೂಪಾಯ ರೂಪ್ಯಾಯ ಪಂಚರೂಪಧರಾಯ ಚ ॥102॥*
*(615-619)*

**615.** ಮಂತ್ರಾಸ್ತ್ರರೂಪಾಯ ನಮಃ

ಮಂತ್ರ - ಎಂದರೆ ಪರಮಾತ್ಮನನ್ನು ಕುರಿತು ಅವನ ರೂಪ, ಗುಣಗಳು, ಕಾರ್ಯಗಳು ಮುಂತಾದವುಗಳನ್ನು ವಿವರಿಸಿ ಪ್ರಶಂಶಿಸುವ ಪದಸಮೂಹಗಳು - ಅಥವಾ ಸಕಲ ಇಷ್ಟಾರ್ಥಗಳನ್ನು ಕೈಗೂಡಿಸುವ ಆರ್ತರ, ಜಿಜ್ಞಾಸುಗಳ, ಅರ್ಥಿಗಳ ಜ್ಞಾನಿಗಳ ಪ್ರಾರ್ಥನೆಗಳಾಗಿರುವ ಪದಸಮೂಹಗಳು - ಯಾವನನ್ನು ಕುರಿತು ಈ ಮಂತ್ರಗಳನ್ನು ಹೇಳುತ್ತೇವೆಯೋ, ಅವನು ಕ್ರಮೇಣ ಮಂತ್ರದಲ್ಲಿಯೇ ಆಹ್ವಾನಿಸಲ್ಪಟ್ಟು ಅದರಲ್ಲಿಯೇ ಮಂತ್ರದೇವತೆಯಾಗಿ ಅಥವಾ ಮಂತ್ರದ ಅಧಿ ದೇವತೆಯಾಗಿ ನಿಂತುಬಿಡುತ್ತಾನೆ.

ಅಸ್ತ್ರ - ಎಂದರೆ ಆಯುಧಗಳು,

ಮಂತ್ರ - ಅಸ್ತ್ರ - ರೂಪನು, ಎಂದರೆ ಅವನು ಮಂತ್ರಗಳನ್ನು ಆಯುಧಗಳಾಗಿ ಉಪಯೋಗಿಸುವವನು - ಅಥವಾ ಮಂತ್ರಗಳೆಂಬ ಆಯುಧಗಳ ರೂಪವಾಗಿರುವವನು.

ಪರಮಾತ್ಮನನ್ನು ಕುರಿತು ಹೇಳುವ ಮಂತ್ರಗಳು ಆಯುಧಗಳ ರೂಪದಲ್ಲಿ ನಮಗೆ ಬಂದ ದುರಿತಗಳನ್ನು ಪರಿಹರಿಸುತ್ತವೆ ಅಥವಾ ಕತ್ತರಿಸುತ್ತವೆ. ಈ ಕಾರಣದಿಂದ ದುರಿತಗಳನ್ನು ನಾಶಮಾಡಲು ಪರಮಾತ್ಮನನ್ನು ಮಂತ್ರಗಳಿಂದ ಪ್ರಾರ್ಥಿಸುತ್ತೇವೆ. ಪರಮಾತ್ಮನು ಈ ಕಾರಣದಿಂದ ಮಂತ್ರಾಸ್ತ್ರರೂಪನು - ಮಂತ್ರಾಸ್ತ್ರರೂಪಾಯ ನಮಃ.

**616.** ತಂತ್ರಾರಾಧ್ಯಾಯ ನಮಃ

ತಂತ್ರ - ಎಂದರೆ ಶಾಸ್ತ್ರ, ತತ್ವ, ಮಂತ್ರಗಳ ಜೊತೆ ಮಾಡುವ ಕ್ರಿಯೆ, ಕೆಲಸಗಳು. ಕಾರ್ಯಮಾಡುವ ವಿಧಾನ.

ಭಗವಂತನನ್ನು ಮಂತ್ರ ಹೇಳುವುದರ ಜೊತೆಗೆ ಕೆಲವು ಕ್ರಿಯೆಗಳನ್ನು ನಿರ್ದಿಷ್ಟವಾಗಿ ನಡೆಸಿ ಆರಾಧಿಸಬೇಕು. ಪ್ರಾರ್ಥನೆ, ಪೂಜೆ, ಯಜ್ಞ ಯಾಗಾದಿಗಳಲ್ಲಿ ಮಂತ್ರದೊಡನೆ ತಂತ್ರಗಳನ್ನು ಮಾಡಿ ಆರಾಧಿಸುವುದು - ಈ ನಾಮದ ಅರ್ಥ. ಪರಮಾತ್ಮನನ್ನು ಹೇಗೇ ಪ್ರಾರ್ಥಿಸಿದರೂ, ಪೂಜಿಸಿದರೂ ಅವನು ಪ್ರೀತನಾಗುತ್ತಾನೆ, ಆದರೆ ವೇದ, ಶಾಸ್ತ್ರ, ಆಗಮಗಳಲ್ಲಿ ನಿರ್ದೇಶಿಸಿದಂತೆ ಪೂಜಿಸುವುದು ಒಂದು ವೈಶಿಷ್ಟ್ಯ. ಇದರಿಂದ ಬಹುಪ್ರೀತನಾಗುತ್ತಾನೆ ಎಂದು ಕೆಲವರ ಅಭಿಪ್ರಾಯ. ತಂತ್ರಗಳೇ ಇಲ್ಲದೆ, ಮಂತ್ರಗಳ ರೂಪವನ್ನು ಸಂಗ್ರಹಿಸಿ ಮಾಡುವ ನಾಮಜಪಗಳು ಇನ್ನೂ ಹೆಚ್ಚು ಫಲದಾಯಕವು. ಇದರಲ್ಲಿ ಅಂದರೆ

ನಾಮಜಪದಲ್ಲಿ ಜಪಮಾಡುವವನು ನಾಮ ಸ್ಮರಣೆಯನ್ನೇ ಅನ್ಯೋಪಾಯವಿಲ್ಲದೆ ಅಥವಾ ಅನ್ಯೋಪಾಯವನ್ನು ಕಾಣದೇ ಅದನ್ನೇ ತನ್ನ ಜೀವನದ ಉದ್ದೇಶವಾಗಿ ಇಟ್ಟುಕೊಳ್ಳುತ್ತಾನೆ. ದಾರಿ ಅವರವರಿಗೆ ಬಿಟ್ಟಿದ್ದು. ಉದ್ದೇಶ - ಅವನನ್ನು ಸೇರುವುದು ಮುಖ್ಯ. ಮಂತ್ರೋಪಾಸನೆ, ತಂತ್ರಾರಾಧನೆ ವಿವಿಧ ರೂಪಗಳು, ದಾರಿಗಳು, ತಂತ್ರಾರಾಧ್ಯಾಯ ನಮಃ ಎಂದರೆ ಅವನೇ. ಅವನಿಗೇ ಸೇರುತ್ತದೆ.

**617. ಬಹುರೂಪಾಯ ನಮಃ**

ಅನೇಕ ರೂಪಗಳುಳ್ಳವನು - ಬಹುರೂಪಿ - ಅದರಿಂದ ಬಹುರೂಪಾಯ ನಮಃ ಎಂದು ನಮಸ್ಕರಿಸಲಾಯಿತು. ಅಖಿಲಾಂಡಕೋಟಿಯುಲ್ಲಿರುವ ಸಕಲ ಜೀವ ಕೋಟಿಗೂ ಸಹಾಯವಾಗುವಂತೆ ಮತ್ತು ಪರಸ್ಪರ ವಿರೋಧವಾಗದ ರೀತಿಯಲ್ಲಿ ಪರಮಾತ್ಮನು ಅನೇಕ ರೂಪಗಳನ್ನು ತಾಳಿದನು. ಅನೇಕ ಕ್ರಿಯೆಗಳನ್ನು ಮಾಡಿದನು. ಸರ್ವರೂ ಅವರವರ ಮನೋಭಾವನೆಯಂತೆ ಉಪಯೋಗಿಸುವ ರೀತಿಯ ರೂಪಗಳನ್ನು ತಾಳಿದನು. ಎಲ್ಲ ರೂಪಗಳೂ ಅವನವೇ. ಯಾವುದನ್ನು ಕುರಿತು ಪ್ರಾರ್ಥಿಸಿದರೂ ಅವನೊಬ್ಬನಿಗೇ ಸೇರುತ್ತದೆ. ಸಕಲ ದೇವ ದೇವಿಯರ ಶಕ್ತಿಗಳ ರೂಪಗಳು ಅವನ ವಿಭೂತಿಗಳು. ಅವನೆ ಬಹುರೂಪಗಳ ಮೂಲಕ ಭಕ್ತರ ಇಷ್ಟಾರ್ಥಗಳನ್ನು ನಡೆಸುತ್ತಾನೆ. ವರಗಳನ್ನು ದಯಪಾಲಿಸುತ್ತಾನೆ. ''ಏಕಂ ಸದ್ ವಿಪ್ರಾ ಬಹುಧಾ ವದಂತಿ'' - ಪರಮಾತ್ಮನು ಒಬ್ಬನೇ ನಾನಾ ವಿಧದಲ್ಲಿ ನಾನಾ ರೂಪಗಳಲ್ಲಿ ಇದ್ದಾನೆ ಎಂದು ಜ್ಞಾನಿಗಳು ಹೇಳುತ್ತಾರೆ.

**618. ರೂಪ್ಯಾಯ ನಮಃ**

ರೂಪ್ಯಾಯ - ಎಂದರೆ ರೂಪವುಳ್ಳವನು. ಯಾವ ರೂಪವನ್ನು ಕುರಿತು ಪ್ರಾರ್ಥಿಸುತ್ತೇವೆಯೋ ಅದೇ ರೂಪವು ನಮ್ಮ ಮನಸ್ಸಿನಲ್ಲಿ ಕುಳಿತುಬಿಡುತ್ತದೆ. ಆ ರೂಪವು ಒಂದೇ ಒಂದಾಗಿ ಸಕಲ ಇಷ್ಟಾರ್ಥಗಳನ್ನು ಆರಾಧಿಸುವವನಿಗೆ ಕೊಡುತ್ತದೆ. ಬೇರೆ ರೂಪಗಳಲ್ಲಿ ಅವನ ಇಚ್ಛೆಯು ಕಡಿಮೆಯಾಗಿ ಇದರಲ್ಲಿಯೇ ಏಕರೂಪದಲ್ಲಿ ನಿಲ್ಲುತ್ತದೆ. ಆದರೆ ಆ ರೂಪಗಳಲ್ಲಿ ಶ್ರದ್ಧೆ ಕಡಿಮೆ ಎಂದಲ್ಲ. ಇದರಲ್ಲಿ ಇವನಿಗೆ ಆಸಕ್ತಿ, ಶ್ರದ್ಧೆ, ಭಕ್ತಿಯುಂಟಾಗಿರುವುದರಿಂದ ಅವನು ಬೇರೆಯದನ್ನು ಇಷ್ಟಪಡುವುದಿಲ್ಲ. ಈ ರೀತಿ ಅವನಿಗೆ ರೂಪ್ಯಾಯ ನಮಃ ಎಂದರೆ ಅವರ ಆರಾಧ್ಯದೈವದ ರೂಪವೇ ಹೆಚ್ಚು ಯಶಸ್ಸನ್ನು ಕೊಡುತ್ತದೆ.

**619. ಪಂಚರೂಪಧರಾಯ ನಮಃ**

ಸೃಷ್ಟಿಯಲ್ಲಿ ಸಕಲವೂ ತನ್ನ ಕಾಮನೆಗೆ ಅನುರೂಪವಾಗಿ ಸುಗಮವಾಗಿ ನಡೆಯುವ ಸಲುವಾಗಿ ಪರಮಾತ್ಮನು,

1. ಪಂಚಮಹಾಭೂತಗಳನ್ನು ಸೃಷ್ಟಿಸಿದನು, ಅಷ್ಟೇ ಅಲ್ಲ - ಅವುಗಳಲ್ಲಿ ತಾನೇ ತಾನಾಗಿ ಹರಡಿದನು - ಪೃಥಿವೀ, ಆಪಃ, ತೇಜಸ್ಸು, ವಾಯು, ಆಕಾಶ ತತ್ವಗಳ ರೂಪದಲ್ಲಿ ಪಂಚಭೂತಗಳಾದವು. ಎಂದರೆ ಪರಮಾತ್ಮನು ಈ ಮಹಾಭೂತಗಳನ್ನು ತಾನು ತನ್ನ ವೇದಾಂತ ಶರೀರದಲ್ಲಿ ಧರಿಸಿದನು - ಆಕಾಶಾದ್ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಆಪಃ ಪೃಥಿವೀ ಎಂಬುದಾಗಿ ಶೃತಿಪ್ರಕಾರ ಕ್ರಮವಾಗಿ ನಿರ್ಮಿಸಿದನು ಮತ್ತು ಅವುಗಳಲ್ಲಿ ತಾನೇ ಪ್ರವೇಶಿಸಿ ವಿಶ್ವರೂಪಿಯಾದ ವಿಷ್ಣುವಾದನು.
2. ವಾಯುವನ್ನು ಪ್ರಭೇದಮಾಡಿ ಪಂಚಪ್ರಾಣಗಳಾಗಿ ಪ್ರತಿ ದೇಹದಲ್ಲಿಯೂ ಹರಡಿ ರಕ್ಷಿಸುತ್ತಿದ್ದಾನೆ - ಇವೇ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ವಾಯುಗಳು. ಪಂಚಪ್ರಾಣಗಳು ಎಂದರೆ ಇವೇ.
3. ಪಂಚಜ್ಞಾನೇಂದ್ರಿಯಗಳು ಚಕ್ಷು, ಶ್ರೋತ್ರ, ಜಿಹ್ವಾ, ಘ್ರಾಣ, ತ್ವಕ್.
4. ಪಂಚ ಕರ್ಮೇಂದ್ರಿಯಗಳು - ಕಣ್ಣು, ಕಿವಿ, ಕೈಕಾಲುಗಳು, ಪಾಯು, ಉಪಸ್ಥಾ.
5. ಪಂಚಭೂತಗಳ ಅಧಿರೂಪ - ಶಬ್ದ, ಸ್ಪರ್ಶ, ರೂಪ, ರಸ, ಗಂಧ.

ಈ ರೀತಿಯಾಗಿ ಪಂಚರೂಪಗಳಾಗಿ ಅವನು ಪ್ರತಿಜೀವಿಯ ಶರೀರದಲ್ಲಿಯೂ ವಿರಾಜಿಸುತ್ತಾನೆ. ಮತ್ತೆ ತನ್ನದೇ ಆದ,

6. ಅಂಶರೂಪವಾದ ಆತ್ಮನನ್ನು ಶರೀರದಲ್ಲಿ ವಾಸಮಾಡಲು ಇಟ್ಟಿರುತ್ತಾನೆ.
7. ಬುದ್ಧಿ, ಮನಸ್ಸು, ಅಹಂಕಾರ, ಚಿತ್ತವನ್ನು ಆತ್ಮನೊಡನೆ ಸೇರಿಸಿ ಕಾರಣಶರೀರವನ್ನು ಆತ್ಮನಿಗೆ ಧರಿಸಿರುತ್ತಾನೆ.
8. ಸಂಸ್ಕಾರಗಳು ಅವನಿಗೆ ಅಂಟಿದರೂ ಬಿಡಿಸಿಕೊಳ್ಳುವ ಶಕ್ತಿಯನ್ನು ಆತ್ಮನಿಗೆ ತಾನೇ ಕೊಟ್ಟಿರುತ್ತಾನೆ. ಇದೇ ಅವನ ವೈಶಿಷ್ಟ್ಯ.

## 9. ಪಂಚಕೋಶಗಳು

**ಪಂಚ ಕೋಶಗಳು** (ಪಂಚರೂಪಗಳು - ಭಗವಂತನು ನಿರ್ಮಿಸಿರುವ ಪಂಚಕೋಶ ಅಥವಾ ಪಂಚ ಆವರಣಗಳು) ಪ್ರತಿ ಜೀವಿಯು ಇರುವ ದೇಹದಲ್ಲಿ ಇರುತ್ತವೆ. ಅವುಗಳ ಜ್ಞಾನ ಅವರವರ ಕರ್ಮವನ್ನು ಅನುಸರಿಸುತ್ತದೆ. ಅಷ್ಟೆ.

1. **ಅನ್ನಮಯ ಕೋಶ** - ಅನ್ನದಿಂದ ಎಂದರೆ ಆಹಾರದಿಂದ ಆದುದು - ಇದು ಸ್ಥೂಲ ಶರೀರ- ದೇಹ - ಬದಲಾಯಿಸತಕ್ಕದ್ದು - ನಾಶವಾಗತಕ್ಕದ್ದು - ಆದರಿಂದ ಆತ್ಮನಲ್ಲ.

2. ಪ್ರಾಣಮಯ ಕೋಶ - ಸ್ಥೂಲ ಶರೀರವನ್ನು ಪ್ರಾಣವಾಯುವು ವ್ಯಾಪಿಸಿರುತ್ತದೆ.

ಎ. ಚಕ್ಷು, ಶ್ರೋತ್ರ, ಜಿಹ್ವಾ, ಘ್ರಾಣ, ತ್ವಕ್-ಜ್ಞಾನೇಂದ್ರಿಯಗಳು ಕಣ್ಣು, ಕಿವಿ, ಕೈಕಾಲು, ಪಾಯು, ಉಪಸ್ಥ - ಕರ್ಮೇಂದ್ರಿಯಗಳು

(ಇವು ಪ್ರವರ್ತಿಸಲು ಪ್ರಾಣವಾಯು ಕಾರಣ)

ಬಿ. ಉಸಿರಾಡುವುದಕ್ಕೆ ಕಾರಣ - ಪ್ರಾಣ.

ಸಿ. ಮಲಮೂತ್ರವಿಸರ್ಜನೆಗೆ ಕಾರಣ - ಅಪಾನ.

ಡಿ. ಅಧಿಕ ಪ್ರಯತ್ನದಿಂದ ಮಾಡುವ ಕರ್ಮಗಳಿಗೆ ಬಲವನ್ನು ಒದಗಿಸುವುದು - ವ್ಯಾನ.

ಇ. ಮರಣಕಾಲದಲ್ಲಿ ಉತ್ಕ್ರಾಂತಿಗೆ ಕಾರಣ - ಉದಾನ.

ಎಫ್. ದೇಹದಲ್ಲಿ ಅನ್ನಪಾನಾದಿಗಳ ರಸವನ್ನು ಹಂಚುವುದಕ್ಕೆ ಕಾರಣ - ಸಮಾನ.

(ಪಂಚ ಪ್ರಾಣಗಳೇ ಪ್ರಾಣ ಕೋಶದ ಪ್ರಭೇದಗಳು)

3. ಮನೋಮಯ ಕೋಶ

1. ಜ್ಞಾನೇಂದ್ರಿಯಗಳ ಸಾಮಾನ್ಯ ಮತ್ತು ವಿಶೇಷ ಜ್ಞಾನವನ್ನುಂಟು ಮಾಡುವುದು

2. ಕಾಮ, ಸಂಕಲ್ಪ, ಸಂಶಯಗಳಿಗೆ ಕಾರಣವಾದುದು

[ಮನಸ್ಸು - ಮನಸ್ಸೇ ಮನೋಮಯ ಕೋಶ (ಇಚ್ಛಾಪ್ರಧಾನ ಕೋಶ)]

4. ವಿಜ್ಞಾನಮಯ ಕೋಶ - ದೇಹ, ಮನ ಮೊದಲಾದ ವಸ್ತುಗಳಲ್ಲಿ ''ನಾನು, ನನ್ನದು'' ಎಂಬ ಭಾವನೆಯನ್ನು ಉಂಟುಮಾಡುವುದು - ಈ ನಿರ್ಣಯಕ್ಕೆ ಬರಲು ಸಹಾಯ ಮಾಡುವ ನಿಶ್ಚಯಾತ್ಮಕವಾದ ಬುದ್ಧಿಯೆ - ವಿಜ್ಞಾನಮಯ ಕೋಶ

(ಜ್ಞಾನಶಕ್ತಿ ಪ್ರಧಾನವಾದ ಕೋಶ, ಕರ್ತೃತ್ವ ಭಾವನೆ ಕೋಶದ ಪ್ರಧಾನ ಲಕ್ಷಣ.)

5. ಆನಂದಮಯ ಕೋಶ -ಕರ್ಮದ ಫಲವಾಗಿ ಸಿಕ್ಕುವ ಆನಂದ, ಗಾಢ ನಿದ್ರೆಯಲ್ಲಿ ಸಿಕ್ಕುವ ಶಾಂತಿ - ಇವು ಆನಂದಮಯ ಕೋಶದಿಂದ ಉಂಟಾಗುತ್ತವೆ.

ಬುದ್ಧಿಯ ವೃತ್ತಿಗಳಲ್ಲಿ - ಎಂದರೆ ಅಲೆಗಳಲ್ಲಿ - ಆತ್ಮವಸ್ತುವಿನ ಆನಂದ ಪ್ರತಿಬಿಂಬಿತವಾದಾಗ - ಈ

ಪ್ರತಿಬಿಂಬ ಸಹಿತ ಬುದ್ಧಿಯ ವೃತ್ತಿಯೇ - ಆನಂದಮಯ ಕೋಶ. ಈ ಆನಂದ ಕದಾಚಿತ, ತಾತ್ಕಾಲಿಕ. ಇದು ಆತ್ಮನಲ್ಲ.

ಈ ಕೋಶಗಳು ಮುಂದು ಮುಂದಿನವು ಹಿಂದು ಹಿಂದಿನ ಕೋಶಗಳನ್ನು ವ್ಯಾಪಿಸಿರುತ್ತವೆ. ಈ ಕೋಶಗಳ ಬಿಡುಗಡೆಯಾದ ಹೊರತು, ಮೋಕ್ಷಗಳು ಸಿದ್ಧಿಸುವುದಿಲ್ಲ. ಇದೇ ಪಂಚಕೋಶ ವಿವೇಕ, ಜ್ಞಾನ - ಇದು ಗುರುವಿನ ಅನುಗ್ರಹದಿಂದ ಪ್ರಾಪ್ತವಾಗುತ್ತದೆ.

1. ಅನ್ನಮಯ ಕೋಶವೇ - ಸ್ಥೂಲ ಶರೀರ
2. ಪ್ರಾಣಮಯ, ಮನೋಮಯ, ವಿಜ್ಞಾನಮಯ ಕೋಶಗಳು - ಸೇರಿ ಸೂಕ್ಷ್ಮ ಶರೀರವಾಗುತ್ತದೆ.
3. ಜೀವಾತ್ಮನು ಒಂದು ಶರೀರದಿಂದ ಹೋಗುವಾಗ, ಹೊಸ ದೇಹ ಪಡೆಯುವಾಗ, ಸೂಕ್ಷ್ಮ ಶರೀರದೊಂದಿಗೆ ಸಂಚರಿಸುತ್ತಾನೆ. ಮೋಕ್ಷ ಸಿಗುವವರೆಗೂ ಈ ಸೂಕ್ಷ್ಮ ಶರೀರ ನಾಶವಾಗುವುದಿಲ್ಲ - ಆಗಲೇ ಆತ್ಮನ ಬಿಡುಗಡೆ.
4. ಆನಂದಮಯ ಕೋಶ - ಬುದ್ಧಿಯ ಪ್ರವೃತ್ತಿಯೇ ಕಾರಣ ಶರೀರ - ಪುನರ್ಜನ್ಮ ರೂಪವಾದ ಸಂಸ್ಕಾರಕ್ಕೆ ಕಾರಣವಾದ್ದರಿಂದ ಈ ಅಜ್ಞಾನವೇ ಕಾರಣ ಶರೀರ. ಆತ್ಮಾನಂದವೇ ಶಾಶ್ವತ - ಪರಮಾತ್ಮನಲ್ಲಿ ಏಕೀಭೂತವಾಗುತ್ತದೆ. ಸಂಪೂರ್ಣ ಆನಂದ ಬರಬೇಕಾದರೆ ಆತ್ಮಾನಂದವಾಗಬೇಕು.

ಪಂಚ ಕೋಶಗಳು ಯಾವುದೂ ಆತ್ಮನಲ್ಲ. ಎಲ್ಲವೂ ಆತ್ಮನಿಗೆ ಅಂಟಿಕೊಂಡಿರುವ ಸಂಸ್ಕಾರ ಪ್ರಧಾನಗಳು - ಸಂಸ್ಕಾರಗಳನ್ನು ಕರ್ಮಗಳು ಆತ್ಮನಿಗೆ ಅಂಟಿಸುತ್ತವೆ. ಇವು ನಶ್ವರ. ಇವುಗಳಿಂದ ಆತ್ಮನು ಬೇರ್ಪಟ್ಟಾಗ ಆತ್ಮನಿಗೆ ಮುಕ್ತಿ - ಪರಮಾತ್ಮನ ಸಾಲೋಕ್ಯ, ಸಾರೂಪ್ಯ, ಸಾಯುಜ್ಯ, ಸಾಮಿಪ್ಯವನ್ನು ಪುನರಾವೃತ್ತಿರಹಿತ ಲೋಕವನ್ನು ಆತ್ಮನು ಪಡೆಯುತ್ತಾನೆ. ಇದೇ ಮುಕ್ತಿ.

*ಭದ್ರರೂಪಾಯ ರೂಪಾಯ ಯೋಗರೂಪಾಯ ಯೋಗಿನೇ ।*
*ಸಮರೂಪಾಯ ಯೋಗಾಯ ಯೋಗಪೀಠಸ್ಥಿತಾಯ ಚ ॥103॥*
*(620-626)*

**620. ಭದ್ರರೂಪಾಯ ನಮಃ**

ಭದ್ರ - ಎಂದರೆ ಕಾಪಾಡುವವನು, ಸಕಲ ರೀತಿಯಲ್ಲಿಯೂ ಯೋಗಕ್ಷೇಮವನ್ನು ನೋಡಿಕೊಳ್ಳುವವನು - ರಾಮಭದ್ರ ಎಂದು ಕೌಸಲ್ಯೆಯು

ರಾಮನನ್ನು (ಮಗನನ್ನು) ಸಂಭೋದಿಸುತ್ತಿದ್ದಳು - ಎಂದರೆ ಅವಳನ್ನು - ತಾಯಿಯನ್ನು ರಾಮನು ನೋಡಿಕೊಳ್ಳುವವನು ಎಂಬ ಭಾವನೆ ಅವಳಿಗೆ. ರಾಮನು - ಪರಮಾತ್ಮನ ರೂಪನಾದ ರಾಮನು ಪರಿಪಾಲಿಸುವವನಾಗಿದ್ದಾನೆ.

ಭದ್ರ - ಕಲ್ಯಾಣಕಾರಕನು, ಪ್ರಿಯನು, ಶ್ರೇಷ್ಠನು, ಅನುಕೂಲಕಾರಕ. ಪರಮಾತ್ಮನು ಭದ್ರರೂಪನು.

ಲೋಕದಲ್ಲಿ ಪ್ರತಿ ಜೀವಿಗೂ ಇತರ ಜೀವಿಗಳು ಒಂದಲ್ಲ ಒಂದು ಸಲ ಕೆಲಸಮಯಕ್ಕಾಗಿಯಾದರೂ ಭದ್ರರೂಪವಾಗಿರಬಹುದು, ನಂತರ ಬದಲಾಯಿಸಬಹುದು. ಇದು ಸಹಜ ಗುಣ.

ಆದರೆ ಭದ್ರರೂಪನಾದ ಪರಮಾತ್ಮನು ಸದಾಕಾಲಕ್ಕೂ ಯೋಗಕ್ಷೇಮವನ್ನು ರಕ್ಷಿಸುವವನೇ ಹೊರತು ಪ್ರತಿಕೂಲನಲ್ಲ. ಅವನಿಗೆ ಯಾರ ಮೇಲೂ ಪಕ್ಷಪಾತವಿಲ್ಲ. ಸರ್ವಜೀವಿಗಳಿಗೂ ಸದಾಕಾಲದಲ್ಲಿಯೂ ಸರ್ವದೇಶದಲ್ಲಿಯೂ ಅವನು ಭದ್ರರೂಪನೇ ಆಗಿರುತ್ತಾನೆ.

**621.** ರೂಪಾಯ ನಮಃ

ರೂಪ - ಎಂದರೆ ಆಕಾರ, ಆಕೃತಿ, ಪ್ರತಿಬಿಂಬ, ಹೋಲಿಕೆ.

ಪರಮಾತ್ಮನು ತನ್ನಿಂದ ಸಕಲ ಆತ್ಮಗಳನ್ನು ಕಲ್ಪಾದಿಯಲ್ಲಿ ಹೊರಹೊಮ್ಮಿಸಿರುವುದರಿಂದ ಪ್ರತಿಯೊಂದು ಆತ್ಮವೂ ಅವನ ರೂಪವೇ ಆಗಿರುತ್ತದೆ. ಅವನ ಪ್ರತಿಬಿಂಬವೇ ಆಗಿದೆ. ಏಕೆಂದರೆ ಆತ್ಮವು ಪರಮಾತ್ಮನ ಗುಣಗಳನ್ನು, ಭಾವಗಳನ್ನು ಹೊಂದಿರುತ್ತದೆ. ವ್ಯತ್ಯಾಸವೆಂದರೆ ಆತ್ಮನನ್ನು ಪರಮಾತ್ಮನು ಸೂತ್ರಧಾರನು ಬೊಂಬೆಗಳನ್ನು ನಡೆಸುವಂತೆ ಓಡಾಡಿಸುತ್ತಾನೆ. ಪರಮಾತ್ಮನೇ ಆತ್ಮನರೂಪವನ್ನು ತಾಳುತ್ತಾನೆ. ಅಥವಾ ಆತ್ಮನು ಪರಮಾತ್ಮನ ಅಂಶವನ್ನು ಹೊಂದಿರುತ್ತಾನೆ. ಅದರಿಂದ ಅವರು ಪರಸ್ಪರ ಪ್ರತಿರೂಪಗಳು.

**622.** ಯೋಗರೂಪಾಯ ನಮಃ

ಯೋಗ - ಎಂದರೆ ಸಾತ್ವಿಕವಾದ ವಸ್ತುವನ್ನು, ಭಾವನೆಗಳನ್ನು ಪಡೆಯುವುದು ಮತ್ತು ಅನುಭವಿಸುವುದು. 'ಇದು ಸುಯೋಗ' ಅಂದರೆ ಒಳ್ಳೆಯ ಪಡೆಯುವಿಕೆ ಮತ್ತು ಅನುಭವಿಸುವಿಕೆ ಎಂದಾಗುತ್ತದೆ.

ಅಸಾತ್ವಿಕವಾದುದು - ದುರ್ಯೋಗ.

ಕಳೆದುಕೊಳ್ಳುವುದು - ಇದ್ದದ್ದನ್ನು ಒಳ್ಳೆಯದಾಗಲೀ, ಇಷ್ಟವಾದುದಾಗಲೀ, ಅನಿಷ್ಟವಾದುದಾಗಲಿ - ಕಳೆದುಹೋಗುವುದಕ್ಕೆ ವಿಯೋಗವೆಂದಾಗುತ್ತದೆ.

ಒಂದನ್ನೊಂದು ಜೊತೆಯಾಗುವುದಕ್ಕೆ ಸಂಯೋಗವೆಂದು ಆಗುತ್ತದೆ.

ಯೋಗ ಎಂದರೆ ಧ್ಯಾನವೂ ಒಂದಾಗುತ್ತದೆ. ಆಗ ಅದು ಧ್ಯಾನಯೋಗ.

ಯೋಗಗಳು ಹಲವು - ಕರ್ಮಯೋಗ, ಜ್ಞಾನಯೋಗ, ಧ್ಯಾನಯೋಗ, ಕರ್ಮ ಸಂನ್ಯಾಸಯೋಗ, ಭಕ್ತಿಯೋಗ, ಮುಂತಾದವು - ಇಲ್ಲಿ ಯೋಗವೆಂದರೆ ದಾರಿ, ಮಾರ್ಗ ಎಂದೆನಿಸುತ್ತದೆ.

ಈ ಯೋಗಗಳ ರೂಪವೇ ಪರಮಾತ್ಮ. ಯೋಗಗಳ ಭಾವವೇ ಪರಮಾತ್ಮ. ಇವೆಲ್ಲ ಪರಮಾತ್ಮನ ನಾನಾ ರೂಪಗಳು. ಯೋಗಗಳ ಅಂತರದಲ್ಲಿರುವ ಭಾವನಾ ಪ್ರಪಂಚವೇ ಆತ್ಮರೂಪ, ಪರಮಾತ್ಮನ ಒಂದು ರೂಪ. ಪರಮಾತ್ಮನು ಏನೇ ಆಗಲು ಬಲ್ಲ. ಅವನಿಗೆ ಮತ್ತು ಅವನ ಸಂಕಲ್ಪಗಳನ್ನು ಮೀರಿರುವ ವಸ್ತುವಾಗಲೀ, ಆತ್ಮವಾಗಲೀ ಯಾರೂ ಇಲ್ಲ. ಅವನೇ ಸರ್ವಸ್ವ, ಸರ್ವಸ್ವರೂಪಿ. ಅಂತಹ ಯೋಗರೂಪನಿಗೆ ನಮಸ್ಕಾರಗಳು.

**623. ಯೋಗಿನೇ ನಮಃ**

ಯೋಗಿ - ಯೋಗವನ್ನು ಹೊಂದಿರುವವನು ಯೋಗಿ.

ಯೋಗಗಳನ್ನು ಯಾವ ಜೀವಿಯಾದರೂ ಹೊಂದಬಹುದು. ಅದರಲ್ಲಿ ಸದಾ ನಿರಂತರ ಕಾಲದಲ್ಲಿ ಯೋಗಿಯಾಗಿರುವವನೆಂದರೆ ಪರಮಾತ್ಮನೊಬ್ಬನೇ. ಆದರೆ ಜೀವಿಗಳು ಈ ರೀತಿ ನಿರಂತರ ಯೋಗಸ್ಥಿತಿಯನ್ನು ಹೊಂದಲು ಸಾಧ್ಯವಿಲ್ಲ. ಏಕೆಂದರೆ ಸಂಸ್ಕಾರಬಲಗಳು, ಮಾಯೆ, ಪ್ರಕೃತಿ, ಪುರುಷ, ಜಗತ್ತಿನ ಸ್ಪಂದನಗಳ ಅಡಿಯಲ್ಲಿ ಆಗುತ್ತವೆ. ಆದರೆ ಪರಮಾತ್ಮನು ಇವುಗಳನ್ನು ಮೀರಿದವನು. ಅವನು ಸರ್ವಸ್ವತಂತ್ರನು ಸದಾಯೋಗಿಯಾಗಿಯೇ ಇದ್ದಾನೆ. ಅವನು ಕರ್ಮಯೋಗಿ, ಜ್ಞಾನಯೋಗಿ, ಭೋಗಯೋಗಿ, ಯೋಗಯೋಗಿ, ಇತ್ಯಾದಿ, ನಿರ್ವಿಕಲ್ಪನು ಎಲ್ಲಕ್ಕೂ ಅತೀತನು. ಇದೂ ಒಂದು ಅವನ ವಿಶೇಷ ಯೋಗರೂಪದ ಯೋಗಿತನ. ಅದರಿಂದಲೇ ಅವನು ಶ್ರೇಷ್ಠನು "ಯೋಗಿನೇ ನಮಃ" ಎಂದು ನಮಸ್ಕರಿಸಲ್ಪಡುತ್ತಾನೆ.

**624. ಸಮರೂಪಾಯ ನಮಃ**

ರೂಪ - ಎಂದರೆ ಆಕಾರ, ಪ್ರತಿಬಿಂಬ, ಬಿಂಬದ ಪ್ರತಿರೂಪ.

ಪರಮಾತ್ಮನು ಸಕಲ ದೇಹಿಗಳ ಒಳಗೆ ವಾಸಿಸುವ ಆತ್ಮಗಳೂ ಒಂದೇ ರೀತಿಯಾಗಿರುತ್ತವೆ. ಏಕೆಂದರೆ ಆತ್ಮಗಳು ಪರಮಾತ್ಮನಿಂದ ಹೊರಹೊಮ್ಮಿ ಅವನದೇ ಆದ ಅಂಶಗಳನ್ನು ಹೊಂದಿ, ಅವನ ಅದೇ ಗುಣಗಳನ್ನು ಹೊಂದಿರುತ್ತವೆ.

ಎಲ್ಲ ಆತ್ಮಗಳೂ ಒಂದೇ. ಒಂದೇ ರೀತಿಯ ತೇಜಸ್ಸಿನ ಶಕ್ತಿ, ಎಂದಮೇಲೆ ಅವನು ಯಾವ ರೀತಿಯ ತಾರತಮ್ಯವೂ ಇಲ್ಲದೆ, ಪಕ್ಷಪಾತರಹಿತನಾಗಿ ಸಮರೂಪನಾಗಿಯೇ ಇದ್ದಾನೆ. ಮತ್ತು ಸಮಸ್ತ ಆತ್ಮಗಳನ್ನು ಏಕರೂಪದಿಂದಲೂ, ಸಮರೂಪದಿಂದಲೂ ನೋಡುತ್ತಾನೆ ಮತ್ತು ಅವುಗಳ

ಆಗು ಹೋಗುಗಳನ್ನು ನಿರಂತರ ಸಾಕ್ಷಿಭೂತನಾಗಿ ನೋಡುತ್ತಿರುತ್ತಾನೆ. ಏಕೆ ಆತ್ಮಗಳಲ್ಲಿ ದೇಹಗಳಲ್ಲಿ ವ್ಯತ್ಯಾಸವಾಗುತ್ತದೆಂದರೆ ಆತ್ಮಗಳಿಗೆ ತಮ್ಮದೇ ಆದ ಮನ ಬುದ್ಧಿ ಅಹಂಕಾರ, ಚಿತ್ತಗಳಿಗೆ ಇಂದ್ರಿಯಗಳು, ಪಂಚಪ್ರಾಣಗಳು ಸತ್ವರಜಸ್ತಮೋಗುಣಗಳು ದೇಹಗಳನ್ನು ಹೊಂದಿ ಬೇರೆ ಬೇರೆಯ ರೀತಿಯಲ್ಲಿ ಜಗತ್ತಿಗೆ ಸ್ಪಂದಿಸುತ್ತವೆ. ಆದರಿಂದ ಸಂಸ್ಕಾರಗಳ ಬದಲಾವಣೆಯಾಗುತ್ತದೆ. ಹೀಗೆ ಸಮರೂಪನಾದ ಪರಮಾತ್ಮನ ಪ್ರತಿಬಿಂಬನಾದ ಆತ್ಮನು ವಿವಿಧ ರೀತಿಯ ಸಂಸ್ಕಾರಗಳ ಫಲವಾಗಿ ಅನೇಕ ರೀತಿಯ ಸ್ವಭಾವನೆಗಳನ್ನು ಹೊಂದುತ್ತಾನೆ. ಮತ್ತು ತನ್ನ ಸಮರೂಪವನ್ನು ಮುಚ್ಚಿಹಾಕಿಕೊಳ್ಳುತ್ತಾನೆ. ಪರಮಾತ್ಮನ ಕೃಪೆಯಿಂದ ಎಂದಾದರೂ, ಯಾವಾಗಲಾದರೂ ಈ ಸಮರೂಪನೆಂಬ ಭಾವನೆ ಹುಟ್ಟಿದಾಗ ಜ್ಞಾನವನ್ನು ಪಡೆಯುತ್ತಾನೆ ಮತ್ತು ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಕಾತುರದಿಂದ ಸಜ್ಜನರ ಸಹವಾಸವನ್ನು ಬೆಳೆಸುತ್ತಾನೆ. ಸಾಕ್ಷಾತ್ಕಾರವನ್ನು - ಅದರ ದಾರಿಯನ್ನು ಹೊಂದಿಯೂ ಹೊಂದುತ್ತಾನೆ.

**625.** ಯೋಗಾಯ ನಮಃ

ಯೋಗಾಯ ನಮಃ - ಪರಮಾತ್ಮನೇ ಯೋಗ, ಅಂತಹ ಯೋಗನಿಗೆ ನಮಸ್ಕಾರಗಳು. ನರಸಿಂಹಸ್ವಾಮಿಯು ಯೋಗಾನರಸಿಂಹನೆಂದು ಪ್ರಸಿದ್ಧಿಹೊಂದಿರುತ್ತಾನೆ. ಅವನು ಸದಾ ''ಯೋಗ'' ಸ್ಥಿತಿಯಲ್ಲಿಯೇ ಅಂದರೆ ತಪಸ್ಸಿನಲ್ಲಿಯೇ ಇರುತ್ತಾನೆ. (ದೇವರಾಯನದುರ್ಗದಲ್ಲಿ ಬೆಟ್ಟದ ಮೇಲೆ ಇರುವವನು - ''ಯೋಗಾನರಸಿಂಹ''.)

ಯೋಗವು ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಒಂದು ದಾರಿ, ತಪಸ್ಸಿನ ಒಂದು ಸೂತ್ರ.

ಯೋಗ - ಎಂದರೆ ಜಡ ದೇಹವನ್ನು ವ್ಯಾಯಾಮ ರೀತಿಯಲ್ಲಿ ನಿಗ್ರಹಮಾಡಿ ಕ್ಷೇಮವಾದ ರೀತಿಯಲ್ಲಿ ಇಡುವುದು. ಬಲಶಾಲಿಯಾಗಿ ಇಡುವುದು.

ಯೋಗ - ಅಷ್ಟಾಂಗಯೋಗ, ಧ್ಯಾನದ ಒಂದು ರೀತಿಯ ಸೂತ್ರರೂಪವಾದ ದಾರಿ.

ಯೋಗಗಳೇ ಭಗವಂತ - ಅವನಿಲ್ಲದ ವಸ್ತುವಾಗಲೀ, ಭಾವವಾಗಲೀ, ದಾರಿಯಾಗಲೀ ಇಲ್ಲ. ಅವನು ಸದಾ ಸರ್ವಕಾಲ ದೇಶಗಳಲ್ಲಿ ಇರುವವನು.

**626.** ಯೋಗಪೀಠಸ್ಥಿತಾಯ ನಮಃ

ಯೋಗ - ಯೋಗವನ್ನು, ಪೀಠ - ಸಾಧಿಸುವ ಸ್ಥಳದಲ್ಲಿ, ಸ್ಥಿತ - ಇರುವವನು.

ಎಲ್ಲಿ ಆಸನದ ಮೇಲೆ ಕುಳಿತು ಯೋಗವನ್ನು ಸಾಧಿಸುತ್ತೇವೆಯೋ ಆ ಪೀಠದಲ್ಲಿ ಭಗವಂತನು ಸದಾ ಇರುತ್ತಾನೆ. ಭಗವಂತನನ್ನು ನಾವು ಆಹ್ವಾನಿಸಿ,

ಪೀಠದ ಮೇಲೆ ಆಸೀನಮಾಡಿ, ಪೂಜಿಸಿ, ನಂತರ ಅವನ ಪ್ರಸಾದದಿಂದ ಯೋಗವನ್ನು ಸಾಧಿಸುತ್ತೇವೆ. ಇದು ಜಪ, ತಪ, ಧ್ಯಾನ, ಪೂಜೆಗಳನ್ನು ಮಾಡುವಾಗ ಪೀಠದ ವಿಚಾರದಲ್ಲಿ ಅನುಸರಿಸಬೇಕಾದ ಕ್ರಮಗಳು. ಯಾವಾಗ ಯೋಗಮಾಡುವ, ಸಾಧಿಸುವ ಸ್ಥಾನದಲ್ಲಿ ಪರಮಾತ್ಮನು ತಾನಾಗಲೀ ತನ್ನ ಸ್ಫೂರ್ತಿಯನ್ನಾಗಲೀ, ಭಾವವನ್ನಾಗಲೀ ಆಹ್ವಾನಿತನಾಗಿ ನಿಲ್ಲುವನೋ ಆಗ ಸಾಧಕನು ಅಪರಿಮಿತ ಯೋಗವನ್ನು ಸಾಧಿಸಿ ಮನಶ್ಶಾಂತಿಯನ್ನು ಪಡೆಯುತ್ತಾನೆ. ಮತ್ತು ಸಾಧನೆಯಲ್ಲಿ ಪ್ರಗತಿಯನ್ನು ಪಡೆಯುತ್ತಾನೆ. ಯೋಗಮಾಡುವ ಸಮಯದಲ್ಲಿ ಅತ್ಯುತ್ತಮ ಶಾಂತಿಯನ್ನು ಪಡೆಯುತ್ತಾನೆ. ಈ ಕಾರಣದಿಂದ ನಾವು ಧ್ಯಾನ, ಜಪ, ತಪ, ಪೂಜೆಮಾಡುವ ಮೊದಲು ಪರಮಾತ್ಮನನ್ನು ನಾವು ಉಪಯೋಗಿಸುವ ಪೀಠದಲ್ಲಿ ಆಹ್ವಾನಿಸುವುದು ಒಂದು ಅವಶ್ಯವಾದ ಕರ್ತವ್ಯ. ಗುರುವನ್ನು ಮತ್ತು ಇಷ್ಟ ದೈವವನ್ನು ಈ ಪೀಠದಲ್ಲಿ ಆಹ್ವಾನಿಸಿ ಪ್ರಾರ್ಥನೆಯನ್ನು ಸಲ್ಲಿಸಿ ಮುಂದುವರೆದರೆ ಅತ್ಯಂತ ಉತ್ತಮವಾದ ಶಾಂತಿಯನ್ನು ಪಡೆಯುತ್ತೇವೆ.

*ಯೋಗರಾಜಾಯ ಸೌಮ್ಯಾಯ ಧ್ಯಾನಗಮ್ಯಾಯ ಧ್ಯಾಯಿನೇ ।*
*ಧ್ಯೇಯಗಮ್ಯಾಯ ಧಾಮ್ನೇ ಚ ಧಾಮಾಧಿಪತಯೇ ನಮಃ ॥104॥*
*(627-633)*

**627. ಯೋಗರಾಜಾಯ ನಮಃ**

ಯೋಗಗಳಿಗೆ ರಾಜನಾದವನು. ಯೋಗಗಳಿಗೆ ಅಧ್ಯಕ್ಷನು. ಯೋಗಗಳನ್ನು ನಿರ್ವಹಿಸುವವನು. ಯೋಗಗಳಲ್ಲಿ ಅತ್ಯುತ್ತಮ "ಯೋಗ" ರೂಪನಾಗಿ ರಾಜತನವನ್ನು ಹೊಂದಿದವನು - ಪರಮೇಶ್ವರನು.

ಯೋಗ ಎಂದರೆ ಪಡೆಯುವುದು. ಪಡೆಯುವ ಸ್ಥಾನ, ಭಾವ, ವಸ್ತುಗಳಲ್ಲೆಲ್ಲಾ ಪರಮಾತ್ಮನಿಂದ ಪಡೆಯುವುವುಗಳೇ ಸರ್ವೋತ್ತಮ. ಪರಮಾತ್ಮನು ಕರುಣಿಸುವ ಯೋಗಗಳಲ್ಲೆಲ್ಲಾ ಭಗವತ್ ಸಾನ್ನಿಧ್ಯವೇ ಸರ್ವೋಚ್ಚವಾದುದು. ಭಕ್ತನಾದವನು ಎಲ್ಲವನ್ನು ತ್ಯಜಿಸಿ, ನೇತಿ, ನೇತಿ ಎಂದು ಅವನು ಕೊಡುವ ಎಲ್ಲವನ್ನು ಬೇಡವೆಂದು ತಿಳಿದು ಕೇವಲ ಕೈವಲ್ಯವನ್ನೇ ಬೇಡುತ್ತಾನೆ - ಸಾರೂಪ್ಯ, ಸಾಯುಜ್ಯ, ಸಾಲೋಕ್ಯ, ಸಾಮಿಪ್ಯ, ಪುನರಾವೃರ್ತಿ ರಹಿತ ಲೋಕವೇ ಯೋಗಗಳಿಗೆಲ್ಲ, ಯೋಗಗಳಲ್ಲೆಲ್ಲಾ ರಾಜರೂಪವಾದುದು - ಯೋಗರಾಜವು - ಪರಮಾತ್ಮನೇ ಯೋಗರಾಜನು - ಅದರಿಂದ ಯೋಗರಾಜಾಯ ನಮಃ.

**628. ಸೌಮ್ಯಾಯ ನಮಃ**

ಸೌಮ್ಯ - ಎಂದರೆ ಪ್ರಿಯವಾದರೂಪ.

ಪರಮಾತ್ಮನು ಸೌಮ್ಯ ಸ್ವರೂಪನು. ಸಕಲ ಜೀವಕೋಟಿಯ ಪ್ರತಿಜೀವಿಗೂ ಬೇಕಾದವನು. ಆಯಾ ಜೀವಿಯ ಮನೋಗುಣಕ್ಕನುಗುಣವಾಗಿ ಬೇಡಿದ ರೂಪದಲ್ಲಿ ದರ್ಶನವನ್ನು ಕೊಡುತ್ತಾನೆ. ಇದು ಅವನ ಪರಮ ಉದಾತ್ತ ಗುಣ. ಯಾರಿಗೆ ಯಾವುದು ಇಷ್ಟವೋ ಅದನ್ನೇ ಕರುಣಿಸುವುದರಿಂದ ಪ್ರತಿಜೀವಿಗೂ ಅವನು ಸೌಮ್ಯ ಸ್ವರೂಪನೇ ಆಗುತ್ತಾನೆ, ಸೌಮ್ಯರೂಪಿಯೇ ಆಗುತ್ತಾನೆ.

ಸೌಮ್ಯ - ಪ್ರಿಯವಾದ ರೂಪ, ಮೃದುವಾದ ಭಾವ.

ಪರಮಾತ್ಮನು ಸಕಲರಿಗೂ ಮೃದುವಾಗಿ ಕಾಣುವವನು. ಪರಮಾತ್ಮನ ಕೃಪಾದೃಷ್ಟಿಯೇ ನಮ್ಮ ಮನಸ್ಸನ್ನು ಎಳೆಯುತ್ತದೆ. ಅವನು ಪರೋಕ್ಷವಾಗಿ ಮತ್ತು ಪ್ರತ್ಯಕ್ಷವಾಗಿ ಕೊಟ್ಟಿರುವ ಅನುಕೂಲತೆಗಳು ಹೇರಳ. ಇಂತಹ ಉದಾತ್ತ ಕರುಣೆಯುಳ್ಳ ಅವನು ಮಹಾಮಹಿಮನು. ಎಲ್ಲರೂ ಬಯಸುವುದು ಆನಂದವನ್ನೇ. ಆ ಪರಮಾದ್ಭುತವಾದ ನಿರಂತರವಾದ ಆನಂದವನ್ನು ಅವನೊಬ್ಬನೇ ಕೊಡುವವನು. ಅವನಿಗೆ ಸಮರು ಯಾರೂ ಇಲ್ಲ. ಅವನಷ್ಟು ಸರ್ವಕಾಲದಲ್ಲಿಯೂ, ಸರ್ವದೇಶದಲ್ಲಿಯೂ, ಸರ್ವಸನ್ನಿವೇಶದಲ್ಲಿಯೂ ಕರುಣಾಮಯರು ಇನ್ನೊಬ್ಬರಿಲ್ಲ. ಇದೇ ಅವನಲ್ಲಿರುವ ಮಹತ್ವ, ಸೌಮ್ಯತೆ, ಸೌಮ್ಯಗುಣ. ಆ ಸೌಮ್ಯಗುಣವೇ ಅವನಾಗಿ ಅವನೇ ಸೌಮ್ಯನಾಗಿದ್ದಾನೆ - ಹೇ ದಯಾಮಯ! ಸೌಮ್ಯಾಯ ತೇ ನಮಃ.

ಎಂತಹ ಉಗ್ರ / ವ್ಯಗ್ರ ಭಾವದ ಸನ್ನಿವೇಶವೇ ಆಗಿದ್ದರೂ, ಸೌಮ್ಯ ಭಾವದಿಂದ ಸ್ಪಂದಿಸಿ ಗೆಲ್ಲಬಹುದು ಮತ್ತು ಶಾಂತತೆ, ತಾಳ್ಮೆ ಹೊರಬರುವಂತೆ ಮಾಡಬಹುದು. ಪ್ರೀತಿ, ವಾತ್ಸಲ್ಯಗಳು ಸೌಮ್ಯತೆಯ ಹೊರಭಾವ, ಮನುಷ್ಯರದು ತೋರಿಕೆಯಾಗಬಹುದು. ಆದರೆ ಪರಮಾತ್ಮನ ಸೌಮ್ಯತೆ ಶಾಶ್ವತವಾದ್ದು ಮತ್ತು ಎಲ್ಲಾ ಕಪಟತೆಯಿಂದ ಸಂದೇಹದಿಂದ ಹೊರತಾದ್ದು ಅದರಿಂದಲೇ ವೈಶಿಷ್ಠತೆ.

**629. ಧ್ಯಾನಗಮ್ಯಾಯ ನಮಃ**

ಧ್ಯಾನ - ಗಮ್ಯಾಯ - ನಮಃ

ಧ್ಯಾನದ ಒಡನೆ ಅವಿಭಾಜ್ಯ ಅಂಗವಾಗಿ ನಡೆಯುವವನು - ಧ್ಯಾನವು ಯಾವ ದಿಶೆಯಲ್ಲಿ ಯಾವ ಭಾವನೆಯಿಂದ ಆಳವಾದ ಶ್ರದ್ಧೆ, ಅವ್ಯಭಿಚಾರಿಣೀ ಭಕ್ತಿಯಿಂದ ಮುಂದುವರಿಯುವುದೋ ಅದರಲ್ಲಿಯೇ ನಡೆಯುವ ಭಗವಂತನು.

ಅಥವಾ

ಧ್ಯಾನದ ಕಾರಣ ಮುಂದುವರಿಯುವವನು - ಮುಂದೆ ಮುಂದೆ ನಡೆಯುತ್ತಾ, ಮುಂದಿನ ಹಂತವನ್ನು ತಿಳಿಸುವವನು - ಪರಮಾತ್ಮನು.

ಪೀಠದ ಮೇಲೆ ಆಸೀನಮಾಡಿ, ಪೂಜಿಸಿ, ನಂತರ ಅವನ ಪ್ರಸಾದದಿಂದ ಯೋಗವನ್ನು ಸಾಧಿಸುತ್ತೇವೆ. ಇದು ಜಪ, ತಪ, ಧ್ಯಾನ, ಪೂಜೆಗಳನ್ನು ಮಾಡುವಾಗ ಪೀಠದ ವಿಚಾರದಲ್ಲಿ ಅನುಸರಿಸಬೇಕಾದ ಕ್ರಮಗಳು. ಯಾವಾಗ ಯೋಗಮಾಡುವ, ಸಾಧಿಸುವ ಸ್ಥಾನದಲ್ಲಿ ಪರಮಾತ್ಮನು ತಾನಾಗಲೀ ತನ್ನ ಸ್ಫೂರ್ತಿಯನ್ನಾಗಲೀ, ಭಾವವನ್ನಾಗಲೀ ಆಹ್ವಾನಿತನಾಗಿ ನಿಲ್ಲುವನೋ ಆಗ ಸಾಧಕನು ಅಪರಿಮಿತ ಯೋಗವನ್ನು ಸಾಧಿಸಿ ಮನಶ್ಶಾಂತಿಯನ್ನು ಪಡೆಯುತ್ತಾನೆ. ಮತ್ತು ಸಾಧನೆಯಲ್ಲಿ ಪ್ರಗತಿಯನ್ನು ಪಡೆಯುತ್ತಾನೆ. ಯೋಗಮಾಡುವ ಸಮಯದಲ್ಲಿ ಅತ್ಯುತ್ತಮ ಶಾಂತಿಯನ್ನು ಪಡೆಯುತ್ತಾನೆ. ಈ ಕಾರಣದಿಂದ ನಾವು ಧ್ಯಾನ, ಜಪ, ತಪ, ಪೂಜೆಮಾಡುವ ಮೊದಲು ಪರಮಾತ್ಮನನ್ನು ನಾವು ಉಪಯೋಗಿಸುವ ಪೀಠದಲ್ಲಿ ಆಹ್ವಾನಿಸುವುದು ಒಂದು ಅವಶ್ಯವಾದ ಕರ್ತವ್ಯ. ಗುರುವನ್ನು ಮತ್ತು ಇಷ್ಟ ದೈವವನ್ನು ಈ ಪೀಠದಲ್ಲಿ ಆಹ್ವಾನಿಸಿ ಪ್ರಾರ್ಥನೆಯನ್ನು ಸಲ್ಲಿಸಿ ಮುಂದುವರೆದರೆ ಅತ್ಯಂತ ಉತ್ತಮವಾದ ಶಾಂತಿಯನ್ನು ಪಡೆಯುತ್ತೇವೆ.

*ಯೋಗರಾಜಾಯ ಸೌಮ್ಯಾಯ ಧ್ಯಾನಗಮ್ಯಾಯ ಧ್ಯಾಯಿನೇ ।*
*ಧ್ಯೇಯಗಮ್ಯಾಯ ಧಾಮ್ನೇ ಚ ಧಾಮಾಧಿಪತಯೇ ನಮಃ ॥104॥*
*(627-633)*

**627. ಯೋಗರಾಜಾಯ ನಮಃ**

ಯೋಗಗಳಿಗೆ ರಾಜನಾದವನು. ಯೋಗಗಳಿಗೆ ಅಧ್ಯಕ್ಷನು. ಯೋಗಗಳನ್ನು ನಿರ್ವಹಿಸುವವನು. ಯೋಗಗಳಲ್ಲಿ ಅತ್ಯುತ್ತಮ ''ಯೋಗ'' ರೂಪನಾಗಿ ರಾಜತನವನ್ನು ಹೊಂದಿದವನು - ಪರಮೇಶ್ವರನು.

ಯೋಗ ಎಂದರೆ ಪಡೆಯುವುದು. ಪಡೆಯುವ ಸ್ಥಾನ, ಭಾವ, ವಸ್ತುಗಳಲ್ಲೆಲ್ಲಾ ಪರಮಾತ್ಮನಿಂದ ಪಡೆಯುವುವುಗಳೇ ಸರ್ವೋತ್ತಮ. ಪರಮಾತ್ಮನು ಕರುಣಿಸುವ ಯೋಗಗಳಲ್ಲೆಲ್ಲಾ ಭಗವತ್ ಸಾನ್ನಿಧ್ಯವೇ ಸರ್ವೋಚ್ಚವಾದುದು. ಭಕ್ತನಾದವನು ಎಲ್ಲವನ್ನು ತ್ಯಜಿಸಿ, ನೇತಿ, ನೇತಿ ಎಂದು ಅವನು ಕೊಡುವ ಎಲ್ಲವನ್ನು ಬೇಡವೆಂದು ತಿಳಿದು ಕೇವಲ ಕೈವಲ್ಯವನ್ನೇ ಬೇಡುತ್ತಾನೆ - ಸಾರೂಪ್ಯ, ಸಾಯುಜ್ಯ, ಸಾಲೋಕ್ಯ, ಸಾಮೀಪ್ಯ, ಪುನರಾವೃರ್ತಿ ರಹಿತ ಲೋಕವೇ ಯೋಗಗಳಿಗೆಲ್ಲ, ಯೋಗಗಳಲ್ಲೆಲ್ಲಾ ರಾಜರೂಪವಾದುದು - ಯೋಗರಾಜವು - ಪರಮಾತ್ಮನೇ ಯೋಗರಾಜನು - ಅದರಿಂದ ಯೋಗರಾಜಾಯ ನಮಃ.

**628. ಸೌಮ್ಯಾಯ ನಮಃ**

ಸೌಮ್ಯ - ಎಂದರೆ ಪ್ರಿಯವಾದರೂಪ.

ಪರಮಾತ್ಮನು ಸೌಮ್ಯ ಸ್ವರೂಪನು. ಸಕಲ ಜೀವಕೋಟಿಯ ಪ್ರತಿಜೀವಿಗೂ ಬೇಕಾದವನು. ಆಯಾ ಜೀವಿಯ ಮನೋಗುಣಕ್ಕನುಗುಣವಾಗಿ ಬೇಡಿದ ರೂಪದಲ್ಲಿ ದರ್ಶನವನ್ನು ಕೊಡುತ್ತಾನೆ. ಇದು ಅವನ ಪರಮ ಉದಾತ್ತ ಗುಣ. ಯಾರಿಗೆ ಯಾವುದು ಇಷ್ಟವೋ ಅದನ್ನೇ ಕರುಣಿಸುವುದರಿಂದ ಪ್ರತಿಜೀವಿಗೂ ಅವನು ಸೌಮ್ಯ ಸ್ವರೂಪನೇ ಆಗುತ್ತಾನೆ, ಸೌಮ್ಯರೂಪಿಯೇ ಆಗುತ್ತಾನೆ.

ಸೌಮ್ಯ - ಪ್ರಿಯವಾದ ರೂಪ, ಮೃದುವಾದ ಭಾವ.

ಪರಮಾತ್ಮನು ಸಕಲರಿಗೂ ಮೃದುವಾಗಿ ಕಾಣುವವನು. ಪರಮಾತ್ಮನ ಕೃಪಾದೃಷ್ಟಿಯೇ ನಮ್ಮ ಮನಸ್ಸನ್ನು ಎಳೆಯುತ್ತದೆ. ಅವನು ಪರೋಕ್ಷವಾಗಿ ಮತ್ತು ಪ್ರತ್ಯಕ್ಷವಾಗಿ ಕೊಟ್ಟಿರುವ ಅನುಕೂಲತೆಗಳು ಹೇರಳ. ಇಂತಹ ಉದಾತ್ತ ಕರುಣೆಯುಳ್ಳ ಅವನು ಮಹಾಮಹಿಮನು. ಎಲ್ಲರೂ ಬಯಸುವುದು ಆನಂದವನ್ನೇ. ಆ ಪರಮಾದ್ಭುತವಾದ ನಿರಂತರವಾದ ಆನಂದವನ್ನು ಅವನೊಬ್ಬನೇ ಕೊಡುವವನು. ಅವನಿಗೆ ಸಮರು ಯಾರೂ ಇಲ್ಲ. ಅವನಷ್ಟು ಸರ್ವಕಾಲದಲ್ಲಿಯೂ, ಸರ್ವದೇಶದಲ್ಲಿಯೂ, ಸರ್ವಸನ್ನಿವೇಶದಲ್ಲಿಯೂ ಕರುಣಾಮಯರು ಇನ್ನೊಬ್ಬರಿಲ್ಲ. ಇದೇ ಅವನಲ್ಲಿರುವ ಮಹತ್ವ, ಸೌಮ್ಯತೆ, ಸೌಮ್ಯಗುಣ. ಆ ಸೌಮ್ಯಗುಣವೇ ಅವನಾಗಿ ಅವನೇ ಸೌಮ್ಯನಾಗಿದ್ದಾನೆ - ಹೇ ದಯಾಮಯ! ಸೌಮ್ಯಾಯ ತೇ ನಮಃ.

ಎಂತಹ ಉಗ್ರ / ವ್ಯಗ್ರ ಭಾವದ ಸನ್ನಿವೇಶವೇ ಆಗಿದ್ದರೂ, ಸೌಮ್ಯ ಭಾವದಿಂದ ಸ್ಪಂದಿಸಿ ಗೆಲ್ಲಬಹುದು ಮತ್ತು ಶಾಂತತೆ, ತಾಳ್ಮೆ ಹೊರಬರುವಂತೆ ಮಾಡಬಹುದು. ಪ್ರೀತಿ, ವಾತ್ಸಲ್ಯಗಳು ಸೌಮ್ಯತೆಯ ಹೊರಭಾವ, ಮನುಷ್ಯರದು ತೋರಿಕೆಯಾಗಬಹುದು. ಆದರೆ ಪರಮಾತ್ಮನ ಸೌಮ್ಯತೆ ಶಾಶ್ವತವಾದ್ದು ಮತ್ತು ಎಲ್ಲಾ ಕಪಟತೆಯಿಂದ ಸಂದೇಹದಿಂದ ಹೊರತಾದ್ದು ಅದರಿಂದಲೇ ವೈಶಿಷ್ಟತೆ.

**629.** ಧ್ಯಾನಗಮ್ಯಾಯ ನಮಃ

ಧ್ಯಾನ - ಗಮ್ಯಾಯ - ನಮಃ

ಧ್ಯಾನದ ಒಡನೆ ಅವಿಭಾಜ್ಯ ಅಂಗವಾಗಿ ನಡೆಯುವವನು - ಧ್ಯಾನವು ಯಾವ ದಿಶೆಯಲ್ಲಿ ಯಾವ ಭಾವನೆಯಿಂದ ಆಳವಾದ ಶ್ರದ್ಧೆ, ಅವ್ಯಭಿಚಾರಿಣೀ ಭಕ್ತಿಯಿಂದ ಮುಂದುವರಿಯುವುದೋ ಅದರಲ್ಲಿಯೇ ನಡೆಯುವ ಭಗವಂತನು.

ಅಥವಾ

ಧ್ಯಾನದ ಕಾರಣ ಮುಂದುವರಿಯುವವನು - ಮುಂದೆ ಮುಂದೆ ನಡೆಯುತ್ತಾ, ಮುಂದಿನ ಹಂತವನ್ನು ತಿಳಿಸುವವನು - ಪರಮಾತ್ಮನು.

ಧ್ಯಾನ - ಏಕೀಭಾವದಿಂದ ಯಾವುದನ್ನಾದರೂ ಚಿಂತಿಸುವುದೇ ಧ್ಯಾನ. ಹೀಗೆಯೇ ಶ್ರದ್ಧೆಯಿಂದ ಚಿಂತಿಸುತ್ತಿದ್ದರೆ ಮನಸ್ಸು, ಬುದ್ಧಿಗಳು ಅದರಲ್ಲಿಯೇ ಒಳಹೊಕ್ಕು ಮುಂದೆ ಮತ್ತೆಲ್ಲವನ್ನು ಬಿಟ್ಟು ಚಿಂತೆನೆಯಲ್ಲಿಯೇ ಮುಳುಗುತ್ತದೆ. ಧ್ಯಾನವೆಂದು ಹೇಳಿದರೆ ಪರಮಾತ್ಮನನ್ನು ಕುರಿತು ಚಿಂತಿಸುವುದೇ ಧ್ಯಾನ. ಮತ್ತೆ ಉಳಿದೆಲ್ಲವೂ ಚಿಂತನೆಗಳು ಅಷ್ಟೆ. ಈ ಕಾರಣದಿಂದ ಮನಸ್ಸು ಬುದ್ಧಿಗಳು ಪರಮಾತ್ಮನ ರೂಪವೇ ಆಗಿ ಹೋಗುತ್ತವೆ. ಮತ್ತೆ ಬುದ್ಧಿ ಮನಸ್ಸುಗಳು ಒಂದಕ್ಕೊಂದು ಪೂರಕಗಳು, ವಿರೋಧಗಳು. ಇವು ಆತ್ಮದೊಡನೆ ದೈವ ಸಮಾನವಾದವುಗಳು.

ಪ್ರತಿಯೊಂದು ಜೀವಿಯೂ ಇದನ್ನೆ ಕುರಿತು ಪರಮಾತ್ಮನನ್ನು ಸೇರುವ ದಾರಿಯನ್ನು ಹುಡುಕುತ್ತದೆ.

ಧ್ಯಾನವೇ ಪರಮಾತ್ಮನನ್ನು ಸೇರುವ ಮತ್ತು ಅವನಿಂದ ಅದ್ಭುತ ಸಚ್ಚಿದಾನಂದವನ್ನು ಪಡೆಯುಭ ದಾರಿ.

**630. ಧ್ಯಾಯಿನೇ ನಮಃ**

ಧ್ಯಾಯಿನೇ - ಧ್ಯಾನಿಸಲ್ಪಡುವವನು.

ಜೀವಿಗಳು ಧ್ಯಾನಮಾಡುವ ವಸ್ತುಗಳಲ್ಲೆಲ್ಲ ಪರಮಾತ್ಮನೇ ಸರ್ವೋತ್ತಮನು. ಇವನನ್ನು ನಂಬಿದರೆ ಶ್ರೇಯಸ್ಸು ಕರಗತವಾಗುವುದು ಶತಃಸಿದ್ಧ, ಧ್ಯಾನಿಸಲ್ಪಡುವುದಕ್ಕೆ ಅವನೇ ಪುರುಷೋತ್ತಮನು.

ಧ್ಯಾನಿಸುವುದು ಏನನ್ನಾದರೂ ಪಡೆಯುವುದಕ್ಕೆ. ಅತ್ಯಮೂಲ್ಯವಾದದ್ದನ್ನು ಕೊಡುವವನು ಪರಮಾತ್ಮನೊಬ್ಬನೇ. ಆದರಿಂದ ಇವನೊಬ್ಬನನ್ನೇ ಧ್ಯಾಯಿನೇ ನಮಃ ಎಂದು ಹೇಳಬಹುದು.

**631. ಧ್ಯೇಯಗಮ್ಯಾಯ ನಮಃ**

ಧ್ಯೇಯ - ಎಂದರೆ ಏನಾದರೂ ಒಂದು ಸಂಕಲ್ಪರೀತಿ ನಡೆಯುವುದು. ಒಂದು ಗುರಿಯನ್ನಿಟ್ಟು ಕಾರ್ಯಗಳನ್ನು ನಡೆಸುವುದು - ಜೀವನವನ್ನು ನಡೆಸುವುದು. ಉದಾಹರಣೆ - ಸತ್ಯವನ್ನೇ ಹೇಳುವುದು ಜೀವನದ ಉದ್ದೇಶ ಮಾಡಿಕೊಳ್ಳಬಹುದು. ಸಾತ್ವಿಕ ಗುಣಗಳನ್ನು ಪ್ರತಿಪಾದಿಸುವುದೂ ಸಹ ಒಂದು ಉತ್ತಮವಾದ ಧ್ಯೇಯ.

ಭಕ್ತರನ್ನು ಕಾಪಾಡುವುದು ಒಂದು ಧ್ಯೇಯ -

ಧ್ಯೇಯವನ್ನೇ ಇಟ್ಟುಕೊಂಡು ನಡೆಯುವುದು - ಒಂದು ಗುರಿ.

ಆತ್ಮಗಳನ್ನು ಸಂಸಾರ ಸಾಗರದಿಂದ ಉತ್ತೀರ್ಣಮಾಡುವುದು ಭಗವಂತನ ಧ್ಯೇಯ. ಈ ಧ್ಯೇಯವನ್ನೇ ಗುರಿಯಾಗಿ ಇಟ್ಟುಕೊಂಡು ನಿರಂತರ ಜಗತ್ತನ್ನು ನಡೆಸುವುದು ಭಗವಂತನ ಪ್ರತಿಪಾದನೆ.

ಅಥವಾ ಧ್ಯೇಯವನ್ನು ಇಟ್ಟುಕೊಂಡು ಅದನ್ನೆ ಪ್ರತಿಪಾದಿಸಲು ಸಾಧನೆ ಮಾಡುವುದು - ಧ್ಯೇಯಗಮ್ಯನ ಲಕ್ಷಣ, ಇಂತಹದರಲ್ಲಿ ಪರಮಾತ್ಮನನ್ನು ಮೀರಿಸುವವರಿಲ್ಲ. ಏಕೆಂದರೆ ಅವನದು ಶುದ್ಧವಾದ ಆತ್ಮ.

ಜೀವಿಗಳ ಆತ್ಮಗಳು ಸಂಸ್ಕಾರಗಳಿಂದ ಕಲುಷಿತವಾಗಿ ಅಂಟಲ್ಪಟ್ಟಿವೆ. ಅವುಗಳನ್ನು ಶುದ್ಧ ಮಾಡುವುದೇ ಪರಮಾತ್ಮನ ಧ್ಯೇಯ. ಅವುಗಳ ಸಂಸ್ಕಾರಗಳನ್ನು ನಾಶಮಾಡಿ ಆತ್ಮಗಳನ್ನೇ ತನ್ನ ಹತ್ತಿರ ಎಳೆದು ಕೊಳ್ಳುವುದೇ ಪರಮಾತ್ಮನ ಗುರಿ. ಇಂತಹ ಪರಮಾತ್ಮನನ್ನು ನಂಬಿ ಪೂಜೆ, ಧ್ಯಾನ, ಜಪ, ತಪ, ನಾಮಸ್ಮರಣೆಗಳನ್ನು ಮಾಡಿ ಅವನಲ್ಲಿಯೇ ತಲ್ಲೀನನಾಗುವುದು ಆತ್ಮದ ಗುರಿ. ಇದನ್ನು ಅವನೇ ನಡೆಸುತ್ತಾನೆ.

ಯಾವಾಗ ಈ ವಿಚಾರ ನಮ್ಮಲ್ಲಿ ಪರಿಪೂರ್ಣವಾಗಿ ಮನಸ್ಸಿನಲ್ಲಿ ನಿಲ್ಲುವುದೋ ಅದರಂತೆ ನಡೆಯುವುದೋ ಆಗ ಜ್ಞಾನವು ಉತ್ಪನ್ನವಾಗಿದೆ ಎಂದು ತಿಳಿಯಬೇಕು. ಒಂದು ಸಲ ಹೀಗಾದರೆ ಮುಂದುವರಿಯಲು ಅವನೇ ದಯಮಾಡುತ್ತಾನೆ. ಇದೇ ಜೀವನದ ಗುಟ್ಟು.

**632.** ಧಾಮ್ನೇ ನಮಃ

ಧಾಮ - ಎಂದರೆ ವಾಸಸ್ಥಾನ, ವಾಸಸ್ಥಾನದಲ್ಲಿ ವಾಸಿಸುವವನು ಧಾಮ್ನ.

ಒಂದು ರೀತಿಯಲ್ಲಿ ಪ್ರತಿಯೊಂದು ಜೀವಿಯು ಧಾಮ್ನವೇ, ವಾಸಕ್ಕೊಂದು ಸ್ಥಳವನ್ನು ಇರಿಸಿಕೊಂಡಿರುತ್ತದೆ.

ಇದಕ್ಕೂ ಹೆಚ್ಚಿನ ವಾಸಸ್ಥಾನವೆಂದರೆ ಆತ್ಮವಿರುವ ದೇಹ. ದೇಹದಲ್ಲಿರುವವನು ದೇಹಿ - ಆತ್ಮ.

ಶರೀರವೇ ದೇಹ, ಶರೀರದಲ್ಲಿರುವವನು ಶರೀರಿ. ಶರೀರವನ್ನು ಪುರ ಎಂದು ಹೇಳುತ್ತಾರೆ. ಪುರ ಎಂದರೆ ಊರು, ಕೇರಿ, ಏನು ಬೇಕಾದರೂ ಆಗಬಹುದು. ಪುರದಲ್ಲಿ ಎಲ್ಲ ಅವಶ್ಯಕ ವಸ್ತುಗಳು ಸಿಕ್ಕುತ್ತವೆ. ಹಾಗೆ ಶರೀರದಲ್ಲಿ ಆತ್ಮನು ಇರಲು ಅವಶ್ಯಕ ವಸ್ತುಗಳನ್ನು ಶರೀರವನ್ನು ಪೋಷಿಸಲು ಜಗತ್ತು ಮತ್ತು ಪಂಚಭೂತಗಳಿಂದಾದ ಅನ್ನಾದಿ ಆಹಾರಗಳನ್ನು ಪಂಚಕೋಶಗಳನ್ನು ಆತ್ಮನಿಗಾಗಿ ಪರಮಾತ್ಮನು ಭರಿಸಿದ್ದಾನೆ.

ಶರೀರಗಳು ನಶ್ವರ, ಆತ್ಮನು ಪರಮಾತ್ಮನನ್ನು ಸೇರಲು ಅನೇಕ ಶರೀರಗಳನ್ನು ಉಪಯೋಗಿಸಿ ದಾಟಬೇಕು.

ಆದರೆ ಪರಮಾತ್ಮನ ಧಾಮ್ನಗಳು ಆತ್ಮಗಳೇ! ಮತ್ತೆ ಆತ್ಮಗಳು ಅವನ ಅಂಶಗಳಾದ್ದರಿಂದ ಅವನೇ ಎಂದರೆ ಸಂದೇಹವಿಲ್ಲ.

ಆದರೆ ಆತ್ಮಗಳು ಪರಮಾತ್ಮನನ್ನೇ ಧಾಮ್ನ, ಸುರಕ್ಷಿತ ಧಾಮ್ನ ಎಂದು ತಿಳಿದು ಅಲ್ಲಿ ಸೇರಲು ಗುರಿಯಾಗಿರುತ್ತವೆ. ಇದು ಧಾಮ್ನಗಳಲ್ಲೆಲ್ಲ

ಅತ್ಯುತ್ತಮವಾದ್ದು. ಅದರಿಂದ ಅದನ್ನು ಪರಂಧಾಮ್ನ ಎಂದು ಹೇಳುತ್ತೇವೆ.

ಒಟ್ಟಿನಲ್ಲಿ ಧಾಮ ಎಂದರೆ ವಾಸಸ್ಥಾನ. ವಾಸಸ್ಥಾನಗಳಲ್ಲಿ ಉತ್ತಮ ಸ್ಥಾನಗಳು - ಮನೆ, ಮಠ, ಅರಮನೆ, ಛತ್ರಗಳು - ಶರೀರವು ಇವುಗಳಿಗಿಂತ ಉತ್ತಮವಾದ್ದು. ಏಕೆಂದರೆ ಮನೆ, ಛತ್ರಗಳು ಮುಂತಾದವು ಜಡವಸ್ತುಗಳು. ಶರೀರಕ್ಕಿಂತ ಕೀಳಾದ್ದು. ಮತ್ತೆ ಇವುಗಳಲ್ಲಿ ಶರೀರಗಳು ವಾಸಮಾಡುತ್ತಿವೆ. ಶರೀರಗಳು ಇವುಗಳಿಗಿಂತ ಉತ್ತಮವಾದ ಧಾಮ. ಶರೀರಗಳು ಧಾಮಗಳೇ. ಇವುಗಳಲ್ಲಿ ಜೀವಾತ್ಮನು ವಾಸಮಾಡುತ್ತಾನೆ. ಅದರಿಂದ ಜೀವಾತ್ಮನು ಶರೀರಗಳಿಗಿಂತ ಉತ್ತಮವಾದ್ದರಿಂದ ಶರೀರಗಳು ಜಡವಾಸಸ್ಥಾನಗಳಿಗಿಂತ ಉತ್ತಮ.

ಮತ್ತೆ ಆತ್ಮನಿಗಿಂತ ಪರಮಾತ್ಮನು ಉತ್ತಮನಾದ್ದರಿಂದ ಪರಮಾತ್ಮನ ವಾಸಸ್ಥಾನಗಳು ಶರೀರ. ಜಗತ್ತಿನಿಂತ ಉತ್ತಮ. ವಾಸಿಗಳಲ್ಲಿ ಪರಮಾತ್ಮನೇ ಶ್ರೇಷ್ಠನೆಂದಾಯಿತು. ಈ ಕಾರಣಗಳಿಂದ ವಾಸಸ್ಥಾನಗಳಲ್ಲಿ ಅತ್ಯುತ್ತಮವಾದ್ದು ಪರಮಾತ್ಮನ ವಾಸಸ್ಥಾನ. ಅವನ ಲೋಕ, ವಾಸಿಗಳಲ್ಲೆಲ್ಲ ಸರ್ವೋತ್ತಮನು ಪರಮಾತ್ಮ. ಅವನೇ ಪರಮ ಪವಿತ್ರವಾದ ಧಾಮ್ನ.

ಪರಮಾತ್ಮನು ಯಾವಾಗಲೂ ನಮ್ಮ ಆತ್ಮದಲ್ಲಿ ಅಂತರ್ಯಾಮಿಯಾಗಿ ನೆಲಸಿರುವುದರಿಂದ ನಮ್ಮ ಅಂತರಂಗವೂ ವೈಕುಂಠ, ಕೈಲಾಸ ಲೋಕಗಳಿಗೆ ಸಮವಾಯಿತು. ಅಂತರಂಗವೂ ಅತ್ಯುತ್ತಮ ಧಾಮ.

ಆತ್ಮವೇ ಧಾಮ್ನ. ಆತ್ಮನು ಪರಮಾತ್ಮನೇ, ಪರಸ್ಪರ ಪೂರಕಗಳೇ, ಎರಡೂ ಧಾಮ್ನಗಳೇ. ಇಂತಹ ಧಾಮ್ನಗಳಿಗೆ ನಮಸ್ಕಾರಗಳು.

**633. ಧಾಮಾಧಿಪತಯೇ ನಮಃ**

ಧಾಮ - ಎಂದರೆ ವಾಸಸ್ಥಾನ, ಪ್ರತಿಯೊಂದು ವಾಸಸ್ಥಾನಕ್ಕೂ ಒಬ್ಬ ಅಧಿಪತಿಯು ಇರಲೇಬೇಕು, ಇಲ್ಲದಿದ್ದರೆ ಅದು ವಾಸಸ್ಥಾನವೆನಿಸುವುದಿಲ್ಲ. ಯಾವ ವಾಸಸ್ಥಾನದಲ್ಲಿ ಯಾರು ಇರುವರೋ ಅವರೇ ಅದರ ಮೇಲೆ ಅಧಿಕಾರಿಗಳು, ವಾಸಿಗಳು, ಅದರ ಮೇಲೆ ಪೂರ್ಣ ಅಧಿಕಾರ ನಡೆಸುವವರು.

ಈ ರೀತಿ ವಿಮರ್ಶೆಮಾಡಿದಾಗ, ಶರೀರಗಳು ಮನೆಗಳಲ್ಲಿ, ಜೀವಾತ್ಮಗಳು ಶರೀರಗಳಲ್ಲಿ, ಜೀವಾತ್ಮ, ಪರಮಾತ್ಮಗಳು ಅಂತರಂಗದಲ್ಲಿ, ಪರಮಾತ್ಮನು ವೈಕುಂಠ, ಸತ್ಯಲೋಕ, ಕೈಲಾಸ ಮುಂತಾದ ಲೋಕಗಳಲ್ಲಿ, ಜೀವಿಗಳು ಜಗತ್ತಿನಲ್ಲಿ ಜೀವಕೋಟಿಗಳು ಅಖಿಲಾಂಡಕೋಟಿ ಬ್ರಹ್ಮಾಂಡಗಳಲ್ಲಿ ಕ್ರಮವಾಗಿ ವಾಸಿಗಳು ಮತ್ತು ಆಯಾ ವಾಸಸ್ಥಾನಗಳ ಅಧಿಪತಿಗಳು. ಆದರೆ ಅತ್ಯುತ್ತಮವಾದ ನಿರಂತರ ವಾಸಿಗಳೇ ಆತ್ಮಗಳು. ಇವುಗಳಿಗಿಂತ ಪರಮಾತ್ಮನೇ ಉತ್ತಮ ಧಾಮಾಧಿಪತಿಯು. ಇವನನ್ನು ಮೀರಿದವರು ಯಾರೂ ಇಲ್ಲ.

*ಧರಾಧರಾಯ ಧರ್ಮಾಯ ಧಾರಣಾಭಿರತಾಯ ಚ ।*
*ನಮೋ ಧಾತ್ರೇ ವಿಧಾತ್ರೇ ಚ ಸಂಧಾತ್ರೇ ಚ ಧರಾಯ ಚ ॥105॥*
*(634-640)*

**634.** ಧರಾಧರಾಯ ನಮಃ

ಧರಾ - ಭೂಮಾತೆ, ಭೂಮಿ, ಶಿರ, ಗರ್ಭಾಶಯ, ಗರ್ಭ.

ಧರಾಧರ - ಭೂಮಿಯನ್ನು ಧರಿಸಿದವನು - ಮಹಾವಿಷ್ಣು (ಭೂದೇವಿ ಎಂಬ ಅರ್ಥದಂತೆ)

ಭೂಮಿಯನ್ನು ತನ್ನ ತಲೆಯಮೇಲೆ ಹೊತ್ತುಕೊಂಡಿರುವವನು - ಆದಿಶೇಷ, ಶೇಷ.

ಭೂಮಿಯನ್ನು ಪಾಲಿಸುವವನು - ರಾಜ.

ಭೂಮಿಯು ಧರಿಸಿರುವ ವಸ್ತುಗಳು, ಭಾರಗಳು - ಪರ್ವತ.

ಪರಮಾತ್ಮನು ಸಕಲ ಲೋಕಗಳನ್ನು ಸೃಷ್ಟಿಸಿ, ಭೂದೇವಿಯನ್ನು ತನ್ನ ಪ್ರಿಯಳನ್ನಾಗಿ ಮಾಡಿಕೊಂಡನು.

ಭೂಮಿ ಬ್ರಹ್ಮಾಂಡದಲ್ಲಿ ಸ್ಥಿರವಾಗಿ ನಿಲ್ಲಿಸಲು ಆದಿಶೇಷ, ವಾಸುಕಿಯರನ್ನು ನಿಯಮಿಸಿದನು.

ಭೂಮಿಯನ್ನು ಆಳಲು, ಅದರ ಮೇಲಿರುವ ಜೀವಿ, ಚರಾಚರ ವಸ್ತು ಮುಂತಾದವುಗಳಲ್ಲಿ ಪರಸ್ಪರ ವಿರೋಧಬಾರದಂತೆ ಶಾಂತವಾಗಿ ವಾಸಮಾಡಲು ರಾಜರುಗಳನ್ನು ನಿಯಮಿಸಿದನು.

ಮಳೆಬೆಳೆಗಳು ಸಕಾಲದಲ್ಲಿ ನಡೆಯಲು ಪರ್ವತಗಳನ್ನು ಸಮಸ್ತ ಪೂರಕ ವಸ್ತುಗಳನ್ನೂ ದೇವತೆಗಳನ್ನೂ ನಿಯಮಿಸಿದನು. ಈ ಕಾರಣಗಳಿಂದ ಪರಮಾತ್ಮನನ್ನು ಧರಾಧರಾಯ ನಮಃ ಎಂದು ನಮಸ್ಕರಿಸುತ್ತೇವೆ.

ಧರಾ - ಎಂದರೆ ಗರ್ಭ, ಗರ್ಭಾಶಯ. ಈ ಅರ್ಥದಲ್ಲಿ ಭ್ರೂಣದಲ್ಲಿ ಮುಂದೆ ಹುಟ್ಟುವ ಶಿಶುವು ಸುಸೂತ್ರವಾಗಿ ಜೀವಿಸಲು ಒಂದು ಪ್ರಪಂಚವನ್ನೇ ಗರ್ಭದಲ್ಲಿ ಸೃಷ್ಟಿಸಿರುತ್ತಾನೆ. ಗರ್ಭ ಮತ್ತು ಗರ್ಭಾಶಯವು ಶಿಶುವನ್ನು ಪಾಲಿಸುವುದರಿಂದ ಧರಾಧರ ಎಂದಾಯಿತು. ಈ ಗರ್ಭ, ಗರ್ಭಾಶಯಗಳು ಶಿಶುವಿಗೆ ಬಹಳ ಮೂಲ ವಾಸಸ್ಥಾನಗಳು - ಧರಾಧರಾಯ ನಮಃ ಎಂದರೆ ಈ ಗರ್ಭ, ಗರ್ಭಾಶಯಕ್ಕೆ ಸಲ್ಲುತ್ತದೆ. ಇದಕ್ಕೆ ಕೋಟಿ, ಕೋಟಿ ನಮಸ್ಕಾರಗಳನ್ನು ಸಲ್ಲಿಸಿದರೂ ಋಣವು ಪರಿಹಾರವಾಗುವುದಿಲ್ಲ. ಇದು ಎರಡನೆಯ ಪರಮಾತ್ಮನೇ.

**635** ಧರ್ಮಾಯ ನಮಃ

ಪರಮಾತ್ಮನು ಧರ್ಮಸ್ವರೂಪನು, ಧರ್ಮನಿಯಾಮಕನು, ಧರ್ಮಕರ್ತನು,

ಧರ್ಮಗಳನ್ನು ವಿಭಾಗಿಸಿದವನು. ಸಕಲ ಬ್ರಹ್ಮಾಂಡಗಳು, ಲೋಕಗಳು, ಜೀವಕೋಟಿಯ ಜಗತ್ತು, ಎಲ್ಲವೂ ನಿಯಮಿತರೂಪದಲ್ಲಿ ಭೇದಭಾವ ಪಕ್ಷಪಾತ, ತಾರತಮ್ಯ, ವಿರೋಧವಿಲ್ಲದೆ ಶಾಂತಿಯಿಂದ ಸಮಾನವಾಗಿ ವಿಶ್ವದಲ್ಲಿ ಜೀವಿಸಿ ನಿರಂತರ ಕಾಲಚಕ್ರದಲ್ಲಿ ಹರಿಯಲು ಧರ್ಮಗಳನ್ನು ಅವರವರ ಯೋಗ್ಯತೆಗೆ ತಕ್ಕಂತೆ ವಿಧಿಸಿರುತ್ತಾನೆ. ಇದೂ ಸಹ ಪರಮಾತ್ಮನ ಧರ್ಮವೇ!! ಎಂತಹ ಉತ್ತಮ, ದೂರದೃಷ್ಟಿಯ ವಿವೇಚನೆ, ಚತುರತೆ. ಯಾರಿಗೂ ಇದು ತಿಳಿಯಲು ಅಸಾಧ್ಯ. ಇದೂ ಒಂದು ಧರ್ಮವೇ. ಅವನೇ ಧರ್ಮ, ಧರ್ಮವೇ ಅವನು. ಎರಡರಲ್ಲೂ ಧರ್ಮಗಳು ಹಲವು - ಯುಗಧರ್ಮ, ಕಾಲಧರ್ಮ, ಪ್ರಕೃತಿ ಧರ್ಮ, ಮಾಯೆಯ ರೀತಿಗೆ ''ಮಾಯಾ'' ಧರ್ಮ, ಚರಾಚರ ವಸ್ತುಗಳ ಪ್ರತ್ಯೇಕ, ಪ್ರತ್ಯೇಕ ಧರ್ಮಗಳು, ಇತ್ಯಾದಿ. ಎಲ್ಲವನ್ನು ಗ್ರಹಿಸಿ, ನಿರೂಪಿಸಿರುವ ಪರಮಾತ್ಮನ ಶಕ್ತಿ ಅಪಾರವಾದುದು. ಇದೂ ಪರಮಾತ್ಮನ ಧರ್ಮವೇ ಆಗಿರುತ್ತದೆ.

ಧರ್ಮವಿಲ್ಲದೆ ಪರಮಾತ್ಮನಿಲ್ಲ. ಧರ್ಮವಿಲ್ಲದೆ ಪರಮಾತ್ಮನ ಕಾಮನೆಯಾದ ಸೃಷ್ಟಿ, ಸ್ಥಿತಿ, ಲಯಗಳು, ಬ್ರಹ್ಮಾಂಡಗಳು ಇರಲು ಸಾಧ್ಯವಿಲ್ಲ. ಅಂದಮೇಲೆ ಸಕಲಕ್ಕೂ ಧರ್ಮವೇ ಆಧಾರ. ನಿರೂಪಣೆಯಂತೆ ನಡೆಸುವುದು ಧರ್ಮ. ವಿರೋಧವಾಗಿ ನಡೆಸುವುದು ಅಧರ್ಮ.

ಧರ್ಮವಿದ್ದಾಗ ಶಾಂತಿ ಸುಖಗಳು ಸಮೃದ್ಧಿ. ಅಧರ್ಮವಿದ್ದಾಗ ನಾಶ ಖಂಡಿತ. ಆದರಿಂದ ಸರ್ವರೂ ಧರ್ಮವನ್ನು, ಧರ್ಮ ಪರಿಪಾಲನೆಯನ್ನು ಅಪೇಕ್ಷಿಸುವುದು ಮತ್ತು ಪಾಲಿಸುವುದು.

**636. ಧಾರಣಾಭಿರತಾಯ ನಮಃ**

ಧಾರಣ - ಎಂದರೆ ಧರಿಸುವುದು, ನಿಯಂತ್ರಿಸುವುದು, ಸ್ವಾಧೀನತೆ.

ಧಾರಣಾ - ಸ್ಮರಣ ಶಕ್ತಿ, ಏಕಾಗ್ರತೆ, ಸಮಾಧಿ

ಅಭಿರತ - ಸಂಬಂಧಹೊಂದುವುದರಲ್ಲಿ ಆಸಕ್ತನಾಗಿರುವುದು. ಸಕಲ ಲೋಕಗಳನ್ನೂ ಅದರಲ್ಲಿರುವ ಜೀವಕೋಟಿಯನ್ನು ಚರಾಚರ ವಸ್ತುಗಳನ್ನು ಅಖಂಡ ಭೂಮಂಡಲ - ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾಗಿ ನಿಯಂತ್ರಿಸುವುದರಲ್ಲಿ ಅತೀವ ಸ್ಮರಣ ಶಕ್ತಿಯಿಂದ ಪರಮಾತ್ಮನು ಆಸಕ್ತನಾಗಿರುತ್ತಾನೆ. ಏನನ್ನಾದರೂ ಧಾರಣಮಾಡುವುದರಲ್ಲಿ ಸದಾ, ನಿರಂತರ ಪರಮಾತ್ಮನು ಆಸಕ್ತನಾಗಿರುತ್ತಾನೆ. ಇದು ಅವನ ಧರ್ಮ. ಪರಮಾತ್ಮನದು ಅಖಿಲಾಂಡ ಕೋಟಿ ಬ್ರಹ್ಮಾಂಡಗಳು ಮತ್ತು ಅದರೊಳಗಿರುವ ಜೀವಿ ಕೋಟಿಗಳಾದರೆ, ಆತ್ಮನಿಗಾದರೋ ತನ್ನದೇ ಆದ ಭಾವನಾ ಜಗತ್ತಿನಲ್ಲಿರುವ ವಿಶಯಗಳಲ್ಲಿ ಮಗ್ನನಾಗಿರಬೇಕು. ಅವನೂ - ಆತ್ಮನೂ ಸಹಾ ಪರಮಾತ್ಮನನ್ನೇ ಸೇರುವ ಕಾರ್ಯದಲ್ಲಿ ಧಾರಣಾಭಿರತಾನಾಗಿರುತ್ತನೆ.

ಧಾರಣ ಶಕ್ತಿಯು ಧ್ಯಾನ, ಏಕಾಗ್ರತೆ, ಜಪ, ತಪ, ಪೂಜೆಗಳಲ್ಲಿ ಬೇಕಾದ ಅತ್ಯಂತ ಅಮೂಲ್ಯವಾದ ವಸ್ತು. ಇದು ಅಂದರೆ ಸ್ಮರಣ ಶಕ್ತಿ, ಏಕಾಗ್ರತೆ ಇಲ್ಲದಿದ್ದರೆ ಜಪತಪಾದಿಗಳು ಅಡಚಣೆಗಳಿಂದ ಕುಂಟಿತವಾಗುತ್ತವೆ. ಅಭ್ಯಾಸ ಬಲದಿಂದ ಮತ್ತು ಪರಮಾತ್ಮನ ಕೃಪೆಯಿಂದ ಈ ಧಾರಣಾಶಕ್ತಿ ಕ್ರಮೇಣ ಉತ್ಪನ್ನವಾಗಿ ವರ್ಧಿಸುತ್ತದೆ ಮತ್ತು ಆತ್ಮನು ಭವಸಾಗರದಿಂದ ಬಿಡುಗಡೆ ಹೊಂದಲು ಸಹಾಯವಾಗುತ್ತದೆ (ಪ್ರಮುಖ ಪಾತ್ರವಹಿಸುತ್ತದೆ).

**637. ಧಾತ್ರೇ ನಮಃ**

ಧಾತೃ - ಬ್ರಹ್ಮದೇವ, ಧಾ - ಆಧಾರ, ತೃ - ಕೊಡುವವನು.

ಪರಮಾತ್ಮನು ಬ್ರಹ್ಮದೇವನಾಗಿ ಸಕಲ ಲೋಕಗಳನ್ನೂ, ಬ್ರಹ್ಮಾಂಡಗಳನ್ನೂ ಸೃಷ್ಟಿಸುತ್ತಾನೆ.

ಪರಮಾತ್ಮನು ಸಕಲಕ್ಕೂ ಆಧಾರ ಭೂತನಾಗಿ ನಿಲ್ಲುತ್ತಾನೆ ಮತ್ತು ತನ್ನ ಇಚ್ಛೆಯಂತೆ ವಿಶ್ವವನ್ನು ನಡೆಸುತ್ತಾನೆ. ಸಕಲ ದೇಹಗಳಲ್ಲಿಯೂ ತನ್ನದೇ ಆದ ಅಂಶಮಾತ್ರ - ಆತ್ಮವನ್ನು ಇಟ್ಟು ಲೋಕಾಲೋಕಗಳನ್ನು ನಿರಂತರ ನಡೆಸುತ್ತಾನೆ.

ಆತ್ಮನು ದೇಹಗಳಿಗೆ ಆಧಾರನಾಗಿ ಕಾಲಗತಿಯಲ್ಲಿ ನಡೆಸುತ್ತಾನೆ.

ಅದರಿಂದ ಪರಮಾತ್ಮನು ಧಾತೃ, ಆತ್ಮವೂ ಸಹ ಒಂದು ರೀತಿಯಲ್ಲಿ ಧಾತೃವೇ. ಹೀಗೆ ಆಧಾರಭೂತನಾಗಿ ಪರಮಾತ್ಮನು ''ಧಾತಾ'' ಆಗಿರುತ್ತಾನೆ.

ಧಾತೃ - 60 ಸಂವತ್ಸರಗಳಲ್ಲಿ ಒಂದು. ಕಾಲಮಾನವನ್ನು ನಿರ್ದೇಶಿಸುವುದರಿಂದ ಸಂವತ್ಸರವೂ ಪರಮಾತ್ಮನೇ

**638. ವಿಧಾತ್ರೇ ನಮಃ**

ವಿಧಾತೃ - ಬ್ರಹ್ಮದೇವ, ದೈವ, ವಿಶ್ವಕರ್ಮ

ಪರಮಾತ್ಮನು ಬ್ರಹ್ಮನಾಗಿ ಸಕಲವನ್ನು ಸೃಷ್ಟಿಸುತ್ತಾನೆ.

ಧಾತೃ - ವಿಧಾತೃ - ಸಮಾನ ನಾಮಗಳು.

ದೈವರೂಪನಾಗಿ ಸಕಲ ಜೀವಿಗಳ ಆಗು ಹೋಗುಗಳನ್ನು ನಿರಂತರ ವಿಧಿಸುತ್ತಾನೆ (ಹಣೆಬರಹ ಎಂದರೆ ವಿಧಾತೃವಿನ ಬರವಣಿಗೆ). ಸಂಕಲ್ಪಮಾತ್ರದಿಂದ ಸರ್ವವನ್ನು ನಿಗ್ರಹಿಸುತ್ತಾನೆ.

**639. ಸಂಧಾತ್ರೇ ನಮಃ**

ಪರಮಾತ್ಮನ (ಬ್ರಹ್ಮದೇವನ) ಜೊತೆಯಲ್ಲಿರುವುದು, ಪರಮಾತ್ಮನ ಜೊತೆಯಲ್ಲಿ ಆತ್ಮವು, ಆತ್ಮನ ಜೊತೆಯಲ್ಲಿ ನಾನು ಎಂಬುದು ಸದಾ ನಿರಂತರ ಇದ್ದೇ ಇರುತ್ತದೆ. ಆತ್ಮವನ್ನೂ ಪರಮಾತ್ಮನನ್ನೂ ಬೇರಪ್ಪಡಿಸಲು ಸಾಧ್ಯವೇ

ಇಲ್ಲ, ಆಗುವುದೂ ಇಲ್ಲ. ಪರಮಾತ್ಮನೂ ಆತ್ಮನೂ ಒಂದೇ ಆಗಿರುವುದರಿಂದ ಈ ಸಮಸ್ಯೆಯು ಇರುವುದೇ ಇಲ್ಲ. ಸಂಧಾತೃ - ಎಂದರೆ ಆತ್ಮನು ಧಾತೃವಿನ ಸನ್ನಿಧಿಯಲ್ಲಿಯೇ ಇರುವುದು ಎಂದು ಅರ್ಥ. - ಸಂಧಾತ್ರೇ ನಮಃ.

640. ಧರಾಯ ನಮಃ

ತನ್ನ ಉದರದೊಳಗೆ ಸಕಲ ಭೂಮಂಡಲವನ್ನು, ಅಖಿಲಾಂಡ ಕೋಟಿ ಬ್ರಹ್ಮಾಂಡವನ್ನೂ ಅದರೊಳಗಿನ ಎಲ್ಲವನ್ನು ಏಕಕಾಲದಲ್ಲಿಯೇ ಧರಿಸಿರುವವನು - ಪರಮಾತ್ಮ. ಇದು ಅರ್ಜುನನಿಗೆ ಕುರುಕ್ಷೇತ್ರದ ರಣರಂಗದಲ್ಲಿ ಶ್ರೀಕೃಷ್ಣನು ತೋರಿಸಿದ್ದರಿಂದ ವ್ಯಕ್ತವಾಗುತ್ತದೆ. ಮತ್ತೆ ಯಶೋದಾದೇವಿಗೆ ಬಾಲಕೃಷ್ಣನು ತನ್ನ ಬಾಯಿಯಲ್ಲಿ ತೋರಿದನು. ಇವುಗಳಿಂದ ಪರಮಾತ್ಮನ ಅಪರಿಮಿತ ಶಕ್ತಿಯನ್ನು ವ್ಯಕ್ತಪಡುತ್ತದೆ.

ಧರಾ - ಭೂಮಾತೆ. ಪರಮಾತ್ಮನ ಪ್ರೇಯಸಿ. ಭೂದೇವಿಯು ಪರಮಾತ್ಮನ ರೂಪವೇ. ಇದಕ್ಕಾಗಿ ಪರಮಾತ್ಮನು ವರಾಹರೂಪಿಯಾಗಿ ಪಾತಾಳಕ್ಕೆ ಹೋಗಿ ಸಮುದ್ರದ ಮೇಲಕ್ಕೆ ಎತ್ತಿಕೊಂಡುತಂದನು. ಧರೆಗಾಗಿ ಅವನು ಏನೇನು ಕೆಲಸ ಮಾಡಿದನು!! ಅದೂ ಪರಮಾತ್ಮನ ರೂಪವೇ!!

*ದಾಮೋದರಾಯ ದಂತಾಯ ದಾನವಾಂತಕರಾಯ ಚ ।*
*ನಮಃ ಸಂಸಾರವೈದ್ಯಾಯ ಭೇಷಜಾಯ ನಮೋ ನಮಃ ॥106॥*
*(641 - 645)*

641. ದಾಮೋದರಾಯ ನಮಃ

ದಾಮೋದರ ಎನ್ನುವುದು ಮಹಾವಿಷ್ಣುವಿಗೆ. ಸಾಮಾನ್ಯವಾಗಿ ಸರ್ವರಿಗೂ ಪರಿಚಿತವಾಗಿರುವ ಕೇಶವಾದಿ 24 ನಾಮಗಳಲ್ಲಿ ದಾಮೋದರ ಎಂಬುದು ಒಂದು.

ಇಂದ್ರಿಯ ನಿಗ್ರಹ ಮೊದಲಾದ ಸಾಧನೆಗಳಿಂದ ಯಾವ ಉತ್ಕೃಷ್ಟವಾದ ಬುದ್ಧಿಯುಂಟಾಗುವುದೋ ಆ ಬುದ್ಧಿಯಿಂದ ಭಗವಂತನು ತಿಳಿಯಲ್ಪಡುತ್ತಾನೆ. ಆದುದರಿಂದ ಭಗವಂತನಿಗೆ ದಾಮೋದರ ಎಂದು ಹೆಸರು.

ಭಗವಂತನು ಯಶೋದೆಯಿಂದ ಉದರ ಪ್ರದೇಶದಲ್ಲಿ ಹಗ್ಗದಿಂದ ಕಟ್ಟಲ್ಪಟ್ಟಿದ್ದರಿಂದ ಅವನಿಗೆ ದಾಮೋದರ ಎಂದು ಹೆಸರು. ಈ ಸಂಬಂಧದಲ್ಲಿ ಹೀಗೆ ಹೇಳುತ್ತಾರೆ ಎಂದರೆ ಶ್ರೀ ಕೃಷ್ಣನನ್ನು ಪುಟ್ಟ ಕೃಷ್ಣನಾಗಿದ್ದಾಗ ತುಂಟನನ್ನು ಕಟ್ಟಬೇಕೆಂದು ಹಗ್ಗವನ್ನು ತರುತ್ತಾಳೆ. ಉದರ ಪ್ರದೇಶದಲ್ಲಿ ಸುತ್ತಿದಾಗ ಯಾವ ಹಗ್ಗವನ್ನು ಸುತ್ತಿದರೂ ಅದು ಗಂಟು ಹಾಕಲು ಸಾಲದಾಗುತ್ತದೆ. ಹೀಗೆ ಯಶೋದೆಯು ಎಷ್ಟು ಪ್ರಯತ್ನಪಟ್ಟರೂ ಆಗದೆ ಸೋತು ಹೋಗುತ್ತಾಳೆ.

ಪರಮ ಕರುಣಾಮಯನಾದ ಬಾಲಕೃಷ್ಣನು ತನ್ನ ಉದರವನ್ನು ಚಿಕ್ಕದು ಮಾಡಿಕೊಂಡು ಹಗ್ಗದಿಂದ ಕಟ್ಟಿಸಿಕೊಳ್ಳುತ್ತಾನೆ. ಯಶೋದೆಯು ಸಂತೋಷದಿಂದ ಅವನನ್ನು ಮುದ್ದಿಸುತ್ತಾಳೆ.

''ದಾಮ'' ಎಂದು ಲೋಕಗಳಿಗೆ ಹೇಳುತ್ತಾರೆ. ಲೋಕಗಳೆಲ್ಲವೂ ಭಗವಂತನ ಹೊಟ್ಟೆಯಲ್ಲಿರುವುವಾದ್ದರಿಂದ ಭಗವಂತನಿಗೆ ದಾಮೋದರ ಎಂದು ಹೆಸರು. ಇಂತಹ ದಾಮೋದರನಿಗೆ ನಮಸ್ಕಾರಗಳು.

**642.** ದಂತಾಯ ನಮಃ

ದಂತ ಎಂದರೆ ಕೋರೆದಾಡೆ, ಹಲ್ಲು.

ಒಂದು ದಂತವಿರುವ ಗಣಪತಿಗೆ ಏಕದಂತ, ದಂತಿ ಎಂದು ಹೆಸರು, ಇವನಿಗೆ ದಂತಾಯ ನಮಃ ಎಂದು ಹೇಳಿದೆ.

ದಂತ ಎಂದರೆ ಆನೆಯ ಕೋರೆ, ಪರ್ವತದ ಶಿಖರ, ಬಾಣದ ತುದಿ. ಪರಮಾತ್ಮನು ಎಲ್ಲದರಲ್ಲಿಯೂ ಇದ್ದಾನೆ. ದಂತಗಳು ಪುಡಿಮಾಡಲು ಉಪಯೋಗಿಸುವುದರಿಂದ, ಅದರಲ್ಲಿ ಶಕ್ತಿರೂಪನಾಗಿ ಭಗವಂತನು ಇದ್ದಾನೆ. ಅದರಿಂದ ದಂತದಿಂದಲೇ ಕರೆಯಲ್ಪಟ್ಟು ''ದಂತಾಯ ನಮಃ'' ಎಂದಾಗಿ ನಮಸ್ಕರಿಸುತ್ತೇವೆ.

**643.** ದಾನವಾಂತಕರಾಯ ನಮಃ

ದಾನವ - ಅಂತಕರ,

ದಾನವ - ಎಂದರೆ ದನುವಿನ ಮಕ್ಕಳು ದಾನವರು, ರಾಕ್ಷಸರು ಅಥವಾ ತಮೋಗಣ ಪ್ರಧಾನರಾದವರು. ಇವರಲ್ಲಿ ಸಾತ್ವಿಕ ಗುಣಗಳು ಕಡಿಮೆ. ದಾನವರು ದೇವತೆಗಳ ಶತ್ರುಗಳು. ಸದಾ ಇವರ ಯುದ್ಧಗಳಾಗುತ್ತಿರುತ್ತವೆ. ದೇವತೆಗಳನ್ನು ರಕ್ಷಿಸಲು ಭಗವಂತನು ದಾನವರನ್ನು ನಾಶಮಾಡಿದನು. ಅದರಿಂದ ದಾನವಾಂತಕರಾಯ ನಮಃ ಎಂದು ಇವನನ್ನು ನಮಸ್ಕರಿಸುತ್ತೇವೆ.

ತಮೋಗುಣವು ವೃದ್ಧಿಯಾದಾಗ ಮನಸ್ಸು ಬುದ್ಧಿಗಳು ವಿವೇಕತೆಯನ್ನು ಉಪಯೋಗಿಸಿ ತಮಸ್ಸನ್ನು ತುಳಿದು ಸಾತ್ವಿಕತೆಯನ್ನು ಹೆಚ್ಚಿಸುತ್ತವೆ. ಅದರಿಂದ ಮನಸ್ಸು ಬುದ್ಧಿಗಳು ದಾನವಾಂತಕರವಾಗುತ್ತವೆ.

**644.** ಸಂಸಾರವೈದ್ಯಾಯ ನಮಃ

ಸಂಸಾರ - ಎಂದರೆ ಭವಸಾಗರ, ಪ್ರಪಂಚ, ಲೋಕವ್ಯವಹಾರಗಳು,

- ಹೆಂಡತಿ, ಮಕ್ಕಳು, ತಂದೆ ತಾಯಿ, ಎಲ್ಲರೂ ಸೇರಿದರೆ ಸಂಸಾರವೆಂದಾಗುತ್ತದೆ.

- ಎಂದರೆ ಈ ಪ್ರಕೃತಿ, ಪುರುಷ, ಮಾಯೆಗಳಿಂದ ಕೂಡಿದ ಲೋಕದಲ್ಲಿ ಸ್ಪಂದಿಸುವುದು - ಅದರಿಂದ ಬರುವ ತಾಪತ್ರಯಗಳು - ಇವು ಸಂಸಾರ.

ಈ ಸಂಸಾರದಲ್ಲಿರುವ ಕಷ್ಟ, ಕಾರ್ಪಣ್ಯಗಳಿಗೆ ವೈದ್ಯನು ಪರಮಾತ್ಮನೇ.

ಪರಮಾತ್ಮನು ಸಂಸಾರವೈದ್ಯ, ಭವರೋಗ ಭೇಷಜನು. ಭವಸಾಗರದಿಂದ, ಸಂಸಾರ ಸಾಗರದಿಂದ ಅದರಲ್ಲಿರುವ ರೋಗಗಳಿಂದ ಬಿಡಿಸಿಕೊಂಡು ಪರಮಾತ್ಮನನ್ನು ಸೇರುವುದೇ ಪರಮ ಗುರಿ.

ಈ ಜೀವನದಲ್ಲಿ ಸಮಾನ ಮನಸ್ಸನ್ನು ಕೊಡುವುದು ಪರಮಾತ್ಮನ ಕೃಪೆ. ಅವನ ಕರುಣೆಯಿಂದ ಸಮಭಾವವನ್ನು ಹೊಂದುವುದು. ಆತ್ಮನು ಈ ಸಂಸ್ಕಾರಗಳಿಂದ ಬಿಡುಗಡೆ ಹೊಂದಬೇಕಾದರೆ ಪರಮಾತ್ಮನೇ ದಾರಿ ತೋರಿಸಬೇಕು, ಅವನೇ ಸಂಸಾರವೈದ್ಯ.

**645. ಭೇಷಜಾಯ ನಮಃ**

ಭೇಷಜ - ಎಂದರೆ ವೈದ್ಯ, ಉಪಾಯ

ಕಷ್ಟಗಳನ್ನು ಹೋಗಲಾಡಿಸುವವನು ಭೇಷಜ, ಅದಕ್ಕೆ ತಕ್ಕ ಉಪಾಯಗಳನ್ನು ಕೊಡುವವನು ಭೇಷಜ.

ಆತ್ಮನಿಗೆ ಸಂಸ್ಕಾರಗಳಿಂದ ಬಿಡಿಸಿಕೊಳ್ಳಲು ಮಾಡುವ ಉಪಾಯಗಳಿಗೆ ಭೇಷಜ, ಎಂದು ಹೆಸರು.

ಸಕಲ ಜೀವಕೋಟಿಗೂ ಪರಮಾತ್ಮನೇ ವೈದ್ಯನು - ಭೇಷಜನು, ಸಕಲ ಬ್ರಹ್ಮಾಂಡಗಳಿಗೇನೆ ಭೇಷಜನು.

ಅವನನ್ನು ಕುರಿತು ಮಾಡುವ ಚಿಂತನೆಯೇ ದಿವ್ಯೌಷಧ.

*ಸೀರಧ್ವಜಾಯ ಶಾಂತಾಯ ವಾತಾಯಾಪ್ರತಿಮಾಯ ಚ ।*
*ಸಾರಸ್ವತಾಯ ಸಂಸಾರನಾಶನಾಯಾಕ್ಷಮಾಲಿನೇ ॥107॥*

*(646-652)*

**646 ಸೀರಧ್ವಜಾಯ ನಮಃ**

ಸೀರಧ್ವಜಾಯ - ಶ್ರೀದೇವಿಯನ್ನೇ ತನ್ನ ಪ್ರಿಯಳಾಗಿರುವವನು - ಮಹಾವಿಷ್ಣು. ಶ್ರೀ - ಸೀರ ಲಕ್ಷ್ಮಿಯನ್ನೇ ತನ್ನ ಲಾಂಛನವಾಗಿಟ್ಟುಕೊಂಡಿರುವವನು. ''ಶ್ರೀವತ್ಸ'' ವನ್ನೇ ತನ್ನ ವಕ್ಷಸ್ಥಳದಲ್ಲಿರಿಸಿಕೊಂಡಿರುವವನು - ಮಹಾವಿಷ್ಣು.

ತ್ರಿಮೂರ್ತಿಗಳಲ್ಲಿ ಯಾರು ದೊಡ್ಡವರೆಂದು ಪರೀಕ್ಷಿಸುವ ಸಲುವಾಗಿ ಭೃಗುಮುನಿಯನ್ನು ದೇವತೆಗಳು ಕಳಿಸಿದರು.

ಬ್ರಹ್ಮನನ್ನು ಪರೀಕ್ಷಿಸಲು ಬಂದಾಗ ಅವನು ಮಗಳಾದ ಸರಸ್ವತಿಯೊಡನೆ ಸಲ್ಲಾಪದಲ್ಲಿದ್ದುದನ್ನು ಕಂಡು ಭೃಗುಮುನಿಯು ಬ್ರಹ್ಮನಿಗೆ ಪೂಜೆಯೇ ಬೇಡ ಎಂದು ಶಾಪವನ್ನು ಕೊಟ್ಟನು.

ಶಿವನನ್ನು ನೋಡಲು ಹೋದಾಗ ಪಾರ್ವತಿಯೊಡನೆ ಕೈಲಾಸದಲ್ಲಿ ಸರಸದಲ್ಲಿದ್ದದನ್ನು ನೋಡಿದನು. ಇದರಿಂದ ಕೋಪಗೊಂಡು ಶಿವನ ಶರೀರಕ್ಕೆ ಪೂಜೆಯೇ ಬೇಡ ಎಂದು ಶಾಪಕೊಟ್ಟನು.

ನಂತರ ವೈಕುಂಠಕ್ಕೆ ಹೋಗಿ ನಾರಾಯಣನನ್ನು ನೋಡಿದಾಗ ನಾರಾಯಣನು ಲಕ್ಷ್ಮಿಯೊಡನೆ ಇದ್ದದ್ದನ್ನು ನೋಡಿ ಅತಿ ಕೋಪಗೊಂಡು ನಾರಾಯಣನ ವಕ್ಷಸ್ಥಳದಲ್ಲಿ ತನ್ನ ಪಾದದಿಂದ ಮುನಿಯು ತಾಡನ ಮಾಡಿದನು. ಇದಕ್ಕೆ ಪ್ರತಿಯಾಗಿ ನಾರಾಯಣನು ಮುನಿಯ ಹತ್ತಿರ ಬಂದು ಅವನ ಪಾದಕ್ಕೆ ನೋವಾಯಿತೆಂದು ಸೇವೆ ಮಾಡಿದನು ಮತ್ತು ಭೃಗು ಮುನಿಯು ತಾಡಿಸಿದ ವಕ್ಷಸ್ಥಳದಲ್ಲಿ ಅದನ್ನು ಭೃಗು - ಲಾಂಛನವನ್ನಾಗಿ ಮಾಡಿಕೊಂಡು ಗೌರವಿಸಿದನು. ಇದೇ ಸೀರಧ್ವಜಾಯ ನಮಃ ಎಂದು ಗೌರವಿಸಲ್ಪಟ್ಟ ನಮಸ್ಕಾರ.

647. ಶಾಂತಾಯ ನಮಃ

ಶಾಂತ - ಎಂದರೆ ಸಮಾಧಾನ ಚಿತ್ತದಿಂದ ಇರುವುದು, ಯಾವ ರೀತಿಯ ಅಸಮಾಧಾನವೇ ಇಲ್ಲದಿರುವುದು - ಈ ಸ್ಥಿತಿ.

ಸಕಲ ಜೀವಿಗಳ ಆತ್ಮಗಳೂ ಪರಮಾತ್ಮನ ಅಂಶದಿಂದಲೇ ಬಂದಿರುವುದರಿಂದ ಅವನ ಗುಣಗಳು, ಸ್ವಭಾವಗಳು, ಎಲ್ಲವನ್ನು ಮೂಲದಲ್ಲಿ ಹೊಂದಿರುತ್ತವೆ ಎಂದ ಮೇಲೆ ಈ ಅಸಮಾಧಾನ ಸ್ಥಿತಿ, ಮನೋ ವ್ಯಾಕಲ ಇತ್ಯಾದಿಗಳು ಹೇಗೆ ಬರುತ್ತವೆ ಎಂದರೆ ಪರಮಾತ್ಮನಿಗೂ ಆತ್ಮಗಳಿಗೂ ಸಮಾನ ಭಾವವಿದ್ದರೂ ಏನೋ ವ್ಯತ್ಯಾಸವಿರಬಹುದು. ಪರಮಾತ್ಮನು ಯಾವುದಕ್ಕೂ ಅಂಟಿದರೂ ಎಲ್ಲದರಲ್ಲಿ ಒಳ ಹೊಕ್ಕರೂ ಹೊರಗೇ ಉಳಿದಿದ್ದಾನೆ, ಉಳಿದಿರುತ್ತಾನೆ. ಯಾವುದೂ ಅವನನ್ನು ಬಂದಿಸುವುದಿಲ್ಲ. ಎಲ್ಲಕ್ಕೂ ಅವನು ಅತೀತನು ಮೀರಿದವನು.

ಆದರೆ ಆತ್ಮಗಳು ಈ ಜಗತ್ತಿನಲ್ಲಿ ಪರಮಾತ್ಮನ ಸಂಕಲ್ಪದಂತೆ ಮುಳುಗಿರುತ್ತವೆ. ಕ್ಷಣ ಕ್ಷಣಕ್ಕೂ ಸಂಸ್ಕಾರಗಳನ್ನು ಅಂಟಿಕೊಂಡಿರುವಂತೆ ಪ್ರಕೃತಿ, ಪುರುಷ, ಮಾಯೆ ತನ್ನ ಜಾಲದಲ್ಲಿ ಮುಳುಗಿಸುತ್ತದೆ ಮತ್ತು ಪರಮಾತ್ಮನ ಸಂಕಲ್ಪದಂತೆಯೇ ಭವಸಾಗರದಿಂದ ಬಿಡಿಸಿಕೊಳ್ಳುತ್ತವೆ. ಆಗ ಶಾಂತಸ್ಥಿತಿಯನ್ನು ಆತ್ಮವು ಪಡೆಯುತ್ತದೆ.

ಪರಮಾತ್ಮನು ಸದಾ ಶಾಂತನು. ಈತನ ಶಾಂತಿಯು ಯಾವ ಸಮಯದಲ್ಲಿಯೂ ಕದಡುವುದಿಲ್ಲ ಹಾಗೆಯೇ ಆತ್ಮದ ಶಾಂತಿಯು ಇದ್ದೇ

ಇರುತ್ತದೆ. ಸಂಸ್ಕಾರ ಬಲದಿಂದ ಮುಚ್ಚಿ ಹೋಗಿರುತ್ತದೆ. ಸಂಸ್ಕಾರದ ಪರದೆಯು ನಾಶವಾದಾಗ ಆತ್ಮವು ತನ್ನ ಶುದ್ಧ ಶಾಂತಭಾವವನ್ನು ವ್ಯಕ್ತಪಡಿಸುತ್ತದೆ.

648. ವಾತಾಯ ನಮಃ

ವಾತ - ಎಂದರೆ ಗಾಳಿ, ವಾಯು, ವಾತರೋಗ.

ಇಲ್ಲಿ ಪರಮಾತ್ಮನನ್ನು ವಾಯು ಎಂದು ಅರ್ಥ ಮಾಡಬೇಕು, ಪರಮಾತ್ಮನು ವಾಯುಸ್ವರೂಪನು, ವಾಯುದೇವನು, ಪಂಚಪ್ರಾಣಗಳ ರೂಪನು, ವಾಯು ಮಹಾಭೂತನು. ಪಂಚಮಹಾಭೂತಗಳಲ್ಲಿ ಒಂದು - ವಾಯು. ವಾಯುವಿನ ಅವಶ್ಯಕತೆ ಬಹಳವಿದೆ. ವಾಯು ಸಂಚಾರ ನಿಂತು ಹೋದರೆ ಪ್ರಪಂಚವೇ ಜಡವಾಗಿ ಹೋಗುತ್ತದೆ, ಸ್ಥಬ್ಧವಾಗುತ್ತದೆ.

ಹಾಗೆಯೇ ಶರೀರದಲ್ಲಿ ವಾಯುವು ಎಲ್ಲ ಭಾಗಗಳಲ್ಲಿಯೂ ಪ್ರಸರಿಸಿರುತ್ತದೆ. ಪ್ರಾಣ, ಅಪಾನ, ವ್ಯಾನ, ಉದಾನ ಸಮಾನವಾಯುಗಳಾಗಿ ಶರೀರವನ್ನು ಸುಸ್ಥಿತಿಯಲ್ಲಿಟ್ಟಿರುತ್ತದೆ. ಸೂಕ್ಷ್ಮದೇಹದಲ್ಲಿಯೂ ವಾಯು ಸ್ವರೂಪವಾಗಿ ನಿಂತಿರುತ್ತದೆ.

ಆದರಿಂದ ಪರಮಾತ್ಮನು ವಾಯುವೇ! ಸಕಲ ಬ್ರಹ್ಮಾಂಡವನ್ನು, ಅದರೊಳಗಿರುವ ಸಕಲ ಚರಾಚರವಸ್ತುಗಳನ್ನು ಮತ್ತು ಜೀವಕೋಟಿಯನ್ನು ನಡೆಯುವಂತೆ ವಾಯುವು ಮಾಡುತ್ತದೆ. (ಇದು ಸ್ಥೂಲ ವಿವರ) ಹಾಗೆಯೇ ಪ್ರತಿ ಜೀವಿಯ ದೇಹದಲ್ಲಿಯೂ ಸೇರಿ ಅದನ್ನು ಸೇವಿಸುತ್ತದೆ. (ಇದು ಸೂಕ್ಷ್ಮ ವಿವರ.) ಮತ್ತೂ ಮುಂದೆ ಹೋದರೆ ಪ್ರತಿ ಸೂಕ್ಷ್ಮ ಶರೀರದಲ್ಲಿಯೂ ನಿರಂತರ ಸೇವೆ ಮಾಡುತ್ತ ಆತ್ಮದೊಡನೆ ಇರುತ್ತದೆ (ಇದು ಸೂಕ್ಷ್ಮತಮ ವಿವರ.)

ಪರಮಾತ್ಮನ ಸಂಕಲ್ಪವು ಅತಿ ಗಹನವಾದುದು.

ವಾತ - ಎಂದರೆ ರೋಗ ಎಂದು ಅರ್ಥಮಾಡಿದರೆ -

ಮೃತ್ಯುದೇವತೆ - ಪರಮಾತ್ಮನ ರೂಪ, ಅವನ ಸಂಕಲ್ಪದಂತೆಯೇ ಸಕಲ ಜೀವಿಗಳಿಗೂ ದೇಹದಿಂದ ಸೂಕ್ಷ್ಮ ದೇಹವನ್ನು ಮತ್ತು ಕಾರಣ ಶರೀರವನ್ನೂ ಹರಣ ಮಾಡುತ್ತದೆ. ಸಕಲ ಚರಾಚರ ವಸ್ತುಗಳನ್ನು ನಾಶಮಾಡುತ್ತದೆ. ಕಾರಣವೇನೆಂದರೆ ಆತ್ಮನು ಈ ಕಾಲಮಾಪನದಲ್ಲಿ ಕಲ್ಪಾದಿಯಿಂದ ಕಲ್ಪಾಂತದವರೆಗೆ ಕೋಟ್ಯಾನುಕೋಟಿ ದೇಹಗಳನ್ನು ತನ್ನ ತನ್ನ ಸಂಸ್ಕಾರಕ್ಕೆ ತಕ್ಕಂತೆ ಧರಿಸಬೇಕು. ಇದು ಭಗವತ್ಸಂಕಲ್ಪ, ಸೃಷ್ಟಿಧರ್ಮ, ಸೃಷ್ಟಿ ನಿಯಮ.

ಮೃತ್ಯು ದೇವತೆಯೂ ಬೇಕೇ ಬೇಕು, ಮೃತ್ಯು ದೇವತೆಯು ಜೀವಿಗಳು ತನ್ನನ್ನು ದೂರುವರೆಂದು ದುಃಖಪಟ್ಟು ಅಶ್ರುಗಳನ್ನು ಸುರಿಸಿದಳು. ಆಗ

ಬ್ರಹ್ಮನು "ಹೇ ಮೃತ್ಯು ದೇವತೆಯೇ! ಇದಕ್ಕೆ ನೀನು ಸಂಕಟ ಪಡಬೇಡ. ನಿನ್ನ ದುಃಖಾಶ್ರುಗಳು ಬಗೆ ಬಗೆಯಾದ ರೋಗ ರುಜಿನಗಳಾಗಿ ಜೀವಿಗಳ ದೇಹವನ್ನು ನಾನಾ ಕಾರಣಗಳಿಂದ ಆತ್ಮಗಳಿಂದ ಬೇರ್ಪಡಿಸುತ್ತವೆ. ಇದರಿಂದ ಲೋಕವು ರೋಗಗಳಿಂದ ಮರಣ ಹೊಂದಿದರೆಂದೇ ಮೋಹಪಡುತ್ತವೆ. ಆಗ ನಿನ್ನ ನಾಮವನ್ನಾಗಲೀ ಅಥವಾ ನಿನ್ನನ್ನಾಗಲೀ ಗುರಿ ಮಾಡುವುದಿಲ್ಲ" ಎಂದು ವರವನ್ನು ಕೊಟ್ಟು ಮೃತ್ಯು ದೇವತೆಯನ್ನು ಈ ಕೆಲಸಕ್ಕೆ ನಿಯಮಿಸಿದನು - ಇದು ಅತ್ಯಾವಶ್ಯಕ - ಜಗತ್ತಿನ ನಿರಂತರ ನಡೆಯುವುದಕ್ಕೆ ಪರಮಾತ್ಮನು ವಿಧಿಸಿರುವ ರೀತಿ - ಆವನಿಗೆ ಈ ಕಾರಣ ವಾತಾಯ ನಮಃ ಎಂಬ ನಾಮವು ಸಲ್ಲುತ್ತದೆ.

**649.** ಅಪ್ರತಿಮಾಯ ನಮಃ

ಅಪ್ರತಿಮ - ಎಂದರೆ ಎದುರಿಲ್ಲದವನು, ತನಗೆ ಪ್ರತಿರೂಪನಿಲ್ಲದವನು.

ಸಕಲ ರೀತಿಯಲ್ಲಿಯೂ ಸಮಾನವಿಲ್ಲದವನು ಮತ್ತು ಮೀರಿದವನು - ಪರಮಾತ್ಮನೇ.

ಸೃಷ್ಟಿ, ಸ್ಥಿತಿ, ಲಯ, ಪ್ರಪಂಚವು ನಿರಂತರ ನಡೆಯುವಂತೆ ಮಾಡುವುದು - ಮುಂತಾದುವುಗಳಲ್ಲಿ ಪರಮಾತ್ಮನು ಅಪ್ರತಿಮನು.

ಏನೇ ರೀತಿಯಲ್ಲಿಯೂ ಸಂದೇಹರಹಿತನಾಗಿ ಅಪ್ರತಿಮನು.

ಪ್ರತಿಮೆ - ಎಂದರೆ ರೂಪ, ಅ - ಇಲ್ಲದವನು. ರೂಪಗಳೇ ಇಲ್ಲದವನು - ನಿರಾಕಾರನು, ಆಕಾರರಹಿತನು - ಅಂತಹ ಪರಮಾತ್ಮನು. ಆತ್ಮನೂ ಸಹ ಅಪ್ರತಿಮನೇ. ಆದರೆ ಆತ್ಮವು ಅಪ್ರತಿಮತೆಯನ್ನು ಕ್ಲುಪ್ತ ರೀತಿಯಲ್ಲಿ ಹೊಂದಿರುತ್ತದೆ.

**650.** ಸಾರಸ್ವತಾಯ ನಮಃ

ಸಾರ - ಎಂದರೆ ಸಕಲ ವಸ್ತು, ಭಾವಗಳ ಮೂಲವಾದ, ಮುಖ್ಯವಾದ ಭಾವ,

ಈ ಸಾರದ ಭಾವವೇ ಸಾರಸ್ವತ,

ಅಥವಾ ಸರಸ್ವತಿಯ ಭಾವ ಸಾರಸ್ವತ, (ಎಂದರೆ ವಿದ್ಯೆ)

ವಿದ್ಯೆ, ವಾಕ್ಚಾತುರ್ಯ, ವಾಕ್, ಇವೇ ಪರಮಾತ್ಮ. ಸಕಲ ವೇದಗಳ ಸಾರವೇ "ಬ್ರಹ್ಮಸತ್ಯಂ, ಜಗನ್ಮಿಥ್ಯಾ" ಇದೇ ಪರಮಾತ್ಮ - ಸಾರಸ್ವತನು.

ಸಾರಸ್ವತ - ದಿಲ್ಲಿಯ ಪಶ್ಚಿಮಕ್ಕೆ ಮಾರವಾಡ ಮತ್ತು ಮತ್ಸ್ಯಗಳ ನಡುವಿನ ಪ್ರದೇಶ.

ಸಾರಸ್ವತ - ಒಂದು ಬ್ರಾಹ್ಮಣರ ಪಂಗಡ, ಗೌಡಸಾರಸ್ವತ, ಸಾರಸ್ವತ ಶಾಖೆ.

ಪರಮಾತ್ಮನ ರೂಪ, ಕಾಲ, ದೇಶ ಭೇದಗಳೆ ಅಪರಿಮಿತ, ಅಗಣಿತ.

**651. ಸಂಸಾರನಾಶನಾಯ ನಮಃ**

ಸಂಸಾರ - ಎಂದರೆ ಜಗತ್ತು, ಜಗತ್ತಿನಲ್ಲಿ ಏನೇನಿದೆಯೋ ಎಲ್ಲವೂ ಸೇರಿರುತ್ತದೆ.

ಸಂಸಾರವು ಜೀವಿಗಳಿಗೆ ಅತ್ಯವಶ್ಯಕವಾದ್ದು, ಏಕೆಂದರೆ ದೇಹಗಳನ್ನು ಭವಸಾಗರವನ್ನು ಸೇರಿರುವ ಆತ್ಮಗಳು ದಾಟಲು ಇದು ಬೇಕಾದ ದೋಣಿ.

ಆತ್ಮನಿಗೆ ಮುಕ್ತಿಯನ್ನು ಕೊಡಬೇಕಾದರೆ ಭಗವಂತನು ಆತ್ಮನಿಗೆ ಅಂಟಿಕೊಂಡಿರುವ ಸಂಸ್ಕಾರಗಳನ್ನು ನಾಶಮಾಡಬೇಕು. ಹಾಗೆಯೇ ಇತರ ತತ್ವಗಳಾದ ಮಹತ್, ಚಿತ್ತ ಬುದ್ಧಿ, ಮನಸ್ಸು, ಅಹಂಕಾರ, ಇಂದ್ರಿಯಗಳು, ಪಂಚಪ್ರಾಣಗಳು - ಇವುಗಳನ್ನು ಕ್ರಮಕ್ರಮವಾಗಿ ಬೇರ್ಪಡಿಸಬೇಕು. ಈ ಕೆಲಸವನ್ನು ಪರಮಾತ್ಮನೇ ಮಾಡಬೇಕು.

ಸಂಸಾರವನ್ನು ಮಾಡುವವನೂ ಪರಮಾತ್ಮನೇ. ಅದನ್ನು ನಾಶಮಾಡುವವನೂ ಪರಮಾತ್ಮನೇ. ಅದನ್ನ ನಡೆಸುವವನೂ ಪರಮಾತ್ಮನೇ. ಇವೆಲ್ಲವನ್ನು ಅವನೇ ಮಾಡಿದರೆ, ಅದನ್ನೂ ಏಕೆ ಸೃಷ್ಟಿಸಬೇಕು? ಯಾರ ಇಷ್ಟಕ್ಕಾಗಿ ಮಾಡಬೇಕು? ಎನಿಸುತ್ತದೆ. ಇದಕ್ಕೆ ಉತ್ತರ - ಅವನು ಅವನ ಸಂಕಲ್ಪದಂತೆ ಮಾಡುತ್ತಾನೆ, ಅಷ್ಟೆ!! ಎಲ್ಲಾ ಆತ್ಮಗಳೂ ಸಕಲ ಬ್ರಹ್ಮಾಂಡ ಕೋಟಿಯೂ ಅವನ ಅಧೀನ!!

**652. ಅಕ್ಷಮಾಲಿನೇ ನಮಃ**

ಅಕ್ಷಮಾಲೆಯನ್ನು ಧರಿಸಿರುವವನು, ಪರಮಾತ್ಮನು ಧರಿಸಿರುವ ಮಾಲೆಗಳು ಅಗಣಿತ, ಅಪರಿಮಿತ.

ರುದ್ರಾಕ್ಷಿ ಮಾಲೆಯನ್ನು ಧರಿಸಿರುವವನು.

ಅಕ್ಷಯಮಾಲೆಯನ್ನು ಧರಿಸಿರುವವನು - ಪರಮಾತ್ಮ.

ವನಮಾಲೆಯನ್ನು ಧರಿಸಿರುವವನು.

ಅಕ್ಷ - ಎಂದರೆ ಇಂದ್ರಿಯ. ಇಂದ್ರಿಯಗಳನ್ನೇ ಮಾಲೆಯಾಗಿ ಧರಿಸಿರುವವನು - ಸಕಲವೂ ಪರಮಾತ್ಮನೇ ಆಗಿರುವುದರಿಂದ ಅವನ ಮಾಲೆಯೂ ಅವನನ್ನೇ ಒಡಗೊಂಡಿದೆ. ಅದರಿಂದ ಅವನು ''ಅಕ್ಷಮಾಲಿನೇ ನಮಃ'' ಎಂದು ನಮಸ್ಕಾರಗಳು.

*ಅಸಿಚರ್ಮಧರಾಯೈವ ಷಟ್ಕರ್ಮನಿರತಾಯ ಚ ।*
*ತ್ರಿಕಾರ್ಯಾಯ ಸುಕಾರ್ಯಾಯ ಪರಕಾರ್ಯವಿಘಾತಿನೇ ।।108।।*

*(653-657)*

**653. ಅಸಿಚರ್ಮಧರಾಯ ನಮಃ**

ಅಸಿ - ಎಂದರೆ ಖಡ್ಗ,

ಅಸಿಚರ್ಮವನ್ನು ಧರಿಸಿರುವವನು, ಶಿವನು ಹುಲಿಯ ಚರ್ಮವನ್ನು ಧರಿಸಿರುತ್ತಾನೆ. ಅಸಿಚರ್ಮಧರ - ಎಂದರೆ ಶಿವ. ಪರಮಾತ್ಮನು ಶಿವನ ರೂಪದಲ್ಲಿ ವಸ್ತ್ರದ ಬದಲು ಚರ್ಮವನ್ನು ಧರಿಸುತ್ತಾನೆ ಅದರಿಂದ ಅಸಿಚರ್ಮಧರಾಯ ನಮಃ ಎಂದು ಹೇಳಿದೆ.

ಖಡ್ಗದ ಗುಣ - ಏನನ್ನಾದರೂ ನಿಷ್ಕರುಣೆಯಿಂದ ಕತ್ತರಿಸಿಬಿಡುತ್ತದೆ. ಜೀವಿಗಳ ಭವಸಾಗರದ ಸಂಪರ್ಕವನ್ನು ಕತ್ತರಿಸಿ ತನ್ನಲ್ಲಿ ಜೀವಿಗಳನ್ನು ಸೇರಿಸಿಕೊಳ್ಳಲು ಪರಮಾತ್ಮನು ನಿರಂತರ ಇಚ್ಛಿಸುತ್ತಾನೆ. ಅದರಿಂದ ಇವನು ಅಸಿಚರ್ಮಧರ.

**654. ಷಟ್ಕರ್ಮನಿರತಾಯ ನಮಃ**

ಷಟ್ - ಆರು, ಕರ್ಮ - ಕಾರ್ಯಗಳನ್ನು ಮಾಡುವುದರಲ್ಲಿ

ನಿರತ - ಆಸಕ್ತಿಯುಳ್ಳವನು,

ಆರು ವಿಧವಾದ ಕಾರ್ಯಗಳು - 1. ಸೃಷ್ಟಿ, 2. ಸ್ಥಿತಿ, 3. ಲಯ, 4. ಆತ್ಮಗಳನ್ನು ತನ್ನ ದೇಹದಿಂದ ಹೊರಹಾಕುವುದು, 5. ಆತ್ಮಗಳನ್ನು ಮಾಯೆಯಲ್ಲಿ ಮುಳುಗಿಸುವುದು, 6. ಆತ್ಮಗಳನ್ನು ಭವಸಾಗರದಿಂದ ಬಿಡಿಸಿ ತನ್ನಲ್ಲಿಯೇ ಅಡಗಿಸಿಕೊಳ್ಳುವುದು

ಅಥವಾ

ಆರು ವಿಧವಾದ ಕಾರ್ಯಗಳು : ಹೀಗೂ ವಿವರಿಸಬಹುದು - 1-3. ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳನ್ನು ನಡೆಸುವುದು, 4-6. ಪ್ರಕೃತಿ, ಪುರುಷ, ಮಾಯೆ ಎಂದು ವಿಭಾಗಿಸಿ ಕಾರ್ಯ ಮಾಡುವುದು. ಪರಮಾತ್ಮನು ಈ ಆರು ವಿಧವಾದ ಕಾರ್ಯಗಳಲ್ಲಿ ನಿರಂತರ ಮಗ್ನನಾಗಿದ್ದು ಈ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ಕಾಲಚಕ್ರದಲ್ಲಿ ಯುಗಚಕ್ರದಲ್ಲಿ ತಿರುಗಿಸುತ್ತಿರುತ್ತಾನೆ. ಇದು ಅವನ ಸಂಕಲ್ಪ ಮಾತ್ರದಿಂದಲೇ ಅವನ ಕಾಮನೆಯಂತೆ ನಡೆಯುತ್ತದೆ. ತಾನೇ ಸೂತ್ರಧಾರನಾಗಿ ಎಲ್ಲವನ್ನು ನಡೆಸಿದರೂ ಅವುಗಳನ್ನು ಮೀರಿ ಹೊರಗೇ ಇರುತ್ತಾನೆ, ಅಂಟಿಕೊಳ್ಳುವುದಿಲ್ಲ. ಇದು ಅವನ ವೈಶಿಷ್ಟ್ಯ. ಅವನೇ ಷಟ್ಕಾರ್ಯನಿರತನು - ಅದಕ್ಕೇ ಈ ನಾಮ.

**655. ತ್ರಿಕಾರ್ಯಾಯ ನಮಃ**

ತ್ರಿ - ಮೂರು, ಕಾರ್ಯ - ಕಾರ್ಯಗಳನ್ನು ನಡೆಸುವವನು,

ಪರಮಾತ್ಮನು ಸೃಷ್ಟಿ, ಸ್ಥಿತಿ ಮತ್ತು ಲಯಗಳೆಂಬ ಮೂರು ಕಾರ್ಯಗಳನ್ನು

ನಿರಂತರ ನಡೆಸುವುದರಿಂದ ಅವನಿಗೆ ತ್ರಿಕಾರ್ಯಾಯ ನಮಃ ಎಂದು ನಮಸ್ಕರಿಸಿದೆ,

ಅಥವಾ -

ಭೂತ, ಭವಿಷ್ಯದ್ವರ್ತಮಾನ ಕಾಲಗಳನ್ನು ನಿಯಮಿಸಿ ನಡೆಸುವವನು - ಪರಮಾತ್ಮ,

ಅಥವಾ

ಹದಿನಾಲ್ಕು ಲೋಕಗಳನ್ನು ಸ್ವರ್ಗ, ಮರ್ತ್ಯ, ಪಾತಾಳಗಳೆಂದು ಪ್ರಮುಖ ಪ್ರಭೇದ ಮಾಡಿರುವವನು,

ಅಥವಾ

ಸೃಷ್ಟಿಯನ್ನು ಊರ್ಧ್ವಲೋಕಗಳು, ಭೂಲೋಕ, ಅಧೋ ಲೋಕಗಳೆಂದು ವಿಭಾಗಿಸಿರುವವನು.

ಅಥವಾ

ಸಾಕಾರ ಪರಬ್ರಹ್ಮ, ನಿರಾಕಾರ ಪರಬ್ರಹ್ಮ, ಇವುಗಳಿಂದ ಅತೀತನಾದವನು ಎಂದು ಮೂರು ಭಾಗಮಾಡಿಕೊಂಡಿರುವವನು,

ಪರಮಾತ್ಮನ ಕಾರ್ಯಗಳೆಲ್ಲ ವಿಶೇಷ ಮತ್ತು ವಿಸ್ಮಯಕಾರಿ.

**656. ಸುಕಾರ್ಯಾಯ ನಮಃ**

ಸು - ಎಂದರೆ ಒಳ್ಳೆಯ, ಕಾರ್ಯ - ಕೆಲಸಗಳನ್ನು ಮಾಡುವವನು. ಪರಮಾತ್ಮನು ಏನು ಮಾಡಿದರೂ ಅವನ ಸಂಕಲ್ಪದಂತೆಯೇ ಜೀವಿಗಳ ಒಳ್ಳೆಯದಕ್ಕೆ ಮಾಡುತ್ತಾನೆ. ದೂರ ದೃಷ್ಟಿಯಿಂದ ಮತ್ತು ನಮ್ಮ ಬುದ್ಧಿ ಮನಸ್ಸುಗಳನ್ನು ಮೀರಿ ಮಾಡುವುದರಿಂದ ಅವೆಲ್ಲವೂ ಸುಕಾರ್ಯಗಳೇ ಆಗಿರುತ್ತವೆ. ನಾವು ತಿಳಿಯದೆ ವಿವಿಧ ಅರ್ಥಗಳನ್ನು ಮಾಡುತ್ತೇವೆ, ಇದು ಸರ್ವಥಾ ಖಂಡನೀಯ.

**657. ಪರಕಾರ್ಯವಿಘಾತಿನೇ ನಮಃ**

ಪರ - ಎಂದರೆ ಬೇರೆ, ಉತ್ತಮ; ಪರಮಾತ್ಮ, ಮೋಕ್ಷ; ಎರಡನೆಯದು ಪರಕ್ಕೆ ಸಂಬಂಧಪಟ್ಟ ಕಾರ್ಯಗಳು, ಯತ್ನಗಳು - ಪರಕಾರ್ಯ,

ವಿಘಾತ - ಎಂದರೆ ಅಡೆತಡೆಗಳು, ನಾಶ,

ಪರಮಾತ್ಮನು ತನ್ನ ಸಂಕಲ್ಪಕ್ಕೆ ಅಡ್ಡಿಬರುವ ಬೇರೆ ಯಾವ ಮತ್ತು ಯಾರ ಸಂಕಲ್ಪ ಮತ್ತು ಇಚ್ಛೆಗಳನ್ನು ಹಿಂದುಮುಂದಿಲ್ಲದೆ ನಾಶಮಾಡುವವನು.

ಎಂದಮೇಲೆ ಜೀವಿಗಳು, ದೇಹದಲ್ಲಿರುವಾಗ, ನಾನು ಎಂಬ ಅಹಂಭಾವಗಳಿಂದ ಮದವೇರಿ ತಮ್ಮ ಇಚ್ಛೆಗಳನ್ನು ಉತ್ಕಟವಾಗಿ

ಈಡೇರಿಸಿಕೊಳ್ಳಬೇಕೆಂದು ಪ್ರಯತ್ನಪಟ್ಟಾಗ, ಒಂದುವೇಳೆ ಅವುಗಳು ಪರಮಾತ್ಮನ ಸಂಕಲ್ಪಕ್ಕೆ ಬದಲಾಗಿದ್ದರೆ ಅವುಗಳನ್ನು ಪರಮಾತ್ಮನು ನಾಶಮಾಡುತ್ತಾನೆ. ಅವನ ಇಚ್ಛೆಯಂತೆಯೇ ಈ ಜಗತ್ತಿನಲ್ಲಿ ಸರ್ವವೂ ನಡೆಯಬೇಕು ಮತ್ತು ನಡೆಯಲೇ ಬೇಕು, ಬೇರೆ ದಾರಿಯೇ ಇಲ್ಲ. ಆದರಿಂದ ಶಾಂತಿ, ಸಹನೆ ಹೊಂದಬೇಕಾದರೆ ಪರಮಾತ್ಮನ ಇಚ್ಛೆಯೇ ನಮ್ಮ ಇಚ್ಛೆ, ನಮ್ಮದೇ ಆದ ಬೇರೆ ಯಾವ ಇಚ್ಛೆಯೇ ಇಲ್ಲ ಎಂದು ಅವನಿಗೆ ಶರಣಾಗತರಾಗಬೇಕು.

ಇದೇ ಉತ್ತಮವಾದ ಜೀವನ, ಅವನನ್ನು ಸೇರುವ ಬಗೆ, ಸಂದೇಹವೇ ಬೇಡ, ಆದರಿಂದ ಇವನಿಗೆ ಪರಕಾಯವಿಘಾತಿನೇ ನಮಃ ಎನ್ನುವುದು ಬಹಳ ಸೂಕ್ತ.

ಅಥವಾ ಪರಮಾತ್ಮನನ್ನು ಹೊಂದಲು ಬರುವ ತಡೆಗಳನ್ನು ನಾಶಮಾಡುವವನು - ಎಂದೂ ಹೇಳಬಹುದು.

*ಸುಶರ್ಮಣೇ ಮನ್ಮಥಾಯ ನಮೋ ಧರ್ಮಾಯ ವರ್ಮಿಣೇ ।*
*ಕರಿಚರ್ಮವಸಾನಾಯ ಕರಾಲವದನಾಯ ಚ ॥109॥ (658-663)*

658. ಸುಶರ್ಮಣೇ ನಮಃ

ಶರ್ಮ - ಎಂದರೆ ಹೆಸರು, ಸಂಭೋದನೆ.

ಸುಶರ್ಮ - ಒಳ್ಳೆಯ ಹೆಸರು, ನಯವಾಗಿ ಪ್ರೀತಿಯಿಂದ ಕರೆಯುವುದು, ವಿಧೇಯತೆಯಿಂದ ಕರೆಯುವುದು.

ಪರಮಾತ್ಮನ ನಾಮಗಳು ಒಂದಕ್ಕಿಂತ ಒಂದು ಮಧುರವಾದುವುಗಳು. ಪ್ರಿಯವಾದುವುಗಳು ಮತ್ತು ಉಚ್ಚರಿಸಲು ಇಷ್ಟವಾದವುಗಳು. ಅವನೂ ಸಹ ನಾಮಮಾತ್ರವಲ್ಲ, ಕಾರ್ಯದಲ್ಲಿಯೂ ಮಧುರನು, ಪ್ರಿಯನು, ಸರ್ವರಿಗೂ ಬೇಕಾದವನು.

ಮಾತ್ರವಲ್ಲ, ಸಾಮಾನ್ಯವಾಗಿ ಅವನ ಹೆಸರಿನ ಮನನ ಸದಾ ಇರಲಿ ಎಂದು ಮಕ್ಕಳಿಗೆ, ವಸ್ತುಗಳಿಗೆ ತಮಗೆ ಸಂಬಂಧಪಟ್ಟದ್ದು ಏನೇ ಆಗಲಿ ಅವುಗಳಿಗೆ ಅವನ ನಾಮವನ್ನಾಗಲೀ, ನಾಮದ ಭಾವವನ್ನಾಗಲೀ ಇಡುತ್ತೇವೆ. ಮನಸ್ಸಿಗೆ ಸದಾ ಶಾಂತಿಯನ್ನು ಈ ಹೆಸರುಗಳು ಕೊಡುತ್ತವೆ. ಮನನ ಮಾಡಿದರಂತೂ, ಅರ್ಥವನ್ನು ಮನನ ಮಾಡಿದರೆ ಪರಮಶಾಂತಿಯನ್ನು ಕೊಡುತ್ತವೆ. ಅದಕ್ಕೆ ಅವನಿಗೆ ಸುಶರ್ಮಣೇ ನಮಃ ಎನ್ನುತ್ತೇವೆ.

659. ಮನ್ಮಥಾಯ ನಮಃ

ಪರಮಾತ್ಮನು ಮನ್ಮಥನು, ಮದನನು, ಸರ್ವರನ್ನು ಆಕರ್ಶಿಸುವ

ರೂಪವುಳ್ಳವನು, ಕಾಮನು, ಕಾಮಿತನು. ಸುಂದರವಾದ ನಯನ ಮನೋಹರವಾದ ರೂಪವುಳ್ಳವನು, ಮಹಾವಿಷ್ಣುವು ಬಹಳ ಸುಂದರಾಕಾರವುಳ್ಳವನು. ಎಲ್ಲರನ್ನೂ - ದೇವ ದೇವತೆಗಳನ್ನು ಆಕರ್ಶಿಸುವವನು.

ಮನ್ಮಥ - ಕಾಮದೇವ, ವಿಷ್ಣುವಿನ ಮಗ, ರತಿದೇವಿಯ ಪ್ರಿಯನು. ಮನ್ಮಥ ಶಿವನ ತಪಸ್ಸನ್ನು ಭಂಗಮಾಡಲು ಹೋಗಿ ದೇಹವನ್ನು ಕಳೆದುಕೊಂಡು ಅನಂಗನಾಗಿ ಕಾಮಭಾವದಿಂದ ಸಕಲ ಜೀವಿಗಳಲ್ಲಿಯೂ ವಾಸಮಾಡುವವನು - ಮನ್ಮಥಾಯ ನಮಃ.

**660. ಧರ್ಮಾಯ ನಮಃ**

ಧರ್ಮ ರೂಪದಲ್ಲಿರುವವನು, ಧರ್ಮವೇ ಆಗಿರುವವನು, ಧರ್ಮವನ್ನೇ ಪ್ರತಿಪಾದಿಸುವವನು, ಧರ್ಮದಲ್ಲಿಯೇ ಪ್ರತಿಷ್ಠಿತನಾಗಿರುವವನು - ಪರಮಾತ್ಮ.

ಧರ್ಮಕ್ಕೆ ವಿರುದ್ಧವಾದ್ದು ಅಧರ್ಮ, ಅಧರ್ಮವು ತಲೆ ಎತ್ತದಂತೆ ಮಾಡುವವನು.

ಚತುರ್ವಿಧ ಪುರುಷಾರ್ಥಗಳು - ಧರ್ಮ, ಅರ್ಥ, ಕಾಮ, ಮೋಕ್ಷ.

ಧರ್ಮ ಒಂದು ಪ್ರತಿಪಾದಿತವಾಗಿ ಭದ್ರವಾಗಿ ನೆಲೆಯಾಗಿದ್ದರೆ ಉಳಿದ ಮೂರನ್ನು ಗಳಿಸಿಕೊಳ್ಳಬಹುದು.

ಧರ್ಮ ಸಮ್ಮತವಾದ ಅರ್ಥ, ಕಾಮ, ಮೋಕ್ಷಗಳು ಪರಮಾತ್ಮನಿಗೆ ಪ್ರಿಯವಾದುವುಗಳು,

ಧರ್ಮದಲ್ಲಿ ನಡೆಯುವವರು ಆವನಿಗೆ ಬೇಕಾದವರು.

*ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥*

ಎಂದಿದ್ದಾನೆ ಶ್ರೀ ಕೃಷ್ಣ ಗೀತೆಯಲ್ಲಿ - ಅವನೇ ಧರ್ಮ ಭೋಧಕನು - ಧರ್ಮವೇ ಅವನು. ಅವನೇ ಧರ್ಮ, ಅವನು ಮತ್ತು ಧರ್ಮದಲ್ಲಿ ಭೇದವಿಲ್ಲ. ಅದರಿಂದ ಧರ್ಮಾಯ ನಮಃ ಎಂದು ಅವನಿಗೆ ಸಲ್ಲುತ್ತದೆ.

**661. ವರ್ಮಿಣೇ ನಮಃ**

ವರ್ಮ - ಎಂದರೆ ಶಿವನು, ''ವರ್ಮಿಣೇ ಚ ವರೂಧಿನೇ ಚ''

ವರ್ಮ - ಎಂದರೆ ಶ್ರೇಷ್ಠನಾದವನು, ಹೆಸರು, ಅದನ್ನು ನಯವಾಗಿ ಉತ್ತಮ ರೀತಿಯಲ್ಲಿ ಕರೆಯುವುದು - ವರ್ಮ,

ವರ್ಮ - ಗೌರವ ಸೂಚಿಸುವ ಭಾಗ, ಹೆಸರಿಗೆ ಇದನ್ನು ಸೇರಿಸುತ್ತಾರೆ. ವರ್ಮ, ವರ್ಮನ್, ಶರ್ಮ, ಶರ್ಮನ್ ಸಮಾನ ಪದಗಳು.

**662. ಕರಿಚರ್ಮವಸಾನಾಯ ನಮಃ**

ಕರಿ - ಎಂದರೆ ಆನೆ, ಆನೆಯ ಚರ್ಮವನ್ನೇ ಬಟ್ಟೆಯನ್ನಾಗಿ ಮಾಡಿಕೊಂಡಿರುವವನು, ಗಜಾಸುರನನ್ನು ಕೊಂದು ಅವನ ಚರ್ಮವನ್ನೇ ವಸನ, ಬಟ್ಟೆಯನ್ನಾಗಿ ಮಾಡಿಕೊಂಡಿರುವವನು, ಗಜಚರ್ಮಾಂಬರಧರ ಶಿವ.

**663. ಕರಾಳವದನಾಯ ನಮಃ**

ಕರಾಲ - ಭಯವನ್ನುಂಟ್ಟುಮಾಡುವ, ವದನ - ಮುಖವುಳ್ಳವನು - ನರಸಿಂಹಸ್ವಾಮಿ.

ನರಸಿಂಹಸ್ವಾಮಿಯು ಬಹಳ ಭಯವನ್ನುಂಟುಮಾಡುವವನು, ಹಿರಣ್ಯಕಶಿಪುವಿನ ಸಂಹಾರದ ನಂತರ ಬಹಳ ಕ್ರೂರ ರೂಪದಲ್ಲಿ ಕೋಪದಲ್ಲಿದ್ದನು.

ಆಗಿನ ಸಮಯದ ಮುಖದ ಭಾವ - ಕರಾಲವದನ.

*ಕವಯೇ ಪದ್ಮಗರ್ಭಾಯ ಭೂಗರ್ಭಾಯ ಘೃಣಾಬ್ಧಯೇ ।*
*ಬ್ರಹ್ಮಗರ್ಭಾಯ ಗರ್ಭಾಯ ಬೃಹದ್ಗರ್ಭಾಯ ಧೂರ್ಜಟೀ ॥110॥*
*(664-671)*

**664. ಕವಯೇ ನಮಃ**

ಕವಿ - ವಿದ್ವಾಂಸ, ಶುಕ್ರಾಚಾರ್ಯರು, ಸೂರ್ಯ, ಸರ್ವಜ್ಞ.

ಶುಕ್ರಾಚಾರ್ಯರು ದಾನವರ ಗುರುಗಳು - ಪರಮಾತ್ಮನ ರೂಪ.

ಸರ್ವಜ್ಞ - ಪರಮಾತ್ಮನು ಸಕಲವನ್ನು ಕಾಲ ದೇಶ ಪರಿಭೇದವಿಲ್ಲದೆ ತಿಳಿದಿರುವವನಾದ್ದರಿಂದ - ಕವಯೇ ನಮಃ ಎನ್ನುತ್ತೇವೆ.

ಕವಿಂ ಕವೀನಾಂ ಉಪಮಶ್ರವಂ - ಪರಮಾತ್ಮನು ಸಕಲ ಕವಿಗಳಿಗೂ ಕವಿ - ಕವಿ ಸರ್ವೋತ್ತಮ.

**665. ಪದ್ಮಗರ್ಭಾಯ ನಮಃ**

ಪದ್ಮ - ಎಂದರೆ ಕಮಲದ, ಗರ್ಭ - ಗರ್ಭವುಳ್ಳವನು - ಶ್ರೀಮನ್ನಾರಾಯಣನು ತನ್ನ ನಾಭಿಯಿಂದ ಕಮಲದ ನಾಳವನ್ನು ಹೊರಹಾಕಿ, ನಾಳದ ಕೊನೆಯಲ್ಲಿ ಕಮಲ - ಪದ್ಮವನ್ನು ಪ್ರಕಟಿಸಿದನು. ಈ ಪದ್ಮದಲ್ಲಿ ಬ್ರಹ್ಮದೇವರು ಪರಮಾತ್ಮನಿಂದ ಮೊದಲು ಬಂದರು. ಪರಮಾತ್ಮನಿಗೆ ಪದ್ಮಗರ್ಭನೆಂದೂ, ಬ್ರಹ್ಮದೇವರಿಗೆ ಪದ್ಮಸಂಭವ, ಕಮಲಸಂಭವನೆಂದೂ ಹೆಸರಾಯಿತು. ಈ ಕಾರಣದಿಂದ ಪರಮಾತ್ಮನನ್ನು ಪದ್ಮಗರ್ಭಾಯ ನಮಃ ಎಂದು ನಮಸ್ಕರಿಸುತ್ತೇವೆ.

ಗರ್ಭವು ಪದ್ಮದ ರೂಪದಲ್ಲಿರುವುದರಿಂದ ಮತ್ತು ಪರಮಾತ್ಮನು ಇದನ್ನು ಹೊಂದಿರುವುದರಿಂದ ಪದ್ಮಗರ್ಭ ಎಂದು ಹೆಸರು.

ಹೃದಯದಿಂದ ಸಕಲವೂ ಹೊರಡುವುದರಿಂದ ಅದನ್ನು ಹೃದಯಪದ್ಮ ಎಂದು ಹೇಳುತ್ತೇವೆ. ಹೃದಯ ಪದ್ಮವು ಅನಾಹತ ಚಕ್ರದಲ್ಲಿದೆ. ಅನಾಹತ ಚಕ್ರವು ಷಟ್ಚಕ್ರಗಳಲ್ಲಿ ಒಂದು, ಇದು ಪರಮಾತ್ಮನ ವಾಸಸ್ಥಾನವೆಂದು ಭಾವಿಸಿ ಇಲ್ಲಿಗೆ ಅವನನ್ನು ಆಹ್ವಾನಿಸಿ ಅವನನ್ನು ಕುರಿತು ಧ್ಯಾನಮಾಡಿದಾಗ ಪ್ರಜ್ಞೆ ಮೇಲೆ ಮೇಲೆ ಏರುವುದಕ್ಕೆ ಪ್ರಾರಂಭಿಸುತ್ತದೆ, ನಿರಂತರ ಸಾಧನೆಯಿಂದ ಸಹಸ್ರಾರದಲ್ಲಿರುವ ಸದಾಶಿವನನ್ನು ಮತ್ತು ಪರಾಕುಂಡಲಿನಿಯನ್ನು ಯೋಗಿಗಳು ತಲಪುತ್ತಾರೆ. ಯೋಗ ಮಾಡುವವನು ಯೋಗಿ. ಸರ್ವರಿಗೂ ಸಾಧ್ಯ ಎಂದು ಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ. (ಅಧೋ ನಿಷ್ಟ್ಯಾ ವಿತಸ್ಯಾನ್ತೇ ನಾಭ್ಯಾಮುಪರಿ ತಿಷ್ಠತಿ)

666. ಭೂಗರ್ಭಾಯ ನಮಃ

ಭೂ - ಭೂಮಿ, ಭೂಮಾತೆ, ಭೂದೇವಿ, ವಿಷ್ಣುವಿನ ಪ್ರೇಯಸಿ.

ಭೂಗರ್ಭ - ಭೂಮಿಯ ಒಳಭಾಗದಲ್ಲಿರುವುದನ್ನು ಭೂಗರ್ಭದಲ್ಲಿ ಇರುವುದೆಂದು ತಿಳಿದಿರುತ್ತೇವೆ.

- ಭೂದೇವಿಯು ಶ್ರೀ ಮನ್ಮಹಾವಿಷ್ಣುವಿನ ಪ್ರಿಯೆಯಾದ್ದರಿಂದ ಅವಳ ಗರ್ಭಕ್ಕೆ ಭೂಗರ್ಭ ಎಂದು ಹೆಸರು.

ಭೂಮಂಡಲವು ಎಲ್ಲ ಭಾರವನ್ನು ಹೊತ್ತಿರುವುದರಿಂದ ಮತ್ತು ಒಳಗೂ ಅನೇಕವನ್ನು ಅಡಗಿಸಿರುವುದರಿಂದ ಭೂಗರ್ಭ ಎಂದು ಹೆಸರು. ಪರಮಾತ್ಮನ ವಿಭಾಗವೇ ಭೂದೇವಿ. ಆದರಿಂದ ಭೂದೇವಿಯೂ ಅವನೇ. ಅವನನ್ನೇ ಭೂಗರ್ಭಾಯ ನಮಃ ಎಂದು ನಮಸ್ಕರಿಸುತ್ತೇವೆ.

ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ತನ್ನ ಗರ್ಭದಲ್ಲಿಯೇ ಅಡಗಿಸಿಕೊಂಡಿರುವುದರಿಂದ ಅವನನ್ನು ಭೂಗರ್ಭಾಯ ನಮಃ ಎಂದು ನಮಸ್ಕರಿಸುತ್ತೇವೆ.

667. ಘೃಣಾಬ್ಧಯೇ ನಮಃ

ಘೃಣಾ - ಎಂದರೆ (1) ದಯೆ, ಅಂತಃಕರಣ, (2) ತಿರಸ್ಕಾರ, ನಿಂದೆ, ಅಬ್ಧಿ - ಸಾಗರ.

(1) ಪರಮಾತ್ಮನು ದಯೆ ಮತ್ತು ಅಂತಃಕರಣಗಳ ಸಮುದ್ರ. ಅದರ ಒಂದು ಬಿಂದುವಿನ ಅನೇಕ ಭಾಗಗಳಲ್ಲಿ ಒಂದು ಭಾಗವನ್ನು ಕರುಣಿಸಿದರೂ ಪಾಮರರಾಗಿ ಬಿಡುತ್ತೇವೆ. ಸಕಲ ಜೀವಕೋಟಿಯನ್ನೇ ದಯೆಯಿಂದ ನೋಡಬೇಕಾದರೆ ಅವನಲ್ಲಿ ಎಷ್ಟು ಪ್ರಮಾಣದ ದಯೆಯಿರಬೇಕು ಅದನ್ನು ಕಾಲಕಾಲಕ್ಕೆ ಸರ್ವರಿಗೂ ಹಂಚಬೇಕಾದರೆ ಅವನ ದೇಶ ಕಾಲ ಪರಿಚ್ಛೇದ ಶಕ್ತಿ ಯುಕ್ತಿ ಹೇಗಿರಬೇಕು. ಬಹಳ ವಿಶೇಷ, ಅವನು ಸಾಮಾನ್ಯನಲ್ಲ -

ಘೃಣಾಬ್ಧಿ - ದಯಾಸಾಗರ - ಅಂತಃಕರಣದ ಸಮುದ್ರ - ಅದರಿಂದ ಘೃಣಾಬ್ಧಯೇ ನಮಃ.

(2) ಘೃಣ - ನಿಂದೆ, ತಿರಸ್ಕಾರ, ಇವುಗಳನ್ನು ಮಾಡಿದವರನ್ನು ಶಿಕ್ಷಿಸುತ್ತಾನೆ. ಈ ಶಿಕ್ಷಿಸುವ ಗುಣಗಳ ಸಾಗರ ಅವನು. ಆಗ ಘೃಣಾಬ್ಧಯೇ ನಮಃ ಎಂದು ನಮಸ್ಕರಿಸುತ್ತೇವೆ.

**668. ಬ್ರಹ್ಮಗರ್ಭಾಯ ನಮಃ**

ಸಕಲ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡಿರುವುದರಿಂದ (ಕಲ್ಪಾದಿ ಸಮಯದಲ್ಲಿ), ಮತ್ತು ಅಡಗಿಸಿಕೊಳ್ಳುವದರಿಂದ (ಕಲ್ಪಾಂತದ ಸಮಯದಲ್ಲಿ) ಮತ್ತು ಇದಕ್ಕಿಂತ ದೊಡ್ಡ ಗರ್ಭವು ಸಾಧ್ಯವಿದೆಯೋ, ಇಲ್ಲವೋ ಎಂದು ಊಹಿಸಲು ಅಸಾಧ್ಯವಾದ್ದರಿಂದ ಮತ್ತು ಬ್ರಹ್ಮನನ್ನೆ ತನ್ನ ಗರ್ಭದಲ್ಲಿ ಇಟ್ಟುಕೊಂಡಿರುವುರಿಂದ ಪರಮಾತ್ಮನಿಗೆ ಬ್ರಹ್ಮಗರ್ಭ ಎಂದು ಹೆಸರು. ಅಥವಾ,

ಬ್ರಹ್ಮದೇವನೇ ಸಕಲವನ್ನು ಸೃಷ್ಟಿಸುವುದರಿಂದ ಅವನ ಬುದ್ಧಿ ಮನಸ್ಸು ತಪಶ್ಶಕ್ತಿಯನ್ನು ಬ್ರಹ್ಮಗರ್ಭ ಎಂದು ಕರೆಯಬಹುದು.

ಅಥವಾ

ಸಕಲ ಜೀವಿಗಳಿಗೂ, ಜೀವಕೋಟಿಗೂ, ಸಚರಾಚರ ವಸ್ತುಗಳಿಗೂ ಸಕಲ ಆಗು ಹೋಗುಗಳನ್ನು - ಹಿಂದಿನದು, ಇಂದಿನದು, ಮುಂದಿನದು - ಇವುಗಳನ್ನು ತಿಳಿದು ಆಯಾ ಜೀವಿಯ ಜೀವನಕ್ಕೆ ಕ್ಷಣವನ್ನು ಬಿಡದೆ ನಿರ್ಧರಿಸಿ ನಡೆಸುವುದರಿಂದ ಪರಮಾತ್ಮನು - ಬ್ರಹ್ಮರೂಪನು - ಪರಮಾತ್ಮನ ಈ ಕ್ರಿಯಾ ಸಮುದ್ರವೇ ಬ್ರಹ್ಮಗರ್ಭನು.

ಬ್ರಹ್ಮನು ವಿಧಾತನು - ಜೀವಿಗಳ ಹಣೆಬರಹವನ್ನು ನಿರ್ಧರಿಸುವವನು - ಕಾಲ ಯಾನದಲ್ಲಿ ಪ್ರತಿ ಆತ್ಮದ ದಾರಿಯನ್ನು ನಿಯೋಜಿಸುವವನು. ಇದು ಅವನನ್ನು ಬಿಟ್ಟು ಬೇರೆ ಯಾರಿಗೂ ಅರಿವಾಗದ ಕಾರಣ ಈ ಬ್ರಹ್ಮಗರ್ಭನು ಬ್ರಹ್ಮಗುಪ್ತವಾಗಿಯೇ ಉಳಿದಿದೆ.

ಮತ್ತೆ ವಿಧಿಲಿಖಿತ, ಹಣೇಬರಹ, ಬ್ರಹಲಿಪಿ, ದೈವಸಂಕಲ್ಪ ಮೊದಲಾಗಿ ಕರೆಯಲ್ಪಡುತ್ತದೆ. ಇದು ಗುಪ್ತವಾಗಿಯೇ ನಿರಂತರ ಉಳಿಯುವುದರಿಂದ ಬ್ರಹ್ಮಗರ್ಭವೇ ಆಗಿದೆ. ಹಾಗೆಯೇ ಸದಾಕಾಲಕ್ಕೂ ಗುಪ್ತ ಅಥವಾ ಗೋಪ್ಯವಾಗಿಯೇ ಉಳಿದುಬಿಡುತ್ತದೆ.

**669. ಗರ್ಭಾಯ ನಮಃ**

ಗರ್ಭ - ಗರ್ಭಾಶಯ, ಗರ್ಭಧಾರಣೆ, ನಡುವಿನ ಮಧ್ಯಭಾಗ, ಒಳಗಿನ ದೇವರಿರುವ ಮನೆ - ಗರ್ಭಗೃಹ.

ಪರಮಾತ್ಮನಿರುವ ಸ್ಥಳ ಪವಿತ್ರವಾದುದು, ಅವನಿಂದ ಸಕಲ ಅಖಂಡ ಬ್ರಹ್ಮಾಂಡ ಕೋಟಿಗಳು ಹೊರಬರುವುದರಿಂದ ಅವನ ಉದರವೇ ಮಹಾಗರ್ಭ, ಗರ್ಭಸ್ಥಾನ, ಅತ್ಯಂತ ಪವಿತ್ರವಾದ ಶ್ರೇಷ್ಠಸ್ಥಾನ. ಸರ್ವ ಕಾಲ ದೇಶಗಳಲ್ಲಿ ಇವನ ಗರ್ಭಕ್ಕಿಂತ ಉತ್ತಮ ಗರ್ಭವಿನ್ನೊಂದಿಲ್ಲ. ಪುರುಷೋತ್ತಮನು ಹೇಳಿರುವುದು - ''ಮಮಯೋನಿಃ ಮಹದ್ಬ್ರಹ್ಮ । ತಸ್ಮಿನ್ ಗರ್ಭಂ ದದಾಮ್ಯಹಮ್॥'' (ಅ 14 - ಶ್ಲೋಕ 3 - ಭಗವದ್ಗೀತಾ)

ಆತ್ಮಗಳು ಮತ್ತೆ ಮತ್ತೆ ದೇಹ ಧಾರಣೆಮಾಡಲು ಪುರುಷನ ವೀರ್ಯದಲ್ಲಿ ತೇಜಸ್ಸಿನ ರೂಪದಲ್ಲಿ ಸೇರುತ್ತವೆ. ನಂತರ ಸ್ತ್ರೀ ಪುರುಷರ ಸಮಾಗಮದಲ್ಲಿ ಸ್ತ್ರೀ ಯೋನಿಯಲ್ಲಿ ಪ್ರವೇಶಿಸಿ ಸ್ತ್ರೀ ಗರ್ಭ ಪ್ರದೇಶವನ್ನು ಸೇರಿ ಕಾಲಾನುಕ್ರಮದಲ್ಲಿ ಅಂಡ, ನಂತರ ದೇಹ ಪಡೆದು ಸ್ತ್ರೀಯ ಆಹಾರದಿಂದಲೇ ಬೆಳೆದು ದೇಹದೊಡನೆ ಹೊರಬರುತ್ತದೆ. ಪ್ರತಿ ಆತ್ಮವು ಪ್ರತಿಯೊಂದು ದೇಹಧಾರಣೆ ಮಾಡುವಾಗಲೂ ಗರ್ಭವನ್ನು ಸೇರಿ ಜನನ ಕಷ್ಟವನ್ನು ಅನುಭವಿಸಲೇ ಬೇಕಾಗುತ್ತದೆ. ಆತ್ಮವೂ ಸಹ ಪರಮಾತ್ಮನಿಂದಲೇ ಬಂದಿರುವುದರಿಂದ, ನಿತ್ಯಶುದ್ಧವಾಗಿರುವುದರಿಂದಲೂ ಈ ನಾಮವು ಆತ್ಮಕ್ಕೂ ಅನ್ವಯಿಸುತ್ತದೆ - ಗರ್ಭಾಯ ನಮಃ.

ಆತ್ಮದ ಗುಣಗಳು ಯಾರಿಗೂ ತಿಳಿಯಲು ಅಸಾಧ್ಯ. ಅದರ ಗುಣಗಳು ಮಾಯೆಯಿಂದ ಮುಚ್ಚಲ್ಪಟ್ಟಿರುತ್ತವೆ. ಆತ್ಮನೇ ಗರ್ಭ.

ಪರಮಾತ್ಮನು ಬಹಳ ಗಹನವಾದ್ದರಿಂದಲೂ, ಸಾಮಾನ್ಯರಿಗೆ, ಎಂತಹ ದೇವ ದೇವತೆಗಳಿಗೇ ತಿಳಿಯದವನಾದ್ದರಿಂದ ಅವನು ''ಗರ್ಭ''ನು.

**670. ಬೃಹದ್ಗರ್ಭಾಯ ನಮಃ**

ಪ್ರಕೃತಿ, ಪುರುಷ, ಮಾಯೆಯಾಗಿ ವಿಭಾಗವಾದ ಪರಮಾತ್ಮನು ಅಖಿಲಾಂಡ ಕೋಟಿ ಬ್ರಹ್ಮಾಂಡಗಳು ನಿರಂತರವಾಗಿ ನಡೆಯುವಂತೆ ಮಾಡಿದ್ದಾನೆ. ನಿಯೋಜಿಸಿರುತ್ತಾನೆ. ಇದು ಅವನ ಗೋಪ್ಯವಾದ ವಿಚಾರ. ಇಷ್ಟು ದೊಡ್ಡ ಪ್ರಮಾಣವನ್ನು ರಚಿಸಿ ನಡೆಸಬೇಕಾದರೆ ಅವನ ಗರ್ಭವು ವಿಶ್ವದಲ್ಲೆಲ್ಲಾ ಬೃಹತ್ತಾದ ಗರ್ಭ, ಅಷ್ಟೇ ಅಲ್ಲ ಮಹತ್ತಾದ ಗರ್ಭ.

ಸಕಲ ಜೀವಕೋಟಿಯೂ ಅನೇಕ ಗರ್ಭಗಳನ್ನು ಧರಿಸಬೇಕಾಗುತ್ತದೆ. ಗರ್ಭದಲ್ಲಿ ಬೆಳೆಯಬೇಕಾಗುತ್ತದೆ, ಗರ್ಭದಿಂದ ಹೊರಬರಬೇಕಾಗುತ್ತದ, ಇದು ಪ್ರಕೃತಿ ನಿಯಮ, ನಿರಂತರ ನಡೆಯುತ್ತಿರುತ್ತದೆ. ಆದರೆ ಈ ಗರ್ಭಗಳು ಸಾಮಾನ್ಯ ಪ್ರಮಾಣದ್ದು, ಆಯಾ ಯೋನಿಗೆ ಪರಿಮಿತವಾದ್ದು. ಆದರೆ ಪರಮಾತ್ಮ ಗರ್ಭವು ವಿಚಿತ್ರವಾದ್ದು ಮತ್ತು ವಿಶೇಷವಾದ್ದು.

ಜೀವಕೋಟಿಯ ಯೋನಿಗಳಲ್ಲಿ ಜನಿಸುವ ಜೀವಿಗಳು ಆಯಾ ಯೋನಿಯ ಪ್ರಜಾಭಿವೃದ್ಧಿಯನ್ನೇ ಮಾಡುತ್ತದೆ. ಆದರೆ ಪರಮಾತ್ಮನು ತನ್ನ ಗರ್ಭದಲ್ಲಿ

ಸಕಲ ಜೀವಿಗಳನ್ನೇ, ಬ್ರಹ್ಮಾಂಡಗಳನ್ನೇ ಧರಿಸಿದವನು. ಇದರಿಂದ ಇವನ ಗರ್ಭವು ಬೃಹತ್ತಾದ್ದು, ದೊಡ್ಡದಾದ್ದು, ಮಹತ್ತಾದ್ದು - ಇವನನ್ನು ಬೃಹದ್ಗರ್ಭಾಯ ನಮಃ ಎಂದು ನಮಸ್ಕರಿಸುವುದು ಅತ್ಯಂತ ಸಮಂಜಸವಾಗಿರುತ್ತೆ.

**671. ಧೂರ್ಜಟಯೇ ನಮಃ**

ಧೂರ್ಜಟಿ - ಜಟಾ - ಜಡೆಗಟ್ಟಿದ ಕೂದಲು, ಬೇರು,

ಧೂ - ಆಕಾಶ ಗಂಗೆಯನ್ನು ಜಟೆಯಲ್ಲಿ ಇರಿಸಿಕೊಂಡಿರುವವನು ಯಾರೋ ಅವನು - ಶಿವ.

ಅತ್ಯಂತ ರಭಸದಿಂದ ವಿಷ್ಣುಪಾದದಿಂದ ಬಂದ ಗಂಗೆಯು ಭಗೀರಥನ ಪ್ರಾರ್ಥನೆಯಂತೆ ಶಿವನ ಪವಿತ್ರವಾದ ಜಟೆಯನ್ನು ಸೇರಿದಳು. ಶಿವನ ಕೃಪೆಯಿಂದ ಗಂಗೆಯು ಅವನ ಜಟೆಯಿಂದ ಧುಮುಕಿದಳು. ಮುಂದೆ ಭಗೀರಥನನ್ನು ಹಿಂಬಾಲಿಸಿ ಜುಹ್ನುವಿನ ಆಶ್ರಮದಲ್ಲಿ ಪ್ರವಾಹ ಬಂದಳು. ಆಗ ಕೋಪಗೊಂಡ ಜುಹ್ನುವು ಗಂಗೆಯನ್ನು ಆಪೋಶನ ತೆಗೆದುಕೊಂಡನು. ಮತ್ತೆ ಭಗೀರಥನ ಪ್ರಾರ್ಥನೆಯಂತೆ ಜುಹ್ನುವಿನ "ಕಿವಿ" ಯಿಂದ ಬಂದು ಭೂಲೋಕದಲ್ಲಿ ಹಿಮವತ್ಪರ್ವತದಲ್ಲಿ ಮಾನಸ ಸರೋವರದಲ್ಲಿ ಸೇರಿದಳು. ಹಿಮವತ್ಪರ್ವತದಿಂದ ಹರಿದು ಸಮುದ್ರವನ್ನು ಸೇರಿದಳು.

ಶಿವನಿಗೆ ಧೂರ್ಜಟಾಯ ನಮಃ ಎಂದು ನಮಸ್ಕರಿಸುತ್ತಾರೆ.

*ನಮಸ್ತೇ ವಿಶ್ವಗರ್ಭಾಯ ಶ್ರೀಗರ್ಭಾಯ ಜಿತಾರಯೇ ।*
*ನಮೋ ಹಿರಣ್ಯಗರ್ಭಾಯ ಹಿರಣ್ಯಕವಚಾಯ ಚ ।।111।। (672-676)*

**672. ವಿಶ್ವಗರ್ಭಾಯ ನಮಃ**

ವಿಶ್ವ - ಎಂದರೆ ಎಲ್ಲೆಲ್ಲಿ ಅಖಿಲಾಂಡ ಕೋಟಿ ಬ್ರಹ್ಮಾಂಡಗಳು ಇರುವುವೋ ಅಲ್ಲೆಲ್ಲಾ ಒಂದು ಕಣವನ್ನೂ ಬಿಡದೆ ಪರಮಾತ್ಮನು ಹರಡಿಕೊಂಡಿದ್ದಾನೆ. ಅದರಿಂದ ಅವನು ವಿಶ್ವನು. ಈ ಸಕಲ ವಿಶ್ವವನ್ನೇ ತನ್ನ ಗರ್ಭದಲ್ಲಿಟ್ಟುಕೊಂಡಿರುವ ಪರಮೇಶ್ವರನಿಗೆ ವಿಶ್ವಗರ್ಭ ಎಂದು ಹೇಳುತ್ತೇವೆ.

ಅಥವಾ

ಪರಮಾತ್ಮನ ಕಾಮನೆಗಳನ್ನು ಪೂರ್ಣಗೊಳಸುವುದಕ್ಕಾಗಿ ವಿಶ್ವವು ಸೃಷ್ಟಿಯಾಗಿದೆ. ಅವನ ಕಾಮನೆಗಳೇ ವಿಶ್ವದಗರ್ಭ - ಅವನು ಅದರಿಂದ ವಿಶ್ವಗರ್ಭನು.

ಅಥವಾ

ಆತ್ಮದೊಡನೆ ಮನಸ್ಸು, ಬುದ್ಧಿ, ಅಹಂಕಾರ, ಚಿತ್, ಇಂದ್ರಿಯಗಳು,

ಪ್ರಾಣಗಳು, ಮಹಾಭೂತಗಳಿಂದಾದ ದೇಹವಿದೆ. ಆತ್ಮಕ್ಕೆ ಇದೊಂದು ವಿಶ್ವ. ಇದರ ಸಹಾಯದಿಂದ ವಿಶಾಲವಾದ ಮನಸ್ಸಿನಿಂದ, ಪ್ರಕೃತಿ, ಪುರುಷ, ಮಾಯೆಯ ಸಂಯೋಗದಿಂದ ವಿಶಾಲ ವಿಶ್ವವನ್ನು ತನ್ನದೇ ರೀತಿಯಲ್ಲಿ ಆತ್ಮವು ಸೃಷ್ಟಿಸಿಕೊಳ್ಳುತ್ತದೆ. ಈ ಕಾರಣದಿಂದ ಆತ್ಮನೂ ಸಹ ವಿಶ್ವಗರ್ಭವೇ!

**673. ಶ್ರೀಗರ್ಭಾಯ ನಮಃ**

ಇಡಿ ವಿಶ್ವವೇ ಒಂದು ಸಂಪತ್ತು, ಶ್ರೀ, ಇಂತಹ ಶ್ರೀಯನ್ನು ತನ್ನ ಗರ್ಭದಲ್ಲಿರಿಸಿಕೊಂಡಿರುವುದರಿಂದ ಪರಮಾತ್ಮನು - ಶ್ರೀಗರ್ಭನು.

ಅಥವಾ

ಶ್ರೀದೇವಿಯ ಸೌಂದರ್ಯವನ್ನು ಬದಲಿಸಲು ಇಷ್ಟಪಡದೆ ತಾನೇ ತನ್ನ ನಾಭಿಯಲ್ಲಿ ಕಮಲನಾಳವನ್ನು ಹೊರಹೊಮ್ಮಿಸಿ ಕಮಲವನ್ನು ಹೊರತಂದು ಅದರಲ್ಲಿ ಸೃಷ್ಟಿಕರ್ತನಾದ ಬ್ರಹ್ಮದೇವನನ್ನು ಮಗನಾಗಿ ಪಡೆದನು. ಶ್ರೀದೇವಿಯ ಬದಲು ಗರ್ಭಧರಿಸಿದ್ದರಿಂದ ಅವನು ಶ್ರೀಗರ್ಭನಾದನು.

ಅಥವಾ

ಸಕಲ ಅಖಿಲಾಂಡ ಕೋಟಿ ಬ್ರಹ್ಮಾಂಡಗಳು ಸೃಷ್ಟಿಯ ಸಂಪತ್ತುಗಳೇ ಆಗಿವೆ. ಇವನ್ನು ತನ್ನ ಉದರದಲ್ಲಿರಿಸಿಕೊಳ್ಳುವುದರಿಂದ ಮತ್ತು ಇರಿಸಿಕೊಂಡಿದ್ದರಿಂದ ಅವನ ಗರ್ಭವು (ಗರ್ಭಾಶಯವಿಲ್ಲದಿದ್ದರೂ - ಪರಮಾತ್ಮನಿಗೆ ಈ ರೀತಿ ವಿಪರ್ಯಾಸವನ್ನು ಅರ್ಥೈಸುವುದು ಅಪವಾದ) ಶ್ರೀಗರ್ಭವೆಂದಾಯಿತು.

**674. ಜಿತಾರಯೇ ನಮಃ**

ಅರಿ - ಎಂದರೆ ಶತ್ರು, ಜಿತ - ಎಂದರೆ ಗೆದ್ದವನು,

ಶತ್ರುಗಳನ್ನು ಯಾರನ್ನೂ ಬಿಡದೆ ಗೆದ್ದವನು ಯಾರೋ ಅವನು. ಯಾರು ಬೇಕಾದರೂ ಆಗಬಹುದು. ಸೃಷ್ಟಿ ಸಂಪತ್ತಿನಲ್ಲಿ ಶತ್ರುಗಳೇ ಇಲ್ಲದಂತಹವನು - ಪರಮಾತ್ಮ.

ಅಥವಾ

ಪ್ರಪಂಚದಲ್ಲಿರತಕ್ಕ ಶತ್ರುಗಳನ್ನು ಯಾರು ಬೇಕಾದರೂ ಗೆಲ್ಲುತ್ತಾರೆ. ಇವರನ್ನು ಗೆಲ್ಲುವವರೂ ಇರುತ್ತಾರೆ. ಇವರನ್ನು ಬಿಡದೆ ಗೆದ್ದವನು - ಪರಮಾತ್ಮ. ಈಗ ಶತ್ರುಗಳು ಎಂದರೆ ಯಾರು? ಯಾರು ನಮ್ಮ ಅಸ್ತಿತ್ವಕ್ಕೆ, ಧ್ಯೇಯಗಳಿಗೆ, ಧ್ಯೇಯಗಳ ಸಾಧನೆಗೆ ಅಡ್ಡಿ ಬರುವವರೋ ಅವರನ್ನು ಶತ್ರುಗಳೆಂದು ಭಾವಿಸಬಹುದು, ಪ್ರಪಂಚದಲ್ಲಿರುವ ಜೀವಿಗಳೇ ಶತ್ರುಗಳಾಗಬಹುದು, ಕಾಮ, ಕ್ರೋಧ, ಲೋಭ, ಮೋಹ, ಮದ,

ಮಾತ್ಸಾರ್ಯಗಳು, ಸಾತ್ವಿಕರಸ್ತಮೋಗುಣಗಳು, ಸಮಯಾಸಮಯದಲ್ಲಿ ಶತ್ರುಗಳಾಗಬಹುದು. ಮಿತ್ರರಾಗಬಹುದು. ಯಾವುದು ಯಾವಾಗ ಶತ್ರುವಾಗುತ್ತೆಂದು ಹೇಳಲು ಸಾಧ್ಯವಿಲ್ಲ. ಒಂದು ಸಮಯ ಕಾಲ ದೇಶದಲ್ಲಿ ಶತ್ರುವಾದ್ದು ಇನ್ನೊಂದು ಸಮಯದಲ್ಲಿ ಮಿತ್ರವಾಗಬಹುದು ಆದರೆ ಪರಮಾತ್ಮನು ಸಹಾ ಇಂತಹ ಶತ್ರುಗಳನ್ನು ಗೆದ್ದು, ಸದಾ ಶಾಂತಿಯನ್ನು ಕೊಡುತ್ತಾನೆ. ಅವನೊಬ್ಬನೇ ಜಿತಾರಯೇ ನಮಃ ಎಂದು ಎನಿಸಿಕೊಳ್ಳಲು ಸಾಧ್ಯ. ಇವನಿಗೆ ಯಾವಾಗಲೂ ಯಾವ ಕ್ಷಣದಲ್ಲಿಯೂ ಶತ್ರುಗಳು ಇದ್ದೇ ಇರುತ್ತಾರೆ. ಏಕೆಂದರೆ ಸಮಸ್ತ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ಮತ್ತು ಜೀವಕೋಟಿಯನ್ನು ಕಾಪಾಡಬೇಕಾದರೆ ಯಾರಾದರೂ ಶತ್ರುಗಳು ಇದ್ದೇ ಇರುತ್ತಾರೆ. ಶತ್ರುಗಳನ್ನು ಜಯಿಸುತ್ತಿರುವುದೇ ಇವನ ಕೆಲಸ. ಅದರಲ್ಲಿಯೇ ತೀಕ್ಷತೆ, ಚತುರತೆಯಿಂದ ಮಗ್ನನಾಗಿರಬೇಕು.

675. ಹಿರಣ್ಯಗರ್ಭಾಯ ನಮಃ

ಹಿರಣ್ಯ - ಎಂದರೆ ಸಂಪತ್ತು, ಧನ ಕನಕ ಇತ್ಯಾದಿಗಳು, ಬಂಗಾರ.

ಗರ್ಭ - ಎಂದರೆ ಇವುಗಳನ್ನು ಗರ್ಭದಲ್ಲಿಟ್ಟುಕೊಂಡಿರುವವನು ಯಾರೋ ಅವನು - ಹಿರಣ್ಯಗರ್ಭ.

ಅಥವಾ .

ಸಕಲ ಸಂಪತ್ತುಗಳಿಂದ ಶುಭಪ್ರದವಾದ ಗರ್ಭ - ಹಿರಣ್ಯಗರ್ಭ. ಧನ, ಸುವರ್ಣವನ್ನು ಗರ್ಭದಲ್ಲಿರಿಸಿದಾಗ ಅದು - ಹಿರಣ್ಯಗರ್ಭ - ಪರಮಾತ್ಮ.

ಹಿರಣ್ಯಗರ್ಭ - ಎಂದರೆ ಬ್ರಹ್ಮದೇವ - ಬ್ರಹ್ಮ ದೇವನು ಪರಮಾತ್ಮನ ಒಂದು ಕಾರ್ಯರೂಪಕ್ಕಾಗಿ ನಿಂತಿರುವ ವಿಭಾಗ.

ಪರಮಾತ್ಮನು ಸ್ಥೂಲ ರೂಪ ಎಂದಾದರೆ ಅದರ ಅಂಶ ಆತ್ಮ. ಆತ್ಮನು ಸಹ ಹಿರಣ್ಯಗರ್ಭನೇ. ಅದು ತನ್ನಲ್ಲಿ ಸಕಲ ಭಾವಗಳನ್ನು ಹೊಂದಿರುತ್ತದೆ. ಪರಮಾತ್ಮನು ಹಿರಣ್ಯಗರ್ಭನಾದರೆ ಆತ್ಮನು ಅದರ ಅಣು ಶರೀರ - ಹಿರಣ್ಯಗರ್ಭಾಯ ನಮಃ ಎಂದಿದೆ.

676. ಹಿರಣ್ಯಕವಚಾಯ ನಮಃ

ಪರಮಾತ್ಮನು ಸಕಲ ಸಮಸ್ತ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ತನ್ನ ಉದರದಲ್ಲಿ ಇರಿಸಿಕೊಂಡಿರುವುದರಿಂದ ಅವನ ಮೇಲ್ಮೈಯು ಅಂದರೆ ಕವಚವು ಹಿರಣ್ಯರೂಪವಾಗಿದೆ. ಅವನ ಬಾಹ್ಯ ದೇಹವು ಅದನ್ನು ಸುಭದ್ರವಾಗಿ ಕಾಪಾಡುತ್ತದೆ. ಅದು ಉತ್ತಮವಾದುದು - ಬಂಗಾರದ ರೂಪವಾದ್ದು - ಬಂಗಾರದ ಕವಚವಾಗಿ ಕೆಲಸ ಮಾಡುತ್ತದೆ. ಹಿರಣ್ಯಕವಚಾಯ ನಮಃ ಎಂದಾಗಿದೆ.

*ಹಿರಣ್ಯಕನಿಹಂತ್ರೇ ಚ ಹಿರಣ್ಯನಯನಾಯ ಚ ।*
*ಹಿರಣ್ಯವರ್ಣದೇಹಾಯ ಹಿರಣ್ಯಾಕ್ಷವಿನಾಶಿನೇ ॥112॥*

*(677-680)*

**677. ಹಿರಣ್ಯಕನಿಹಂತ್ರೇ ನಮಃ**

ಹಿರಣ್ಯಕನಿಹಂತ್ರೇ ನಮಃ

ಹಿರಣ್ಯಕ - ಎಂದರೆ ಹಿರಣ್ಯಕಶಿಪುವನ್ನು ಸಂಹಾರ ಮಾಡಿದವನು. ಹಿರಣ್ಯಕಶಿಪುವಿಗೆ ಹಿರಣ್ಯಕ ಎಂದು ಹೆಸರು. ಮಹಾವಿಷ್ಣುವು ತನ್ನ ದ್ವಾರ ಪಾಲಕರಾದ ಜಯ, ವಿಜಯರನ್ನು ಅವನ ಮೊದಲ ಜನ್ಮದಲ್ಲಿದ್ದ ಹಿರಣ್ಯಾಕ್ಷ, ಹಿರಣ್ಯಕಶಿಪುರನ್ನು ವರಾಹ ಮತ್ತು ನರಸಿಂಹ ರೂಪದಲ್ಲಿ ಅವತಾರವೆತ್ತಿ ಸಂಹರಿಸಿದನು. ಶತ್ರುಗಳಲ್ಲೆಲ್ಲ ಅತಿ ಶಕ್ತಿಯುತನಾದ ಹಿರಣ್ಯಕಶಿಪುವನ್ನು ಸಂಹರಿಸಿದವನು - ನರಸಿಂಹ ರೂಪೀ ಮಹಾವಿಷ್ಣು. ಅಥವಾ,

ದುಷ್ಟಶಕ್ತಿಗಳೆಲ್ಲೆಲ್ಲ ಅತೀವ ದುಷ್ಟ ಶಕ್ತಿಯನ್ನು ಸಂಹರಿಸಿದವನು - ಮಹಾವಿಷ್ಣು, ಅವನಿಗೆ ಅಸಾಧ್ಯವಾದದ್ದು ಯಾವುದೂ ಇಲ್ಲ.

**678. ಹಿರಣ್ಯನಯನಾಯ ನಮಃ**

ಹಿರಣ್ಯ - ಎಂದರೆ ಸುವರ್ಣದ ರೂಪ, ಬೆಲೆಯ, ಅತ್ಯಂತ ಬೆಲೆ ಬಾಳುವ ಧನರೂಪವಾದ ತೇಜಸ್ಸಿನ, ನಯನ - ಕಣ್ಣುಗಳು ಉಳ್ಳವನು - ಪರಮಾತ್ಮ - ಶ್ರೀಮನ್ಮಹಾವಿಷ್ಣು, ಮನೋಹರವಾದ, ಸುಂದರವಾದ, ಆಕರ್ಶಕವಾದ ಕಣ್ಣುಗಳುಳ್ಳವನು.

ತನ್ನ ಕಣ್ಣುಗಳ ಕೃಪಾ ದೃಷ್ಟಿಯಿಂದ ಹಿರಣ್ಯವನ್ನೇ ಕೊಡುವವನು.

ಅಥವಾ

ಹಿರಣ್ಯ - ಬೆಲೆ ಬಾಳುವ ವಸ್ತುಗಳನ್ನು, ನಯತೀತಿ, ನಯನಃ ತನ್ನ ಹತ್ತಿರ ಎಳೆದುಕೊಳ್ಳುವವನು.

ಅಥವಾ

ಬೆಲೆ ಬಾಳುವ ಆತ್ಮಗಳನ್ನು ತನ್ನ ಎಡೆಗೆ ತೆಗೆದುಕೊಂಡು ಹೋಗುವವನು ಯಾರೋ ಅವನು - ವಿಷ್ಣು. ಅಥವಾ

ಹಿರಣ್ಯ - ಸಕಲ ಸಂಪತ್ತುಗಳನ್ನು, ನಯನ - ಎಳೆಯುವವನು - ಅವನೇ ಹಿರಣ್ಯನಯನನು - ಅವನಿಗೆ ಹಿರಣ್ಯನಯನಾಯ ನಮಃ ಎನ್ನುತ್ತೇವೆ.

**679. ಹಿರಣ್ಯವರ್ಣದೇಹಾಯ ನಮಃ**

ಹಿರಣ್ಯ - ಬಂಗಾರದ, ವರ್ಣ - ಬಣ್ಣದ, ದೇಹಾಯ - ದೇಹ, ಶರೀರವುಳ್ಳವನು ಯಾರೋ ಅವನು - ಪರಮಾತ್ಮನು.

ನರಸಿಂಹ ಸ್ವಾಮಿಯು ಸಿಂಹದ ತಲೆಯುಳ್ಳವನು. ಸಿಂಹದ ಬಣ್ಣವು ಬಂಗಾರದ ಬಣ್ಣ - ಹೊಳೆಯುವಂತಹದು. ಥಳ ಥಳ ಹೊಳೆಯುವ ವರ್ಣ. ಅದಕ್ಕೆ ತಕ್ಕಂತಹ ನರಮಾನವನ ದೇಹ. ದೇಹದ ಬಣ್ಣವೂ ಬಂಗಾರ ವರ್ಣವಾಗಿದೆ. ಸಮಸ್ತ ನಖದಿಂದ ಶಿರದವರೆಗಿನ ದೇಹವು ಮತ್ತು ದೇಹದ ಅಂಗಾಗಗಳೆಲ್ಲವೂ ಬಂಗಾರವರ್ಣವಾಗಿ ಥಳ ಥಳ ಹೊಳೆಯುತ್ತಿದೆ. ನೋಡಿದವರ ಮನವನ್ನು ಸೂರೆ ಮಾಡುತ್ತಿದೆ. ಎಲ್ಲರೂ ವಿಸ್ಮಯದಿಂದ ಮತ್ತು ಅದೇ ಸಮಯದಲ್ಲಿ ಭಾವವಶರಾಗಿ ನೋಡುತ್ತಿದ್ದಾರೆ. ಬ್ರಹ್ಮದೇವರ ಪ್ರಾರ್ಥನೆಯಿಂದ ನರಸಿಂಹನು ತನ್ನ ದೇಹದೊಡನೆ ಮುಖದ ಭಾವಗಳನ್ನು ಅನೇಕ ರೂಪದಲ್ಲಿ ತೋರಿಸುತ್ತಿದ್ದಾನೆ. ಬ್ರಹ್ಮದೇವರೊಡನೆ ಬಂದಿರುವ ಸಕಲ ದೇವ ದೇವತೆಗಳು, ಎಲ್ಲರೂ ಕ್ರಮ ಕ್ರಮವಾಗಿ ಹಂತ ಹಂತವಾಗಿ ಭಯೋತ್ಪಾದಕ ಭಾವವನ್ನು ತಗ್ಗಿಸುತ್ತಿರುವ ನರಸಿಂಹನನ್ನು ನೋಡಿ ಪುಲಕಿತರಾಗುತ್ತಿದ್ದಾರೆ. ಈಗಿನ ಶರೀರವನ್ನು ನೋಡಿ ಭಾವಾವೇಶದಿಂದ ಸಂತೋಷಪಡುತ್ತಿದ್ದಾರೆ. ನರಸಿಂಹನೇ ನರಸಿಂಹ - ಹಿರಣ್ಯವರ್ಣ ದೇಹಾಯ ನಮಃ.

680. **ಹಿರಣ್ಯಾಕ್ಷ ವಿನಾಶಿನೇ ನಮಃ**

ಹಿರಣ್ಯಾಕ್ಷನನ್ನು ಕೊಂದ ವರಾಹ ರೂಪಿ ಮಹಾವಿಷ್ಣುವು - ಹಿರಣ್ಯಾಕ್ಷವಿನಾಶನು.

ಹಿರಣ್ಯಾಕ್ಷನು ಭೂ ದೇವಿಯನ್ನು ಹೊತ್ತುಕೊಂಡು ಸಮುದ್ರದೊಳಗೆ ಹೋಗಿ ಪಾತಾಳದಲ್ಲಿಟ್ಟನು. ಮಹಾವಿಷ್ಣುವನ್ನು ಕಾಣದೆ ಅವನೊಡನೆ ಯುದ್ಧಕ್ಕಾಗಿ ತವಕಿಸುತ್ತಿದ್ದನು. ಮಹಾವಿಷ್ಣುವು ವರಾಹಾವತಾರ ತಳೆದು ಭೂ ದೇವಿಯನ್ನು ರಕ್ಷಿಸಿ ಹಿರಣ್ಯಾಕ್ಷವನ್ನು ಸಂಹರಿಸಿದನು.

*ಹಿರಣ್ಯರೇತಸೇ ತುಭ್ಯಂ ಹಿರಣ್ಯವದನಾಯ ಚ ।*
*ನಮೋ ಹಿರಣ್ಯಶೃಂಗಾಯ ನಿಃಸಂಗಾಯ ಚ ಶೃಂಗಿಣೇ ।।113।।*
*(681-685)*

681. **ಹಿರಣ್ಯರೇತಸೇ ನಮಃ**

ಹಿರಣ್ಯರೇತಸ್ - ಬೆಂಕಿ, ಸೂರ್ಯ, ಶಂಕರ, ಶಿವ,

ಹಿರಣ್ಯ - ಎಂದರೆ ಬಂಗಾರದ / ಸದೃಶವಾದ ಬಂಗಾರದಷ್ಟು ಬೆಲೆ ಬಾಳುವ, ಅಂದರೆ ಬೆಲೆಯನ್ನು ಕಟ್ಟಲು ಅಸಾಧ್ಯವಾದ,

ರೇತಸ್ - ವೀರ್ಯವುಳ್ಳವನು,

ಊರ್ಧ್ವ - ಮೇಲೆ ಹೋಗುವ, ರೇತಸ್ - ವೀರ್ಯವು, ಶಿವ

ಪರಮಾತ್ಮನಾದ ವಿಷ್ಣುವಿನ, ಶಿವನ ರೇತಸ್ - ವೀರ್ಯಕ್ಕೆ ಬೆಲೆಯೇ ಸಾಧ್ಯವಿಲ್ಲ, ಅಮೂಲ್ಯವಾದ್ದು ಅಸದೃಶವಾದ್ದು.

ಸೂರ್ಯ, ಶಿವ, ಅಗ್ನಿ ಎಲ್ಲರೂ ಹಿರಣ್ಯರೇತಸ್‌ಗಳು - ಬಹಳ ಬೆಲೆಯುಳ್ಳವರು.

ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ, ಎಂದ ಮೇಲೆ ಅವನ ವೀರ್ಯವು ಅಪರಿಮಿತ ಶಕ್ತಿಯುತವಾದ್ದು. ಅದರಿಂದ ಅವನಿಗೆ ಹಿರಣ್ಯರೇತಸೇ ನಮಃ ಎಂದು ನಮಸ್ಕರಿಸುತ್ತೇವೆ.

682. ಹಿರಣ್ಯವದನಾಯ (ಚ) ನಮಃ

ಹಿರಣ್ಯ - ಎಂದರೆ ಬಂಗಾರಮಯವಾದ, ಸುವರ್ಣ ಸದೃಶವಾದ, ಸುಂದರವಾದ, ಅತ್ಯಂತ ತೇಜಸ್ಸುಳ್ಳ - ವದನ - ಎಂದರೆ ಮುಖವುಳ್ಳವನು - ಸಿಂಹವದನನಾದ ನರಸಿಂಹ ಸ್ವಾಮಿಯು - ನಯನ ಮನೋಹರವಾದ ಮುಖವುಳ್ಳ ಶ್ರೀಮನ್ಮಹಾವಿಷ್ಣುವು.

ಮಹಾವಿಷ್ಣುವನ್ನು ಏನೆಂದು ಮತ್ತು ಹೇಗೆ ವರ್ಣಿಸಿದರೂ ವರ್ಣಿಸುವವರು ಸೋಲುತ್ತಾರೆಯೇ ಹೊರತು ವರ್ಣನೆಯೂ ಪರಿಪೂರ್ಣವಾಗುವುದಿಲ್ಲ. ಹಾಗಿದೆ ಪರಮಾತ್ಮನ ಸೌಂದರ್ಯ - ಅವನ ಮನೋಹರವಾದ ವದನ, ಸುಂದರ ವದನ - ಹಯವದನ - ಪದ್ಮವದನ - ಚಾರುವದನ - ಇತ್ಯಾದಿ - ಹಿರಣ್ಯವದನನೇ ಅವನು. ಅದೇ ಹೆಸರಿನಿಂದ ಎಲ್ಲರ ಮನಸ್ಸನ್ನು ತನ್ನ ಎಡೆಗೆ ಎಳೆಯುತ್ತಾನೆ. ಎಲ್ಲ ವರ್ಣನೆಯೂ ಪರಮಾತ್ಮನ ಸುಂದರ ದೇಹದ್ದಾದುದರಿಂದ ಇತರರಿಗೆ ಹೋಲಿಸುವುದು ಸಮಂಜಸವಲ್ಲ, ಅವನು ಅನೇಕ ರೂಪಗಳನ್ನು ಧರಿಸುತ್ತಾನೆ. ಆಯಾ ರೂಪದಲ್ಲಿ ಹಾಗೆ ಹಾಗೆಯೇ ಸುಂದರವಾಗಿರುತ್ತಾನೆ, ಭಕ್ತರನ್ನು ಎಳೆಯುತ್ತಾನೆ. ಇದು ಅವನ ವಿಶೇಷ ಗುಣ.

ಆತ್ಮನು ಯಾವ ದೇಹವನ್ನು ಧರಿಸಿದರೂ ಅವನು ಪರಮಾತ್ಮನನ್ನು ಸೇರುವ ಸಾಧನೆಗಾಗಿ ದೇಹವನ್ನು ಉಪಯೋಗಿಸಿಕೊಳ್ಳುತ್ತಾನೆ. ಅದರಿಂದ ಆತ್ಮನು ಪರಮಾತ್ಮನ ಅಂಶವೇ ಆದರೂ ದೇಹಗಳ ಭಾವ, ಸೌಂದರ್ಯಗಳು ಮುಖ್ಯವಾಗುವುದಿಲ್ಲ. ಕುರೂಪಿಯೇ ಆಗಿರಬಹುದು ಆದರೆ ಒಳಗಿರುವ ಮನವು ಕುರೂಪಿಯಾಗಿರುವುದಿಲ್ಲ. ದೇಹಾಭಿಮಾನವನ್ನು ಬಿಟ್ಟರೆ ಪರಮಾತ್ಮನಂತೆ ಹಿರಣ್ಯವದನನೇ ಆಗಬಹುದು - ಹಿರಣ್ಯವದನಾಯ ನಮಃ ಆಗಬಹುದು.

683. ಹಿರಣ್ಯಶೃಂಗಾಯ ನಮಃ

ಶೃಂಗ - ಎಂದರೆ ಕೊಂಬು, ಮಹಾವಿಷ್ಣುವು ಮತ್ಸ್ಯಾವತಾರದಲ್ಲಿ

ವೇದೋದ್ಧಾರಕ್ಕಾಗಿ ಹಡಗನ್ನು ಅಂಧಕಾರದಲ್ಲಿ ಮಹಾಸಾಗರದಲ್ಲಿ ಪ್ರಳಯ ಕಾಲದಲ್ಲಿ ಎಳೆಯಬೇಕಾಯಿತು. ತನ್ನ ಕೊಂಬಿಗೆ ಹಡಗಿನ ಹಗ್ಗವನ್ನು ಕಟ್ಟಿಸಿಕೊಂಡು ಎಳೆದುಕೊಂಡು ಹೋಗುತ್ತಿದ್ದನು. ಇದೇ ಹಿರಣ್ಯಶೃಂಗ, ಬಂಗಾರದ ಶಕ್ತಿಯ ಕೊಂಬು.

**684.** ನಿಃಸಂಗಾಯ ನಮಃ

ತಾನು ಸೃಷ್ಟಿಸಿದ ಜಗತ್ತು, ಬ್ರಹ್ಮಾಂಡಗಳೊಡನೆ ಸೇರಿ ಅವುಗಳಲ್ಲಿ ಪ್ರವೇಶಿಸಿದರೂ ಅದರ ಆಗು ಹೋಗುಗಳಿಗೆ ಅಂಟಿಕೊಳ್ಳದೇ ಹೊರಗೇ ನಿಂತಿರುವುದರಿಂದ ಅವನಿಗೂ ಸೃಷ್ಟಿಗೂ ''ಸಂಗ'ವಿಲ್ಲ. ಅದರಿಂದ ಅವನು ನಿಃಸಂಗನು. ಆತ್ಮನೂ ಇದೇ ರೀತಿ ತನ್ನಲ್ಲಿರುವ ಅಹಂಅನ್ನು ತೊರೆದು ''ನಾನು'' ಎಂಬ ದೇಹಾಭಿಮಾನವನ್ನು ತೊರೆದಾಗ ಅದು ಪರಮಾತ್ಮನಂತೆ ''ನಿಃಸಂಗ''ವಾಗುತ್ತದೆ. ಆಗಲೇ ಪರಮಾತ್ಮನನ್ನು ಸೇರಲು ಸಾಧ್ಯ.

ಇನ್ನೂ ಒಂದು ಹೆಜ್ಜೆ ಮುಂದೆ ಹೋದರೆ ''ಪರಮಾತ್ಮನನ್ನು ಸೇರುವುದು'' ಎಂಬ ಗುರಿಯನ್ನು ಮತ್ತು ಭಾರವನ್ನು ಪರಮಾತ್ಮನಿಗೇ ಬಿಟ್ಟು ಮತ್ತು ಅವನ ಸಂಕಲ್ಪದಂತೆ ನಡೆಯಲಿ ಎಂದರೆ ಅಹಂ ಎನ್ನುವುದು ಇನ್ನೂ ಹೋದಂತಾಗುತ್ತದೆ.

ಆದರೂ ಈ ಇಚ್ಛೆಯೂ ಕಾಮವೇ. ನಿಷ್ಕಾಮವಾಗುವುದಿಲ್ಲ ಎಂದ ಮೇಲೆ ಸಂಪೂರ್ಣ ನಿಷ್ಕಾಮವಾಗಲು ಸಾಧ್ಯವೇ ಇಲ್ಲ. ಕಾಮದ ಕೊನೆಯ ಅಂಶವೂ ಅಣು ರೂಪದಲ್ಲಿ ಇದ್ದೇ ಇರುತ್ತದೆ. ಸಂಪೂರ್ಣ ನಿಃಸಂಗವಾಗುವುದಿಲ್ಲ. ಇಷ್ಟು ಬರಬೇಕಾದರೂ ಪರಮಾತ್ಮನ ಅಪಾರ ಕರುಣೆ, ದಯೆ, ಸಂಸ್ಕಾರಗಳು ಬೇಕು. ಇದೂ ಅವನ ಸಂಕಲ್ಪವೇ!!

ಎಂದ ಮೇಲೆ ಪರಮಾತ್ಮನ ನಿಃಸಂಗವು ಎಂತಹ ಮಹಿಮಾನ್ವಿತವಾದುದು. ಅದರ ಸಮರಾಗುವವರೂ ಸಹ ಯಾರೂ ಇಲ್ಲ. ಯಾರೂ ಆಗುವುದಿಲ್ಲ! ಆದರೆ ಅವನನ್ನು ಮೀರಿಸಿದಂತಾಗುತ್ತದೆ. ಅವನ ಸಂಕಲ್ಪವನ್ನು ಮುರಿದಂತಾಗುತ್ತದೆ. ಆದರಿಂದ ಅವನ ನಿಃ ಸಂಗತ್ವವು ಹಾಗೆಯೇ ಇರಲಿ. ನಮಗೆ ಬರುವಷ್ಟು ಬರಲಿ ಎಂದಷ್ಟೇ ಸಂತೋಷಪಡಬೇಕು.

**685.** ಶೃಂಗಿಣೇ ನಮಃ

ಶೃಂಗ - ಎಂದರೆ ಶಿಖರ, ಕೊಂಬು, ಕಿರೀಟಪ್ರಾಯವಾದ ಸ್ಥಳ, ವಸ್ತು, ಶೃಂಗವುಳ್ಳವನು ಶೃಂಗಿ,

ಪರಮಾತ್ಮನಲ್ಲಿ ಎಲ್ಲೆಲ್ಲಿಯೂ ಇಲ್ಲದ ಮತ್ತು ಇರುವುದಕ್ಕೆಲ್ಲ ಉತ್ತಮವಾದ ಗುಣಗಳು, ವಸ್ತುಗಳು, ಸೌಂದರ್ಯ, ಕಾರ್ಯಶಕ್ತಿ, ಚತುರತೆ, ಯುಕ್ತಿ ಸಕಲ ಚತುಃಷಷ್ಟಿಗಳಿಗೆಲ್ಲ ಮೀರಿದ ಗುಣಗಳು ಇರುವುದರಿಂದ

ಅವನು ಶೃಂಗಪ್ರಾಯನು, ಶೃಂಗವುಳ್ಳವನು - ಶೃಂಗಿ - ಅದರಿಂದ ಅವನಿಗೆ ಶೃಂಗಿಣೇ ನಮಃ ಎನ್ನುತ್ತೇವೆ.

ಸೃಷ್ಟಿಯಲ್ಲಿರುವ ಪ್ರತಿಯೊಂದು ಭಾಗ, ಜೀವಕೋಟಿಯ ಯೋನಿಗಳು, ಸಚರಾಚರ ವಸ್ತುಗಳು - ಇವುಗಳಲ್ಲಿ ಅವವುಗಳಲ್ಲಿಯೇ ಶೃಂಗಪ್ರಾಯವಾದುದು ಇರುತ್ತದೆ, ಆದರೆ ಇವೆಲ್ಲವುಗಳಿಗೂ ಅತ್ಯುತ್ತಮ ಶೃಂಗಪ್ರಾಯವಾದ ಪರಮಾತ್ಮ, ಎಲ್ಲ ಶೃಂಗಗಳನ್ನು ಹೊಂದಿರುವ ಶೃಂಗಿಯು ಪರಮಾತ್ಮನೇ. ಉದಾಹರಣೆಗೆ ಶ್ರೀಕೃಷ್ಣನು ಗೀತೆಯಲ್ಲಿ ಶೃಂಗಗಳ ಸಾರವನ್ನು ಹೇಳಿದ್ದಾನೆ.

*"ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।*
*ಮನಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥*
*(ಶ್ಲೋಕ 42, ಅಧ್ಯಾಯ 3 - ಗೀತಾ)*

ಸಕಲ ವಸ್ತುಗಳಲ್ಲಿ ಇಂದ್ರಿಯಗಳು ಉತ್ತಮವಾದವುಗಳು, ಇಂದ್ರಿಯಗಳಿಗಿಂತ ಉತ್ತಮವಾದುದು ಮನಸ್ಸು, ಮನಸ್ಸಿಗಿಂತ ಉತ್ತಮವಾದುದು ಬುದ್ಧಿ, ಬುದ್ಧಿಗಿಂತ ಉತ್ತಮವಾದುದು ಸಃ (ಎಂದರೆ) ಅವನು" ಪರಮಾತ್ಮನು ಶೃಂಗಪ್ರಾಯನು - ಶೃಂಗಿ.

ಯಾವ ಯಾವ ಸಮೂಹ, ಯೋನಿ, ಸಸ್ಯಗಳು ವಸ್ತುಗಳು - ಅವುಗಳಲ್ಲಿ ಶೃಂಗ ಪ್ರಾಯವಾದ ಯಾವುದಿದೆಯೋ ಅದು ಪರಮಾತ್ಮನೇ ಎಂದು ತಿಳಿಯಬೇಕು - ಇದು ವಿಭೂತಿ ಯೋಗ - ಗೀತೆಯಲ್ಲಿನ ಸಾರಾಂಶ -

*ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।*
*ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶ ಸಂಭವಮ್ ॥*
*(ಶ್ಲೋಕ 41, ಅಧ್ಯಾಯ 10 - ಗೀತಾ)*

ಪರಮಾತ್ಮನೇ ಶೃಂಗನು ಶೃಂಗಗಳಿಗೆಲ್ಲ ಶೃಂಗನು ಮತ್ತೆ

*ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।*
*ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥*
*(ಶ್ಲೋಕ 42, ಅ. 10 - ಗೀತಾ)*

ಇದರಿಂದ ಪರಮಾತ್ಮನ ಶ್ರೇಷ್ಟತ್ವವು ಬಹಳ ವಿವರವಾಗಿ ವ್ಯಕ್ತವಾಗುತ್ತದೆ - ಶೃಂಗಿ - ಶೃಂಗಗಳಿಗೆ ಶೃಂಗಿ, ಅವನೇ.

*ಭೈರವಾಯ ಸುಕೇಶಾಯ ಭೀಷಣಾಯಾಂತ್ರಮಾಲಿನೇ ।*
*ಚಂಡಾಯ ರುಂಡಮಾಲಾಯ ನಮೋ ದಂಡಧರಾಯ ಚ ॥114॥*
*(686-692)*

**686. ಭೈರವಾಯ ನಮಃ**

ಭೈರವ - ಈಶ್ವರನ ಸಂಹಾರಾವತಾರ - ಭೈರವ ರಾಗ,
- ಭಯಂಕರವಾದ ರೂಪ, ಭಯಾನಕ ರಸ, ಹೆದರಿಕೆ.

ಪರಮಾತ್ಮನು ದುಷ್ಟರನ್ನು ಸಂಹಾರ ಮಾಡುವಾಗ, ದುಷ್ಟತನದ ಭಾವಕ್ಕೆ ತಕ್ಕಂತೆ ತನ್ನಲ್ಲಿಯೂ ಭಯಾನಕ ರೂಪವನ್ನು ತಳೆಯಬೇಕಾಗುತ್ತದೆ. ಅತ್ಯಂತ ಬಲಿಷ್ಠನಾದ, ನಿಷ್ಕರುಣಿಯಾದ ರಾಕ್ಷಸನಾದ ಹಿರಣ್ಯಕಶಿಪುವಿನ ಸಂಹಾರ ಮಾಡಲು ಭಯಂಕರವಾದ ನರಸಿಂಹಾವತಾರ - ಸಿಂಹದ ತಲೆ, ನರನ ಶರೀರ - ಕಂಬದಿಂದ ತಳೆದು ಬರಬೇಕಾಗುತ್ತದೆ. ಈ ರೂಪವನ್ನು ಸೃಷ್ಟಿಯಲ್ಲಿನ ಯಾವ ದೇವ ದೇವತೆಯಾಗಲೀ, ಜೀವಕೋಟಿಯ ಯಾವ ಜೀವಿಯೇ ಆಗಲೀ, ಅಥವಾ ಅತಿ ಬುದ್ಧಿವಂತಿಕೆಯನ್ನು ಹೊಂದಿದ್ದ ಮತ್ತು ಬ್ರಹ್ಮನಿಂದ ವರವನ್ನು ಪಡೆದ ಸಾಕ್ಷಾತ್ ಹಿರಣ್ಯಕಶಿಪುವಾಗಲೀ ನಿರೀಕ್ಷಿಸಿರಲಿಲ್ಲ. ಇದು ಮಹಾಭಯಂಕರ ರೂಪ, ವಿಚಿತ್ರವಾದ ಮತ್ತು ವಿಕಾರವಾದ ರೂಪ, ಹೆಚ್ಚೇನೆಂದರೆ ಹಿರಣ್ಯಕಶಿಪುವನ್ನು ಸಂಹಾರ ಮಾಡಿದ ರೀತಿ ಇನ್ನೂ ಕರಾಳವಾದುದು. ಆ ಸಮಯದ ನರಸಿಂಹ ಸ್ವಾಮಿಯ ರೂಪವು ಸೃಷ್ಟಿಯಲ್ಲಿಯೇ ಅಷ್ಟು ಭಯಂಕರವಾದ್ದು ಮತ್ತು ನಿಷ್ಕರುಣೆಯಾದ್ದು ಬೇರೊಂದು ಇಲ್ಲ, ಇರಲಿಲ್ಲ, ಮುಂದೆಯೂ ಇರುವುದಿಲ್ಲ. ಇದು ನರಸಿಂಹಾವತಾರದ ವೈಶಿಷ್ಟ್ಯ. ಭೈರವವಾದ್ದು - ಆದರಿಂದ ಅವನನ್ನು ಭೈರವಾಯ ನಮಃ ಎಂದು ಬ್ರಹ್ಮದೇವರು ಸಂಬೋಧಿಸುತ್ತಾರೆ.

ಈಶ್ವರನು ಸಕಲ ಜಗತ್ತನ್ನು ಲಯಮಾಡುವ ಕರ್ತೃ, ಲಯಮಾಡುವಾಗ ಭೈರವ ರಾಗದಿಂದ ಭೈರವ್ಯ ನೃತ್ಯವನ್ನು ಮಾಡುತ್ತಾನೆ. ಈ ಕಾರಣದಿಂದ ಶಿವನನ್ನು ಭೈರವೇಶ್ವರ ಎಂದು ಹೇಳುತ್ತೇವೆ.

ಏನೂ ತೋರದಾಗ, ಕರುಣಾ ಸಮುದ್ರದ ಬಿಂದು ಸಹಾಯಕ್ಕೆ ಬರುತ್ತದೆ. ಮಹಾಭಯಂಕರವಾದ ಪರಿಸ್ಥಿತಿಯಲ್ಲಿ ಬುದ್ಧಿ ಮನಸ್ಸುಗಳು ತಮ್ಮ ತಮ್ಮ ಸಮಾಧಾನ ಭಾವವನ್ನು ಕಳೆದು ಕೊಳ್ಳುತ್ತವೆ. ಆಗ ಉತ್ಕಂಟಿತ ರೀತಿಯಲ್ಲಿ ಭೈರವತೆಯು ಹೊರ ಹೊಮ್ಮುತ್ತದೆ.

**687. ಸುಕೇಶಾಯ ನಮಃ**

ಕೇಶ - ಎಂದರೆ ಕೂದಲು,

ಸುಕೇಶ - ಎಂದರೆ ಹೇರಳವಾಗಿ ನಯವಾಗಿ ಬೆಳೆದ ಕೂದಲು,

- ಆಹ್ಲಾದಕರವಾದ, ಅಮೃತಮಯವಾದ ಕಿರಣಗಳು - ಬೆಳದಿಂಗಳ ಚಂದ್ರನ ಶಾಂತವಾದ, ತಣ್ಣಗಿರುವ ಕಿರಣಗಳು,

ಕಃ - ಯಾರು, ಈಶ - ಒಡೆಯನು, ಸು - ಒಳ್ಳೆಯವನು, ಪ್ರಾಣಪ್ರಿಯನಾದ ಒಡೆಯನು ಯಾರೂ ಎಂದರೆ ಪರಮಾತ್ಮನೇ, ಅವನಷ್ಟು ಹಿತೈಷಿಗಳು ಯಾರೂ ಇಲ್ಲ.

ಪರಮಾತ್ಮನ ಕೃಪೆಯು, ದಯೆಯು ಅವನ ಸಾಗರದಿಂದ ಬಿಂದುವಿನ ಕಣಮಾತ್ರ ದೊರೆತರೂ ಅದು ಜೀವಿಗಳಿಗೆ ಒಂದು ಸಾಗರವನ್ನೇ ಪಡೆದಂತೆ ಆಗುತ್ತದೆ. ಆಗ ಅವನ ಸಾಗರದಲ್ಲಿರುವ ಕೃಪೆಯ ಪ್ರಮಾಣ ಕುಂಠಿತವಾಗುವುದಿಲ್ಲ. ಅದು ಪೂರ್ಣವೇ ಇರುತ್ತದೆ. ಪಡೆದವರಲ್ಲಿಯೂ ಪೂರ್ಣವೇ ಇರುತ್ತದೆ.

*ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದುಚ್ಯತೆ ।*
*ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥*
*ಓಂ ಶಾಂತಿಃ ಶಾಂತಿಃ ಶಾಂತಿಃ ॥*

ಎಂಬಂತೆ ಸಕಲವೂ ಪೂರ್ಣವಾಗಿಯೇ ಇರುತ್ತದೆ. ಜೀವಿಯು ಮಾತ್ರ ಲಾಭವನ್ನು ಪಡೆಯುತ್ತದೆ.

ಸುಕೇಶಾಯ ನಮಃ - ಸುಂದರವಾಗಿ ಬೆಳೆದಿರುವ ಕೂದಲಿನ ಸಮೂಹ - ಪರಮಾತ್ಮನು ಅವನ ಅಂಗ-ಅಂಗಗಳಲ್ಲಿಯೂ ಸುಂದರವಾಗಿರುತ್ತಾನೆ. ಸುಂದರವಾದ ಕಿರೀಟವನ್ನು ತನ್ನ ತಲೆಯ ಮೇಲೆ ಧರಿಸಿ ತನ್ನ ಸುಕೇಶವನ್ನು ಬೆನ್ನಮೇಲೆಯೂ, ತಲೆಯ ಸುತ್ತಲೂ ಹರಡಿಕೊಂಡು ಮುಖಮಂಡಲವನ್ನು ಸುಕೇಶವು ಶೋಭಿಸುತ್ತದೆ, ಶೋಭೆಯು ಹೆಚ್ಚುತ್ತದೆ - ಶೋಭಾಯಮಾನವಾಗಿರುತ್ತದೆ, ನಯನ ಮನೋಹರವಾಗಿರುತ್ತದೆ.

ಸುಕೇಶ - ಭಗವಂತನಷ್ಟು ಪ್ರಿಯರು ಯಾರೂ ಇಲ್ಲ, ಅವನಂತೆ ನಮ್ಮ ಎಲ್ಲ ಆಗು ಹೋಗುಗಳನ್ನು ನಡೆಸುವವನು ಯಾರೂ ಇಲ್ಲ. ಅವನನ್ನು ಬಿಟ್ಟರೆ ಉಳಿದ ಎಲ್ಲರೂ ಸಮಯ ಸಾಧಕರು. ಶಂಕರರು ಭಜ ಗೋವಿಂದಂ ಸ್ತೋತ್ರದಲ್ಲಿ ಹೇಳಿರುವಂತೆ ಇತರರು ಸಮಯ ಸಾಧಕರು ಅಷ್ಟೆ - ?? ಅದರಲ್ಲಿ ಬರುವ ಪ್ರತಿಯೊಂದು ಶ್ಲೋಕವೂ ಪ್ರಪಂಚದಲ್ಲಿ ನಡೆಯುವ, ಸಮಯ ಸಾಧಕರ ನಡತೆಯ ಕಟು ಸತ್ಯವನ್ನು ಹೊರ ಹೊಮ್ಮುತ್ತದೆ. ಇಷ್ಟಾದರೂ ವೈರಾಗ್ಯ ಬರುವುದೆಂತು? ಯಾವಾಗ?? ಇದಕ್ಕೆ ಭಗವಂತನ ಪರಮ ಕೃಪೆ ಅವಶ್ಯಕತೆ ಬಹಳ ಆಗತ್ಯ. ಇನ್ನೊಂದು ಸತ್ಯದರ್ಶನವೆಂದರೆ

*"ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ ।*
*ಬ್ರಹ್ಮ ಸತ್ಯಂ ಜಗನ್ಮಿಥ್ಯಾ ............ "*

ಈ ಸತ್ಯವನ್ನು ಕಾಣಬೇಕಾದರೆ ಭಾವಿಸಬೇಕಾದರೆ ಭಗವಂತನ ಸುಕೇಶಗಳು ಅನವರತ ಬೀಳಬೇಕು. ಸುಕೇಶನ ಕರುಣೆ ಅಪಾರ!! ಸುಕೇಶಾಯ ನಮೋನ್ನಮಃ.

688. ಭೀಷಣಾಯ ನಮಃ

ಭೀಷಣ - ಹೆದರಿಕೆಯನ್ನು ಉಂಟುವ ಸನ್ನಿವೇಶ.

- ರೌದ್ರವಾದ್ದು, ರೌದ್ರರಸ, ನವರಸಗಳಲ್ಲಿ ಒಂದು.

ನವರಸಗಳು, ಅತ್ಯಾಕರ್ಷವಾದುದು, ಭೀಷಣರಸವು ಭಯಂಕರ ಪ್ರಧಾನವಾದ್ದು. ಅತ್ಯಂತ ರೌದ್ರವಾದ್ದು. ಇದನ್ನು ಯಾರೂ ಅನುಭವಿಸಲು, ನೋಡಲು, ಕೇಳಲು ಇಚ್ಛಿಸುವುದಿಲ್ಲ. ಪ್ರತಿಯೊಂದು ರಸವೂ ಪರಮಾತ್ಮನ ಇಚ್ಛಾ ಭಾವವನ್ನು ಪ್ರತಿಪಾದಿಸುತ್ತದೆ. ರಸಗಳು ಪರಮಾತ್ಮನೇ. ಅವನನ್ನು ಅವುಗಳಿಂದಲೇ ನಮಿಸುತ್ತೇವೆ.

689. ಆಂತ್ರಮಾಲಿನೇ ನಮಃ

ಆಂತರ - ಗುಪ್ತ, ಮನಸ್ಸಿನೊಳಗಿನ ಸ್ವಭಾವ, ಅಂತರಂಗದ ಸ್ವಭಾವ.

ಆಂತ್ರಮಾಲಿ - ಅಂತರಂಗದಲ್ಲಿನ ಸ್ವಭಾವಗಳ ಸರಣಿ, ಈ ಭಾವದ ಸರಣಿಯೇ ಅವನು.

ಪರಮಾತ್ಮನು ಅಂತರಂಗದಲ್ಲಿ ಸ್ವಾಮಿಯಾಗಿ ನಿಂತು ಆತ್ಮನನ್ನು ಅಂಧಕಾರ, ಮಾಯೆಯಿಂದ, ಭವಸಾಗರದಿಂದ ಹೊರಗೆ ನಡೆಸುವವನು - ಆಂತ್ರಮಾಲಿನೇ ನಮಃ ಅವನು ಆತ್ಮಸಾಕ್ಷಿ, ಸಾಕ್ಷಿಗೋಪಾಲ, ಸದಾ ಆತ್ಮನ ಜೊತೆಯಲ್ಲಿಯೇ ಇರುವವನು - ಕಣ್ಣುಗಳನ್ನು ರೆಪ್ಪೆಗಳು ಹೇಗೆ ಕಾಪಾಡುವುವೋ ಅದೇ ರೀತಿ ಆತ್ಮನನ್ನು ರಕ್ಷಿಸುತ್ತಾನೆ.

690. ಚಂಡಾಯ ನಮಃ

ಚಂಡಾಯ - ಭಯಂಕರವಾದವನು, ಬಹಳ ಶಾಖವಾದ್ದು - ಚಂಡ.

ಪರಮಾತ್ಮನು ಭಯಂಕರ ಸ್ವರೂಪವನ್ನು ಸಹ ಹೊಂದುತ್ತಾನೆ, ಹೊಂದಬಲ್ಲನು. ಸನ್ನಿವೇಶಕ್ಕೆ ತಕ್ಕಂತೆ ಭಯಂಕರವಾದ ರೂಪವನ್ನು, ಸುಂದರ, ಸೌಮ್ಯ, ಆಕರ್ಶಕ ರೂಪಗಳನ್ನು ಹೊಂದುತ್ತಾನೆ. ಆದರೆ ಅವನು ಕೇವಲ ಸೌಮ್ಯನೇ. ಸದಾ ಸುಂದರನು, ನಯನ ಮನೋಹರನು, ಚಂಡ ಸ್ವರೂಪನಾಗುವುದು ಕೇವಲ ದುಷ್ಟರ ಸಂಹಾರಕ್ಕಾಗಿ.

691. ರುಂಡಮಾಲಾಯ ನಮಃ

ರುಂಡ - ಎಂದರೆ ತಲೆಯ ಬುರುಡೆ, ಇವುಗಳನ್ನು ಮಾಲೆಯಾಗಿ ಹಾಕಿ ಕೊಂಡಿರುವವನು,

ಕಾಳಿಯ ಅವತಾರದಲ್ಲಿ ರುಂಡ ಮಾಲೆಯನ್ನು ಹಾಕಿಕೊಂಡಿರುತ್ತಾಳೆ, ಇದು ರೌದ್ರರೂಪ, (ರುಂಡ - ತಲೆಯಿಲ್ಲದ ಶರೀರ)

**692. ದಂಡಧರಾಯ ನಮಃ**

ದಂಡ - ಕೋಲು, ತಪ್ಪು ಮಾಡಿದ್ದಕ್ಕೆ ಶಿಕ್ಷೆ ಕೊಡುವುದು, ವ್ಯರ್ಥವಾದುದು. ಸನ್ಯಾಸಿಗಳು ಹಿಡಿದುಕೊಳ್ಳುವ ಕೋಲು. ಶಿಕ್ಷೆ ಕೊಡುವ ಕಾನೂನುಗಳು,

ಪರಮಾತ್ಮನು ದಂಡವನ್ನು ಹಿಡಿದುಕೊಂಡು ಜೀವಿಗಳನ್ನು ಭವಸಾಗರದಲ್ಲಿ ಸನ್ಮಾರ್ಗದಲ್ಲಿ ನಡೆಸುತ್ತಾನೆ. ಆದರಿಂದ ಅವನು ದಂಡಧರನು. ದಂಡವನ್ನು ಉಪಯೋಗಿಸುವವರಲ್ಲಿ ಇವನು ಬಹಳ ಶ್ರೇಷ್ಠನು. ಇವನಿಗಿಂತ ಶ್ರೇಷ್ಠರು ಬೇರೊಬ್ಬರಿಲ್ಲ.

ದಂಡವೆಂಬ ಆಯುಧವನ್ನು ಹಿಡಿದಿರುವವನು - ದಂಡಾಯುಧಪಾಣಿ - ಸುಬ್ರಮಣ್ಯ.

ದಂಡ - ಎಂದರೆ ಯಮ, ವಿಷ್ಣು, ಶಿವ.

ದಂಡಧರ - ಯಮ, ನ್ಯಾಯಧೀಶ - ಈ ಕೆಲಸವನ್ನು ನಿಷ್ಪಕ್ಷಪಾತವಾಗಿ ನಡೆಸುವವನು ಪರಮಾತ್ಮನೊಬ್ಬನೇ!

*ಅಖಂಡತತ್ತ್ವರೂಪಾಯ ಕಮಂಡಲುಧರಾಯ ಚ ।*
*ನಮಸ್ತೇ ಚಂಡಸಿಂಹಾಯ ಸತ್ಯಸಿಂಹಾಯ ತೇ ನಮಃ ।।115।।*
*(693-696)*

**693. ಅಖಂಡತತ್ತ್ವರೂಪಾಯ ನಮಃ**

ಖಂಡ - ಭಾಗ ಮಾಡುವುದು, ಅ - ಸಾಧ್ಯವಿಲ್ಲದ್ದು, ಹೀಗೆ ಮಾಡಿದರೂ ಮೊದಲಿನ ಹಾಗೆಯೇ ಇರುವಂತಹದು ಎಂದರೆ ಪ್ರತಿ ಭಾಗದಲ್ಲಿಯೂ ಮೊದಲಿನ ಎಲ್ಲಾ ಗುಣ, ಸ್ವಭಾವಗಳನ್ನು ಇರಿಸಿಕೊಂಡಿರುವಂತಹದು.

ಪರಮಾತ್ಮನು ಪರಿಪೂರ್ಣನು. ಅವನು ಹೇಗೆ ಇದ್ದರೂ ಎಲ್ಲೇ ಇದ್ದರೂ, ಯಾವ ಕಾಲ ದೇಶದಲ್ಲಿಯೇ ವ್ಯಕ್ತವಾದರೂ ಅವನು ಪರಿಪೂರ್ಣನು. ಅಖಂಡನು, ಭಾಗ ಮಾಡಲ್ಪಡದವನು, ಭಾಗ ಮಾಡಲ್ಪಟ್ಟರೂ ಸಹ ಪ್ರತಿ ಭಾಗವು ಪರಿಪೂರ್ಣವಾಗಿಯೇ ಇರುತ್ತದೆ. ಅಖಂಡನು. ಈ ಅಖಂಡ ಪ್ರತಿಪಾದನೆ ಭಗವಂತನೊಬ್ಬನಿಗೇ ಅನ್ವಯಿಸುತ್ತದೆ. ಬೇರೆ ಯಾರಿಗೂ ಅನ್ವಯಿಸುವುದಿಲ್ಲ. ಅವನು ಏಕಮೇವಾದ್ವಿತೀಯನು.

ಆತ್ಮವೂ ಅಖಂಡವೇ. ಪರಮಾತ್ಮ ಅಂಶರೂಪವಾಗಿಯೇ ಆತ್ಮಗಳು ಇರುತ್ತವೆ. ಪ್ರತಿಯೊಂದು ಆತ್ಮವೂ ಪರಿಪೂರ್ಣವೇ!

*ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದುಚ್ಯತೇ ।*
*ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥*

ಈ ಮಂತ್ರವು ಬಹಳ ಸಮಂಜಸವಾಗಿ ಪರಮಾತ್ಮನಿಗೆ ಅನ್ವಯಿಸ್ತುದೆ. ಅಖಂಡತತ್ತ್ವವೂ ಪೂರ್ಣವಾಗಿ ಅವನಿಗೆ ಅನ್ವಯಿಸುತ್ತದೆ.

ತತ್ತ್ವ - ಪರಮಾತ್ಮ, ಸತ್ಯ, ಮೂಲಭೂತ ಸ್ಥಿತಿ, ಸತ್ಯ ಸ್ವರೂಪ, ವಸ್ತುಸ್ಥಿತಿ, ಮುಂತಾಗಿ.

ಇವೆಲ್ಲ ಅರ್ಥದಲ್ಲಿಯೂ ತತ್ತ್ವವು ಒಂದೇ. ಅವಿಚ್ಛಿನ್ನ. ಭಾಗಮಾಡಲು ಅಸಾಧ್ಯವಾದುದು. ಈ ಎಲ್ಲ ಅರ್ಥಗಳೂ ಪರಮಾತ್ಮನನ್ನೇ ಪ್ರತಿಪಾದಿಸುತ್ತವೆ. ಅದರಿಂದ ಪರಮಾತ್ಮನು ಅಖಂಡತತ್ತ್ವ ಸ್ವರೂಪನು. ಅವನನ್ನು ಅಖಂಡತತ್ತ್ವರೂಪಾಯ ನಮಃ ಎಂದು ನಮಸ್ಕರಿಸುತ್ತೇವೆ.

**694. ಕಮಂಡಲುಧರಾಯ ನಮಃ**

ಕಮುಂಡಲು - ಸನ್ಯಾಸಿಯ ನೀರಿನ ಪಾತ್ರೆ.

ಕಮಂಡಲು ಮತ್ತು ದಂಡವನ್ನು ಸಂನ್ಯಾಸಾಶ್ರಮವನ್ನು ಸ್ವೀಕರಿಸಿದವರು ತಮ್ಮ ಜೊತೆಯಲ್ಲಿ ಅವಿಭಾಜ್ಯ ಅಂಗವಾಗಿ ಪರಿಗಣಿಸುತ್ತಾರೆ.

ಕೆಲವು ದೇವ / ದೇವತೆಗಳು ಕಮಂಡಲವನ್ನು ಕೈಯಲ್ಲಿ ಹಿಡಿದಿರುತ್ತಾರೆ. ದತ್ತಾತ್ರೇಯರು, ದುರ್ಗಾ, ವಾಮನಾವತಾರದಲ್ಲಿ ಶ್ರೀಮನ್ಮಹಾವಿಷ್ಣು.

ಋಷಿ, ಮುನಿಗಳು, ಕಮಂಡಲುವನ್ನು ಉಪಯೋಗಿಸುತ್ತಾರೆ.

ಕವೇರ ಮುನಿಯ ಮಗಳಾದ ಕಾವೇರಿಯನ್ನು ಅವಳ ಪತಿಯಾದ ಅಗಸ್ತ್ಯರು ಸ್ನಾನಕ್ಕಾಗಿ ನದಿಗೆ ಹೋಗುವಾಗಿ ಕಾವೇರಿಯನ್ನು ನೀರಿರುವ ಕಮಂಡಲದಲ್ಲಿ ಆವಾಹಿಸಿ ಹೋಗುತ್ತಿದ್ದರು. ಕಾವೇರಿಯು ಎಲ್ಲಿ ಅವರನ್ನು ತ್ಯಜಿಸುವಳೋ ಎಂಬ ಭಾವನೆಯಿಂದ ಈ ರೀತಿ ಮಾಡುತ್ತಿದ್ದರು.

ಬ್ರಹ್ಮ ದೇವರು ಕಮಂಡಲವನ್ನು ಧರಿಸಿರುವುದರಿಂದ ಅವರಿಗೆ ಕಮಂಡಲುಧರಾಯ ನಮಃ ಎಂದು ನಮಸ್ಕರಿಸುತ್ತೇವೆ.

**695. ಚಂಡಸಿಂಹಾಯ ನಮಃ**

ಚಂಡ - ಎಂದರೆ ಕ್ರೂರವಾದ್ದು, ಭಯಂಕರವಾದುದು.

ಈ ರೀತಿ ರೂಪವನ್ನು ಮತ್ತು ಕಾರ್ಯಮಾಡುವವನು ಅವನು ಚಂಡನು. ಅವರುಗಳಲ್ಲೆಲ್ಲಾ ಸಿಂಹ ಸ್ವರೂಪನು, ರಾಜನು - ಚಂಡಸಿಂಹಾಯ ನಮಃ.

ನರಸಿಂಹ ಸ್ವಾಮಿಯು ಉಗ್ರರೂಪನು ಮತ್ತು ಭಯಂಕರವಾದ ಕೆಲಸ ಮಾಡಿದವನು.

ಪ್ರತಿ ಯೋನಿಯಲ್ಲಿಯೂ ಒಂದೊಂದು ಚಂಡಸಿಂಹನಿರಬಹದು. ಆದರೆ ಎಲ್ಲ ಯೋನಿಯ ಚಂಡಸಿಂಹರುಗಳಿಗೂ ಗುರುತರವಾದವನು ಪರಮಾತ್ಮನು - ಚಂಡಸಿಂಹನು - ಅದರಿಂದ ಅವನಿಗೆ ಚಂಡಸಿಂಹನಿಗೆ ನಮಸ್ಕಾರಗಳು.

**696. ಸತ್ಯಸಿಂಹಾಯ ನಮಃ**

ಸತ್ಯವನ್ನು ಪ್ರತಿಪಾದಿಸುವವರಿಗೆಲ್ಲ ಸಿಂಹಸ್ವರೂಪವನು ಪರಮಾತ್ಮನು.

ಸತ್ಯವನ್ನೇ ಧೈರ್ಯದಿಂದ ಬಯಲಿಗೆಳೆಯುವವನು - ಪರಮಾತ್ಮ. ಪರಮಾತ್ಮನೊಬ್ಬನನ್ನು ಬಿಟ್ಟರೆ ಈ ಸತ್ಯಪ್ರತಿಪಾದನೆ ಮಾಡುವರು ಯಾರೂ ಇಲ್ಲ. ಅದರಲ್ಲೂ ನಿರಂತರವಾಗಿ ಸತ್ಯವನ್ನೇ ಸ್ಥಂಬೀಭೂತವಾಗಿ ಪ್ರತಿಪಾದಿಸುವವರು ಯಾರೂ ಇಲ್ಲ.

*ನಮಸ್ತೇ ಶ್ವೇತಸಿಂಹಾಯ ಪೀತಸಿಂಹಾಯ ತೇ ನಮಃ ।*
*ನೀಲಸಿಂಹಾಯ ನೀಲಾಯ ರಕ್ತಸಿಂಹಾಯ ತೇ ನಮಃ ॥116॥*
*(697-701)*

**697. ಶ್ವೇತಸಿಂಹಾಯ ನಮಃ**

ಶ್ವೇತ - ಎಂದರೆ ಬಿಳುಪಾದ, ಸಿಂಹ - ಸಿಂಹವು.

ಸಿಂಹದ ಬಣ್ಣಗಳ ವರ್ಣನೆಯನ್ನು ಮಾಡಿ ನಮಸ್ಕಾರಮಾಡುವುದು.

**698. ಪೀತ ಸಿಂಹಾಯ ನಮಃ**

ಪೀತ - ಹಳದಿ, ಸಿಂಹ, ಹಳದಿ ಬಣ್ಣದ ಸಿಂಹ.

**699. ನೀಲಸಿಂಹಾಯ ನಮಃ**

ನೀಲಿಯ ಬಣ್ಣದ ಸಿಂಹನಿಗೆ ನಮಸ್ಕಾರ.

**700. ನೀಲಾಯ ನಮಃ**

ನೀಲಿಯ ಬಣ್ಣದವನು - ನೀಲನು.

ನೀಲಮೇಘಶ್ಯಾಮ - ಕೃಷ್ಣ, ಶ್ರೀರಾಮ.

ನೀಲ - ನೀಲಿಯ ಮಣಿ, ರತ್ನ, ಇಂದ್ರ ನೀಲಮಣಿ.

**701. ರಕ್ತಸಿಂಹಾಯ ನಮಃ**

ರಕ್ತವರ್ಣದ ಸಿಂಹ - ಕೆಂಪು ಬಣ್ಣದ ಸಿಂಹ, ಕೆಂಪು ಬಣ್ಣದಲ್ಲಿಯೂ ಹಲವು ರೀತಿ ಇರುತ್ತವೆ. ಸಿಂಹವು ಅನೇಕ ವರ್ಣದ್ದಾಗಿರಬಹುದು. ಇದು ಸಹಜ ರೀತಿ.

ಆದರೆ ನರಸಿಂಹ ಸ್ವಾಮಿಯು ಹಿರಣ್ಯಕಶಿಪುವನ್ನು ಸಂಹಾರ ಮಾಡಿದಾಗ ಅವನು ರಾಕ್ಷಸನ ಎದೆಯನ್ನು ಸೀಳಿ ಕರುಳಿನ ಮಾಲೆ ಹಾಕಿಕೊಂಡು ರಕ್ತಪಾನವನ್ನು ಮಾಡಿದನು. ನರಸಿಂಹನ ದೇಹವೆಲ್ಲ ರಕ್ತಮಯವಾಗಿತ್ತು, ರಕ್ತಸಿಂಹವಾದನು. ಅಷ್ಟೇ ಅಲ್ಲ - ಅವನು - ನರಸಿಂಹನು ರಕ್ತ ಸಿಕ್ತ ಸಿಂಹನಾದನು - ಮುಖ, ಮೈ, ತಲೆ, ಕೈ, ತೊಡೆಗಳು, ಅವನ ದೇಹದ ಎಲ್ಲ ಭಾಗಗಳೂ ರಕ್ತ, ಮಾಂಸಮಯವಾಗಿದ್ದವು. ನರ - ಎಂದರೆ ಮಾನುಷ ಸ್ವಭಾವೇ ಉಳಿದಿರಲಿಲ್ಲ. ಕಂಬದ ನರಸಿಂಹನು - ರಕ್ತ ಸಿಂಹನಾದನು - ಮೃಗೇಂದ್ರನಿಗೆ ತಕ್ಕಂತೆ ಕಾಣುತ್ತಿದ್ದನು - ರಕ್ತಸಿಂಹಾಯ ತೇ ನಮಃ.

*ನಮೋಽದಾರಿದ್ರಸಿಂಹಾಯ ಧೂಮ್ರಸಿಂಹಾಯ ತೇ ನಮಃ ।*
*ಮೂಲಸಿಂಹಾಯ ಮೂಲಾಯ ಬೃಹತ್ಸಿಂಹಾಯ ತೇ ನಮಃ ॥117॥*
*(702-706)*

**702. ಅದಾರಿದ್ರಸಿಂಹಾಯ ನಮಃ**

ದಾರಿದ್ರ - ಎಂದರೆ ಏನೋ ಒಂದು ಕಡಿಮೆಯಿರುವುದು ಅಥವಾ ಕೊರತೆ ಇರುವುದು - ಬಡತನ.

ದರಿದ್ರ - ಹಣವಿಲ್ಲದವನು.

ದರಿದ್ರತನ - ಬಡತನ ಇಲ್ಲದಿರುವುದಕ್ಕೆ ಅದಾರಿದ್ರ, ಎಂದರೆ ಶ್ರೀಮಂತವಾಗಿರುವುದು - ದರಿದ್ರತೆಯನ್ನು ನಾಶಮಾಡಿಕೊಂಡು ಶ್ರೀಮಂತನಾಗಿರುವುದು - ಇದರಲ್ಲಿ ವಿಶೇಷ ಸ್ಥಾನ ಪಡೆಯುವುದು - ಅದಾರಿದ್ರಸಿಂಹತ್ವ. ಪರಮಾತ್ಮನು ಶ್ರೀ - ಎಂದರೆ ಸಾಕ್ಷಾತ್ ಧನ ದೇವತೆಯಾದ ಲಕ್ಷ್ಮೀಯನ್ನೇ ಹೊಂದಿರುವುದರಿಂದ ಅವನು ಸದಾ ಅದಾರಿದ್ರನು, ಶ್ರೀಮಂತಿಕೆಯು ಹಣದ್ದೇ ಆಗಬೇಕಿಲ್ಲ. ಹಣವು ಒಂದು ತರಹ ಶ್ರೀಮಂತಿಕೆಯನ್ನು ಪ್ರಕಾಶಿಸುತ್ತದೆ. ಸಂಪತ್ತು ಎಂದರೆ ಸ್ಥಿರವಾದ್ದು - ವಿದ್ಯಾ ಸಂಪತ್ತು, ಗುಣ ಸಂಪತ್ತು, ಜ್ಞಾನ ಸಂಪತ್ತು ಇತ್ಯಾದಿ - ಪರಮಾತ್ಮನೇ ಸಕಲ ರೀತಿಯಲ್ಲಿಯೂ ಉತ್ತಮೋತ್ತಮನು. ಅದಾರಿದ್ರತೆ ಜೊತೆಗೆ ಸಿಂಹತ್ವವನ್ನು ಸೇರಿಸಿರುವುದರಿಂದ ಅವನು ಉತ್ತಮೋತ್ತಮನಾದನು. ಇವರ ಸಮರು ಯಾರೂ ಇಲ್ಲ. ಅದರಿಂದಲೇ ಇವನನ್ನು ಅದಾರಿದ್ರ ಸಿಂಹಾಯ ನಮಃ ಎಂದು ನಮಸ್ಕರಿಸುತ್ತೇವೆ.

**703. ಧೂಮ್ರಸಿಂಹಾಯ ನಮಃ**

ಧೂಮ - ಹೊಗೆಯ ಬಣ್ಣದ ಕಪ್ಪು - ಈ ಬಣ್ಣದ ಸಿಂಹವು ಬಹಳ ಅಪರೂಪ.

ಇಂತಹ ಬಣ್ಣದ ಸಿಂಹ - ಅಂದರೇ ಈ ಬಣ್ಣದ ಸಿಂಹವು ಅಪರೂಪ. ಆದರೂ ಈ ಬಣ್ಣದ ಸಿಂಹವು ಒಂದು ರೀತಿ ಕಿರಣಗಳನ್ನು ತೀಕ್ಷ್ಣವಾಗಿ ಬಿಡುತ್ತಿರುತ್ತದೆ. ಪರಮಾತ್ಮನು ಇಚ್ಛಿಸಿದ ರೂಪವನ್ನು ಹೊಂದುವುದರಿಂದ ಮತ್ತು ಬ್ರಹ್ಮದೇವರು ಪರೋಕ್ಷ ರೂಪಗಳಲ್ಲಿ ಹೊಗಳುತ್ತಿರುವುದರಿಂದ ನರಸಿಂಹನು ಬಹಳ ಸಂತುಷ್ಟನಾಗಿರಬೇಕು!

704. ಮೂಲಸಿಂಹಾಯ ನಮಃ

ನರಸಿಂಹನು ನರನ ಮತ್ತು ಸಿಂಹದ ಜೋಡಣೆಯ ಶರೀರಿಯಾದ್ದರಿಂದ, ಈ ರೂಪದಲ್ಲಿ ಹಿರಣ್ಯಕಶಿಪುವಿನ ಸಂಹಾರ ಮಾಡಿದ್ದನ್ನು ನೋಡಿದರೆ ಅವನು ಮೂಲತಃ ಸಿಂಹದ ರೂಪವೇ ಆಗಿ ಕೇವಲ ವರದ ಬಿಡುಗಡೆಗಾಗಿ ನರನ ಶರೀರವನ್ನು ಧರಿಸಿರಬಹುದು - ಎಂದರೆ ನರಸಿಂಹನ ಮೂಲ ರೂಪ - ಸಿಂಹವೇ!

705. ಮೂಲಾಯ ನಮಃ

ನರಸಿಂಹ ಸ್ವಾಮಿಯ ಮತ್ತು ಎಲ್ಲ ದೇವ ದೇವತೆಗಳ ಮೂಲ ರೂಪ ಪರಮಾತ್ಮ - ಓಂಕಾರ. ಸಾಕಾರ ರೂಪ, ನಿರಾಕಾರ ರೂಪ ಮತ್ತು ಇನ್ನೂ ಅರಿಯದ ರೂಪಗಳು, ಕೊನೆಯಲ್ಲಿ ಅಂದರೆ ಮೂಲದಲ್ಲಿ ಓಂಕಾರದಲ್ಲಿ ನಿಲ್ಲುತ್ತವೆ, ಕೇವಲ "ಓಂ" ನಲ್ಲಿಯೇ ಪ್ರತಿಷ್ಠಿತವಾಗಿರುತ್ತವೆ.

ಸರ್ವ ಸೃಷ್ಟಿಗೂ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೂ ಮೂಲವು ಪರಮಾತ್ಮನೇ! ಅವನ ಮೂಲವನ್ನು ಅರಿತವರಿಲ್ಲ, ಅರಿಯಲು ಎಲ್ಲರೂ ಪ್ರಯತ್ನ ಪಡುವವರೇ. ಹಾಗೆ ಅರಿತವರು ಎಂದು ಹೇಳಬಹುದಾದರು ಭಕ್ತರೇ! ಅರಿಯುವ ರೀತಿ, ಅರಿತ ಭಾವ, ರೂಪ, ಎಲ್ಲವೂ ಒಂದೇ ಅಲ್ಲ. ಒಬ್ಬೊಬ್ಬರಿಗಾದ ಅನುಭವ ಬೇರೆ ಬೇರೆ! ಋಷಿ ಮುನಿಗಳು ತಾವು ಕಂಡ ಭಗವಂತನ ಮೂಲವನ್ನು ಅವರವರದೇ ಆಗಿ ಮಂತ್ರಗಳಲ್ಲಿ ತಿಳಿಸಿದ್ದಾರೆ. ಆವರು ಎಲ್ಲರೂ ಯಾರು ಯಾರು ಎಂದು ತಿಳಿಸದೇ ಅಜ್ಞಾತವಾಗಿದ್ದಾರೆ. ಇದು ಭಗವಂತನ ಮಹಿಮೆ. - ಮೂಲವೇ ಮೂಲ! ತಿಳಿದವರಾರು!! ಅದರಿಂದಲೇ ಹೇಳುವುದು; ಋಷಿಮೂಲ, ಗುರುಮೂಲ, ದೇವಮೂಲವನ್ನು ತಿಳಿಯಲು ಹೋಗಬಾರದು!! ಏಕೆಂದರೆ ತಿಳಿಯುವುದು ಕಷ್ಟ! ತಿಳಿದ ಮೇಲೆ ಭಾವನೆ, ಗುರುತ್ವ, ಭಕ್ತಿ, ಗೌರವಗಳು ಕದಲಬಹುದು! ಬುದ್ಧಿ ವಿಚಲಿತವಾಗಬಹುದು! ಮನಸ್ಸು ಬದಲಾಗಬಹುದು!! ಇವು ಕೂಡದು. ಉತ್ಪನ್ನವಾಗಿರುವ ಗುರುತ್ವ, ಭಕ್ತಿ, ಶ್ರದ್ಧೆ ಹೆಚ್ಚು ಹೆಚ್ಚಾಗಿ ಮುಂದುವರಿಯಬೇಕೆಂಬುದೇ ಭಗವಂತನ ಮತ್ತು ನಮ್ಮ ಹೆಬ್ಬಯಕೆ! ಅದರಿಂದ ಮೂಲಾಯ ನಮಃ ಎಂದರೆ ಮೂಲಾಯ ನಮಃ ಅಷ್ಟೆ!

ಒಟ್ಟಿನಲ್ಲಿ ಎಲ್ಲೆಲ್ಲಿ ಗುರುತ್ವ, ಗೌರವ, ಅಪಾರ ಶ್ರದ್ಧೆ ಮತ್ತು ಅನನ್ಯ ಅವ್ಯಭಿಚಾರಣೀ ಭಕ್ತಿಯಿರುವುದೋ, ಅಲ್ಲಿಯ ಮೂಲವನ್ನು "ಕಾಯ ವಾಚಾ ಮನಸಾಪಿ" ಚಿಂತಿಸಿಬಾರದು ಮತ್ತು ಪರೀಕ್ಷಿಸಬಾರದು. ಅಂತಹ ಸನ್ನಿವೇಶ ಒದಗಿ ಬಂದಾಗ, ಮನಸ್ಸನ್ನು ಆ ವಿಚಾರಗಳಿಂದ ಹೊರಗೆಳೆದು ನಮ್ಮ ಒಳಗಿನ ಹೃದಯ ಗುಹೆಯಲ್ಲಿ ಸ್ಥಿರೀಕರಿಸುವುದು ನಮ್ಮನ್ನು ನಾವು ಬಿಡುಗಡೆ ಮಾಡಿಕೊಳ್ಳಲು ಮಾಡುವ ಅತ್ಯುತ್ತಮ ಸೇವೆ. ಹೇ ಮೂಲಾಯ ಪ್ರಭುವೇ ನಮಃ, ತವ ಮಾಯಾ ದುರತ್ಯಯಾ! ತವ ಮೂಲಾ ದುರತ್ಯಯಾ!!

**706. ಬೃಹತ್ಸಿಂಹಾಯ ನಮಃ**

ಬೃಹತ್ - ಅತ್ಯಂತ ದೊಡ್ಡದು, ಗುರುತರವಾದುದು,

ಚಿಂತನೆಯಲ್ಲಿ ಬೃಹತ್ ಇರಬಹುದು, ಗಾತ್ರ, ಪ್ರಮಾಣದಲ್ಲಿ ಬೃಹತ್ತಿರಬಹುದು, ಭಾವನೆ, ರೂಪ ಮುಂತಾದುವುಗಳಲ್ಲಿ ಬೃಹತ್ತಿರಬಹುದು!!

ಅಂತಹ ಸಿಂಹ ರೂಪನಾದವನು - ಪರಮಾತ್ಮ "ಸಿಂಹ" ಸ್ವರೂಪ - ಎಂದರೆ ಪ್ರಾಣಿಯಾದ ಸಿಂಹ, ವಿಚಾರಗಳಿಗೆ ಉತ್ತಮ ರೀತಿಯ ಭಾವವೇ ಸಿಂಹ, ಕಿರೀಟಪ್ರಾಯವಾದುದಕ್ಕೆ "ಸಿಂಹ", ಏನೇ ಆದರೂ ಎಲ್ಲ ರೀತಿಗೂ "ಬೃಹತ್ ಸಿಂಹ" ನಾಗಿರುವುದು ವಿಶೇಷವೇ!

ನರಸಿಂಹ ಸ್ವಾಮಿಯೂ ಸಹ ಸಿಂಹನಾಗಿರುವುದರಿಂದಲೂ ಮತ್ತು ಬೃಹತ್ ಕಾರ್ಯವನ್ನು ಮಾಡಿದವನಾದ್ದರಿಂದಲೂ, ಅವನು ಬೃಹತ್ ಸಿಂಹನು. ಅದರಿಂದ ಬೃಹತ್ ಸಿಂಹಾಯ ನಮಃ ಎಂದು ನಮಸ್ಕಾರಗಳು.

*ಪಾತಾಲಸ್ಥಿತಸಿಂಹಾಯ ನಮಃ ಪರ್ವತವಾಸಿನೇ ।*
*ನಮೋ ಜಲಸ್ಥಸಿಂಹಾಯ ಅಂತರಿಕ್ಷಸ್ಥಿತಾಯ ಚ ।।118।।*

*(707-710)*

**707. ಪಾತಾಲಸ್ಥಿತ ಸಿಂಹಾಯ ನಮಃ**

ಅಖಿಲಾಂಡ ಕೋಟಿ ಬ್ರಹ್ಮಾಂಡನಾಯಕನಾದ ಪರಮಾತ್ಮನು ಬ್ರಹ್ಮಾಂಡಗಳನ್ನು ಸೃಷ್ಟಿಸಿ, ಸಕಲ ಜೀವಕೋಟಿಗಳಿಗೂ ಮತ್ತು ಸಚರಾಚರ ವಸ್ತುಗಳಿಗೂ, ಯಕ್ಷ, ಕಿನ್ನರ, ಕಿಂಪುರುಷ, ಸಿದ್ಧ ಸಾಧ್ಯ, ದೇವ ದೇವತೆಗಳಿಗೂ ಇರಲು ವಾಸಸ್ಥಾನವಾಗಿ ಹದಿನಾಲ್ಕು ಲೋಕಗಳನ್ನು ತನ್ನ ವಿಶಾಲ ಅದ್ಭುತ ದೇಹದಿಂದ ಭಾಗ ಮಾಡಿದನು.

ಈ ಹದಿನಾಲ್ಕು ಲೋಕಗಳಲ್ಲಿ ಸತ್ಯಲೋಕವೇ ಅವನ ಶಿರಸ್ಸಾಯಿತು, ಭೂಲೋಕವು ಸೊಂಟ, ಕಟಿ ಪ್ರದೇಶವಾಯಿತು. ಪಾತಾಳ ಲೋಕವು (ಅತ್ಯಂತ ಕೆಳಗಿನದು) ಪಾದ ಪ್ರದೇಶವಾಯಿತು.

7. ಸತ್ಯಲೋಕ - ಶಿರಸ್ಸು, ವೈಕುಂಠ, ಭಗವಂತನ ವಾಸಸ್ಥಾನ
6. ತಪೋಲೋಕ
5. ಜನೋಲೋಕ
4. ಮಹೋಲೋಕ
3. ಸುವರ್ಲೋಕ
2. ಭುವರ್ಲೋಕ
1. ಭೂಲೋಕ - ಸಕಲ ಜೀವ ಜೀವಕೋಟಿಗಳ ಕರ್ಮಭೂಮಿ
1. ಅತಳ
2. ವಿತಳ
3. ಸುತಲ
4. ರಸಾತಲ
5. ತಲಾತಲ
6. ಮಹಾತಳ
7. ಪಾತಾಳ - ಅನಂತನ ವಾಸಸ್ಥಾನ (ಪಾದ)

ಪಾತಾಳದ ಕೆಳಗೆ 30 ಸಾವಿರ ಯೋಜನ ಆಳದಲ್ಲಿ ಸಾವಿರ ಹೆಡೆಗಳ ಅನಂತನಿದ್ದಾನೆ. ಅವನು ಭಗವಂತನ ಅಂಶ. ಆತನ ತಲೆಯಲ್ಲಿ ಇಡೀ ಭೂಮಂಡಲವು ಅಣುಮಾತ್ರದಂತೆ ನಿಂತಿದೆ. ಪ್ರಳಯ ಕಾಲದಲ್ಲಿ ಆತನ ಕೋಪದಿಂದ ಹುಬ್ಬಿನಿಂದ ಸಂಕರ್ಷಣರೆಂಬ ಏಕಾದಶ ರುದ್ರರು ಹುಟ್ಟಿ ಜಗತ್ತನ್ನು ನಾಶಮಾಡುತ್ತಾರೆ. ಇವನೇ ಪಾತಾಳಸ್ಥಿತ ಸಿಂಹನು.

ಪರಮಾತ್ಮನು ಸಕಲ ಲೋಕಗಳಲ್ಲಿಯೂ ಹರಡಿಕೊಂಡಿದ್ದಾನೆ. ಹರಡಿರುವುದರಿಂದ ಅವನು ಮಹಾವಿಷ್ಣು. ಪ್ರತಿ ಲೋಕದಲ್ಲಿಯೂ ಅವನೇ ಅವನಾಗಿದ್ದಾನೆ, ತನ್ನದೆ ಅಂಶದ ಜೀವಿಗಳನ್ನು ಎಲ್ಲ ಲೋಕಗಳಲ್ಲಿಯೂ ಸಂಚರಿಸುವಂತೆ ಅವುಗಳಿಗೆ ಕರ್ಮ, ಜ್ಞಾನ, ಭಕ್ತಿ, ಯೋಗಗಳನ್ನು ನಿಯಮಿಸಿರುತ್ತಾನೆ. ಆದರೆ ಎಲ್ಲೆಲ್ಲಿಯೂ ಅವನೊಬ್ಬನೇ ಪುರುಷೋತ್ತಮ, ಪುರುಷಶ್ರೇಷ್ಠ, ಪುರುಷ ಸಿಂಹ. ಸಿಂಹವೆಂದರೆ ರಾಜ, ಅಧಿಕಾರಿ, ಸರ್ವವನ್ನು ಬೇಡಿದುದನ್ನು ಜೀವಕೋಟಿಗೆ ಕೊಡುವವನು - ಪರಮಾತ್ಮನೆಂದೇ ಅರ್ಥ.

ನರಸಿಂಹನು ಪಾತಾಳಸ್ಥಿತ ಸಿಂಹ ಎಂದು ಭಕ್ತಿಯಿಂದ ಹೇಳಲ್ಪಟ್ಟಿದೆ.

ಪಾತಾಳ - ಎಂದರೆ ಅಧೋಲೋಕ, ಪಾತಾಳ ಲೋಕ, ಸಮುದ್ರದೊಳಗಿನ ಬೆಂಕಿ, ವಡಬಾನಲ - ಪರಮಾತ್ಮನೇ.

708. ಪರ್ವತವಾಸಿನೇ ನಮಃ

ಪರ್ವತ - ಎಂದರೆ ಬೆಟ್ಟಗಳಲ್ಲಿ, ವಾಸಿನೇ - ವಾಸಮಾಡುವವನು.

ಪರ್ವತವಾಸಿ ಎಂದರೆ ಕೈಲಾಸ ಶಿಖರದಲ್ಲಿ ವಾಸಮಾಡುವ ಈಶ್ವರ, ಶ್ರೀ ಶಿವ.

ಪರ್ವತ ಪ್ರದೇಶವಾದ ಬದರಿಕಾಶ್ರಮದಲ್ಲಿ ತಪಸ್ಸು ಮಾಡುವ ನರ-ನಾರಾಯಣ ಮಹರ್ಷಿಗಳು.

ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳು, ಸತ್ವರಜಸ್ತಮೋಗುಣಗಳು, ಸಂಸಾರವೆಂಬ ಕಾನನಗಳು, ಪ್ರಕೃತಿ, ಪುರುಷ, ಮಾಯೆಗಳು, ಕಾಮನೆಗಳನ್ನು ಹುಚ್ಚೆಬ್ಬಿಸುವ ಕಾಡು ಅರಣ್ಯಗಳು - ಪರ್ವತದ ಗರ್ಭದ ರೀತಿಯಲ್ಲಿರುವ ಇವುಗಳ ಮಧ್ಯದಲ್ಲಿ ದೇಹವೆಂಬ ದೇವಾಲಯದಲ್ಲಿ ವಾಸಮಾಡುವ ಜೀವಾತ್ಮನೇ ಪರಮಾತ್ಮನ ರೂಪ. ಪರ್ವತವಾಸಿನೇ ನಮಃ ಎಂದರೆ ಆತ್ಮನಿಗೂ ಅನ್ವಯಿಸುತ್ತದೆ, ಅವನೂ ಪರಮಾತ್ಮನಂತೆ ಪರ್ವತವಾಸಿಯೇ!

709. ಜಲಸ್ಥಸಿಂಹಾಯ ನಮಃ

ಜಲದಲ್ಲಿ ವಾಸಿಸುವ ಸಿಂಹ; ಪರಮಾತ್ಮನು ಎಲ್ಲಿ ಬೇಕಾದರೂ ವಾಸಮಾಡಬಹುದು. ಭೂದೇವಿಯನ್ನು ರಕ್ಷಿಸಲು ಮತ್ತು ವೇದಗಳನ್ನು ತರಲು ಸ್ವಾಮಿಯು ವರಾಹಾವತಾರವನ್ನು ಮತ್ತು ಮತ್ಸ ಅವತಾರವನ್ನು ಹೊಂದಬೇಕಾಯಿತು. ಈ ಕಾರಣದಿಂದ ಪರಮಾತ್ಮನಿಗೆ ಜಲಸ್ಥಸಿಂಹಾಯ ನಮಃ ಎಂದಾಯಿತು.

ಎಲ್ಲ ಜಲಚರ ಪ್ರಾಣಿಗಳಿಗೂ ಆಯಾ ಯೋನಿಯಲ್ಲಿಯೇ ಸಿಂಹ ಸ್ವರೂಪನಾದನು. ಅದರಿಂದ ಜಲಸ್ಥಸಿಂಹಾಯ ನಮಃ ಎಂದಾಯಿತು.

ಎಲ್ಲ ಪ್ರಾಣಿಗಳಲ್ಲಿಯೂ ಅವನು ಅವನದೇ ಆದ ಜೀವಕೋಟಿಗಳನ್ನು ಪ್ರತಿಷ್ಠೆ ಮಾಡಿರುವುದರಿಂದ ಜಲದಲ್ಲಿ ವಾಸಮಾಡುವ ಪ್ರಾಣಿಗಳಲ್ಲಿ ತನ್ನ ಆತ್ಮವನ್ನು ಇಟ್ಟಿರುತ್ತಾನೆ.

ಅದರಿಂದಲೂ ಅವನು - ಜಲಸ್ಥಸಿಂಹನು.

710. ಅಂತರಿಕ್ಷಸ್ಥಿತಾಯ ನಮಃ

ಅಂತರಿಕ್ಷ ಲೋಕದಲ್ಲಿ ನಿಂತಿರುವವನು.

ಅಂತರಿಕ್ಷ - ಆಕಾಶ, ಆಕಾಶದಲ್ಲಿ ಇರುವವನು,

ಪರಮಾತ್ಮನು ವಿಶ್ವವನ್ನೇ ಆಕ್ರಮಿಸಿಕೊಂಡಿದ್ದಾನೆ ಎಂದರೆ ಎಲ್ಲವನ್ನು

ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡಿದ್ದಾನೆ. ಎಂದಮೇಲೆ ಅವನು ಇಲ್ಲದೆ ಇರದ ಸ್ಥಾನವೇ ಇಲ್ಲ.

*"ವಾಸನಾದ್ವಾಸುದೇವಸ್ಯ ವಾಸಿತಂ ತೇ ಜಗತ್ರಯವ್ ।*
*ಸರ್ವಭೂತನಿವಾಸೋऽಸಿ ವಾಸುದೇವ ನಮೋऽಸ್ತು ತೇ ॥"*

ಎಂದ ಹಾಗೆ ಆಕಾಶ ಅಥವಾ ಅಂತರಿಕ್ಷದಲ್ಲಿ ವಾಸಿಸುತ್ತಾನೆ, ನಿಂತಿರುತ್ತಾನೆ ಅಥವಾ ಸ್ಥಿರವಾಗಿರುತ್ತಾನೆ ಎಂದು ಅರ್ಥ.

ಯಕ್ಷ, ಕಿನ್ನರರು, ಕಿಂಪುರುಷರು, ಸಿದ್ಧರು, ಸಾಧ್ಯರು, ಚಾಣೂರರು, ಇತ್ಯಾದಿಗಳು ಅಂತರಿಕ್ಷ ಲೋಕದಲ್ಲಿ ಇರುತ್ತಾರೆ. ಅವರು ಎಲ್ಲರೂ ಅವನನ್ನೇ ಪ್ರತಿಪಾದಿಸುತ್ತಾರೆ. ಅವರ ಆತ್ಮದಲ್ಲಿ ಪರಮಾತ್ಮನು ಇದ್ದಾನೆ.

ಭೂಲೋಕ, ಭುವರ್ಲೋಕ, ಸುವರ್ಲೋಕಗಳ ಮೇಲೆ ಇರುವ ಸವಿತೃ ಎಂದರೆ ಸೂರ್ಯನಾರಾಯಣನ ರೂಪ - ಪ್ರತ್ಯಕರೂಪದಲ್ಲಿ ಕಾಣುವ ಸಿಂಹ ಸದೃಶರೂಪವೇ - ಅಂತರಿಕ್ಷ ಸ್ಥಿತಾಯ ನಮಃ ಎಂಬುದಾಗಿ ಬ್ರಹ್ಮದೇವರು ನರಸಿಂಹನನ್ನು ಹೊಗಳುತ್ತಾರೆ. (ಇದು ಗಾಯತ್ರಿ ಮಂತ್ರದ ತತ್ವವನ್ನೇ ನಿರೂಪಿಸುತ್ತದೆ.)

*ಕಾಲಾಗ್ನಿರುದ್ರಸಿಂಹಾಯ ಚಂಡಸಿಂಹಾಯ ತೇ ನಮಃ ।*
*ಅನಂತಜಿತಸಿಂಹಾಯ ಅನಂತಗತಯೇ ನಮಃ ॥119॥*

*(711-714)*

**711. ಕಾಲಾಗ್ನಿರುದ್ರಸಿಂಹಾಯ ನಮಃ**

ಕಾಲ - ಅಗ್ನಿ - ರುದ್ರ - ಸಿಂಹ

ಕಾಲದೇವ, ಅಗ್ನಿದೇವ, ರುದ್ರದೇವರು, ಸಿಂಹರಾಜ, ಇವರುಗಳೆಲ್ಲರೂ ಪರಮಾತ್ಮನೇ - ಇವರೆಲ್ಲರಿಗೂ ನಮಸ್ಕಾರಗಳು.

ಅಥವಾ

ಸಿಂಹ - ಸಿಂಹ ರಾಜನು, ರುದ್ರ - ಎಂದರೆ ಅತಿ ಉಗ್ರವಾದ, ಭಯಂಕರವಾದ ಕೋಪವುಳ್ಳವನಾಗಿದ್ದು, ಅಗ್ನಿ ಎಂದರೆ ಬೆಂಕಿಯಷ್ಟು ಸುಡುವವನಾಗಿಯೂ, ಕಾಲ - ಎಂದರೆ ಪ್ರಳಯಕಾಲದ ಸಮಯದಲ್ಲಿರುವ ಕ್ರೌರ್ಯ, ರೌದ್ರ ಗುಣಗಳನ್ನು ಹೊಂದಿದ್ದಾನೆ ಎಂದೂ ಅಂತಹ ಭಯಂಕರನಾದ ಪ್ರಳಯಕಾಲದಲ್ಲಿ ಕೋಪಗೊಂಡ ಸಿಂಹಸ್ವರೂಪಿಯಾದ ಪರಮಾತ್ಮನಿಗೆ ನಮಸ್ಕಾರಗಳು. ಅಥವಾ

ಪರಮೇಶ್ವರನು ಕಲ್ಪಾಂತದಲ್ಲಿ ಶಿವನ ರೂಪದಲ್ಲಿ ಸಕಲ ಬ್ರಹ್ಮಾಂಡಗಳನ್ನೇ ಸಂಹಾರಮಾಡಿ ತನ್ನಲ್ಲಿ ಅಡಗಿಸಿಕೊಳ್ಳುತ್ತಾನೆ, ಅಂತಹ ಪರಮಾತ್ಮನಾದ

ನಿನಗೆ ನಮಸ್ಕಾರಗಳು. ಹೀಗಿರುವ ಕಾಲಾಗ್ನಿರುದ್ರ ಸಿಂಹನಾದವನಿಗೆ ನಮಸ್ಕಾರಗಳು.

**712. ಚಂಡಸಿಂಹಾಯ ನಮಃ**

ಚಂಡ - ಭಯಂಕರನಾದ, ಸಿಂಹ - ಸಿಂಹವು

ಪ್ರಳಯ ಕಾಲದಲ್ಲಿ ಪರಮಾತ್ಮನ ರೂಪವು ಅತಿ ಭಯಂಕರವಾಗಿರುತ್ತೆ. ಶತ್ರುಗಳನ್ನು ಸಂಹಾರ ಮಾಡುವಾಗ ಪರಮಾತ್ಮನು ಕೋಪಗೊಂಡಿರುತ್ತಾನೆ. ಆದ ಕಾರಣ ಅವನನ್ನು ಚಂಡಸಿಂಹ ಎಂದು ಕರೆದಿದೆ.

**713. ಅನಂತಜಿತಸಿಂಹಾಯ ನಮಃ**

ಸಿಂಹ ಎಂದರೆ ರಾಜಗಾಂಭೀರ್ಯವುಳ್ಳವನು.

ಜಿತ ಎಂದರೆ ಎಲ್ಲವನ್ನು ಗೆದ್ದವನು.

ಅನಂತ - ಕೊನೆಯಿಲ್ಲದ್ದು.

ಅದರಿಂದ ರಾಜಗಾಂಭೀರ್ಯವುಳ್ಳ ಪರಮಾತ್ಮನು ಸಕಲ ಶತ್ರುಗಳನ್ನು ಗೆದ್ದವನು - ಅನಂತಜಿತಸಿಂಹಾಯ ನಮಃ

ಅಥವಾ ತನ್ನ ಮೃದು ಸ್ವಭಾವ, ದಯಾಸಾಗರತ್ವ, ಕರುಣಾ ಸಮುದ್ರತೆ, ಶ್ರೀಮದ್ಗಾಂಭೀರ್ಯ, ನಯನ ಮನೋಹರತ್ವ ಮುಂತಾದ ಸಾತ್ವಿಕ ಭಾವಗಳಿಂದ ಸಕಲ ಜೀವಿಗಳನ್ನೂ ಸಮಸ್ತ ಜೀವಕೋಟಿಯನ್ನೇ ಮತ್ತು ಸಚರಾಚರ ವಸ್ತುಗಳನ್ನು - ಬುದ್ಧಿ, ಮನಸ್ಸು, ಅಹಂಕಾರ, ಚಿತ್ತ ಸಮೇತ ಸಂಪೂರ್ಣವಾಗಿ ಗೆದ್ದವನು - ಪರಮಾತ್ಮನು - ಇದಕ್ಕೆ ಬೇರೆ ದಾರಿಯೇ ಇಲ್ಲ - ಇದು ಅವನ ನಿಯಮ - ಅವನು ಚೋರಾಗ್ರಗಣ್ಯ ಚಕ್ರವರ್ತಿ - ಯಾರನ್ನು ಲವಲೇಶವೂ ಸ್ವತಂತ್ರನಾಗಲು ಬಿಡುವುದಿಲ್ಲ - ಅದರಿಂದಲೇ ಅನಂತಜಿತಸಿಂಹಾಯ ನಮಃ.

**714. ಅನಂತಗತಯೇ ನಮಃ**

ಅ - ಇಲ್ಲದ್ದು, ಅಂತ - ಕೊನೆ, ಗತ - ಅದನ್ನು (ಗತಿಯನ್ನು) ಹೊಂದಿದವನು / ಸೇರಿದವನು - ಎಂದರೆ ಕೊನೆ ಎಂಬುದು ಯಾವುದಿದೆಯೋ ಅಥವಾ ಯಾವ ಸ್ಥಿತಿಯನ್ನು ಹೊಂದಿದ ನಂತರ ಹೊಂದಬೇಕಾದ್ದು ಯಾವುದೂ ಇಲ್ಲವೋ ಅದನ್ನು ಸೇರಿ ಸ್ಥಿತನಾದವನು - ಅನಂತಗತಯೇ ನಮಃ.

ಅನಂತ - ಎಂದರೆ ವಾಸುಕಿ, ಆದಿಶೇಷ, ಎಂದರೆ ಈ ಆದಿಶೇಷನ ಭಾವವನ್ನು ಹೊಂದಿ ಅನಂತಪದ್ಮನಾಭ ಸ್ವಾಮಿಯನ್ನು ಸೇವಿಸುತ್ತಿರುವವನು. ಅನಂತನೂ ಪರಮಾತ್ಮನೇ. ಪದ್ಮನಾಭನೂ ಅವನೇ. ಸಕಲವೂ ಪರಮಾತ್ಮನೇ.

ಯಾವುದೂ ಬೇರೆಯಲ್ಲ - ಅವನು ಅದ್ವೈತನು - ಅವನು ಒಬ್ಬನೇ!

ಅಥವಾ

ಅಂತವಂತ ಇಮೇ ದೇಹಾಃ - ದೇಹಗಳು ಕೊನೆಯಿರುವವು, ಆದರೆ ಅದರಲ್ಲಿರುವ ಜೀವನು ಅಥವಾ ಆತ್ಮನು ಅನಂತನು, ಸರ್ವವೇದ್ಯನು - ಸರ್ವಕಾಲದಲ್ಲಿಯೂ ಇರುವವನು, ಅವನು ಅವಿನಾಶಿ, ಪರಮಾತ್ಮನು ತನ್ನ ಅಂಶಮಾತ್ರದಿಂದ ಆತ್ಮಗಳನ್ನು ತನ್ನಿಂದ ಹೊರಹಾಕಿದ್ದಾನೆ, ಕಲ್ಪಾದಿಯಲ್ಲಿ ಜೀವಿಗಳು ಅವನ ಭಾವಗಳನ್ನೇ ಹೊಂದಿ ಅವನಿಂದ ಹೊರಬರುತ್ತವೆ. ಸಂಸಾರ ಸಾಗರದ ಸಂಪರ್ಕದಲ್ಲಿ ಕೋಟ್ಯಾನುಕೋಟಿ ದೇಹಗಳನ್ನು ಪಡೆಯುತ್ತಾ ಅವುಗಳಲ್ಲಿ ವಾಸಮಾಡುತ್ತಾ, ನಂತರ ಬಿಡುತ್ತಾ ಕೊನೆಗೆ ಕಲ್ಪಾಂತದಲ್ಲಿ ಪರಮಾತ್ಮನನ್ನೇ ಸೇರುತ್ತೇವೆ. ಇದರಿಂದ ಆತನು ಅನಂತಗತನು - ಅನಂತಗತಯೇ ನಮಃ

*ನಮೋ ವಿಚಿತ್ರಸಿಂಹಾಯ ಬಹುಸಿಂಹಸ್ವರೂಪಿಣೇ ।*
*ಅಭಯಂಕರಸಿಂಹಾಯ ನಾರಸಿಂಹಾಯ ತೇ ನಮಃ ॥120॥*
*(715-718)*

**715. ವಿಚಿತ್ರಸಿಂಹಾಯ ನಮಃ**

ಪರಮಾತ್ಮನು ತನ್ನ ಅಧ್ಯಕ್ಷತೆಯಲ್ಲಿ ತನ್ನ ಸಂಕಲ್ಪದಂತೆ ಸಕಲ ಭುವನವನ್ನು ಸೃಷ್ಟಿಮಾಡಿ, ನಡೆಸಿ, ಉಪಸಂಹಾರ ಮಾಡುತ್ತಾನೆ. ಎಲ್ಲವೂ ತನ್ನ ಇಚ್ಛೆಯಂತೆಯೇ ನಡೆಸುತ್ತಾನೆ. ಇದಕ್ಕೆ ಎದುರು ಬರುವವರೂ ಯಾರೂ ಇಲ್ಲ. ಇದು ವಿಚಿತ್ರವೇ ಸರಿ. ಅದರಿಂದ ಅವನು ವಿಚಿತ್ರಸಿಂಹನು.

ಇಷ್ಟೆಲ್ಲ ನಡೆಸಿದ್ದರೂ, ನಡೆಸುತ್ತಿದ್ದರೂ, ಮುಂದೆ ನಡೆಸುವವನೇ ಆದರೂ ಅವನು ವಿಶ್ರಾಂತಿಯಿಲ್ಲದೆ ಎಚ್ಚರವಾಗಿ ಕೊಂಚವೂ ಲೋಪ ದೋಷಗಳಿಲ್ಲದೆ ತನ್ನ ಸಂಕಲ್ಪ ಮಾತ್ರದಿಂದ ನಡೆಸಬೇಕಾದರೆ ವಿಚಿತ್ರವೇ ಇರಬೇಕು - ಅವನು ನಿಸ್ಸಂಶಯವಾಗಿಯೂ ವಿಚಿತ್ರಸಿಂಹನೇ! ಅದರಿಂದ ಅವನಿಗೆ ವಿಚಿತ್ರಸಿಂಹಾಯ ನಮಃ ಎಂದಿದ್ದಾರೆ.

ಅಥವಾ

ನರಸಿಂಹನ ಸ್ವರೂಪ ಇತರ ಅವತಾರಗಳಿಗಿಂತ ವಿಭಿನ್ನ. ಪೂರ್ಣ ಸಿಂಹನೂ ಅಲ್ಲ, ಪೂರ್ಣ ನರನೂ ಅಲ್ಲ. ಸಿಂಹ, ನರಗಳ ರೂಪ ಭಾವಗಳನ್ನು ಪರಿಪೂರ್ಣವಾಗಿ ಹೊಂದಿರುತ್ತಾನೆ. ಇವರ ರೂಪ, ಭಾವಗಳು ವಿಚಿತ್ರವಾದುವುಗಳು. ಹಿರಣ್ಯಕಶಿಪುವಿನ ಸಂಹಾರ ಮಾಡುವ ರೀತಿ ಅತಿ ವಿಚಿತ್ರವಾದುದು. ಇದೆಲ್ಲವನ್ನು ಸೇರಿಸಿ ಅವನಿಗೆ ವಿಚಿತ್ರಸಿಂಹ ಎಂದು ಕರೆದಿದ್ದಾರೆ ಬ್ರಹ್ಮದೇವರು.

**716. ಬಹುಸಿಂಹಸ್ವರೂಪಿಣೇ ನಮಃ**

ಪರಮಾತ್ಮನು ಸಿಂಹಸ್ವರೂಪದವನು. ಸಿಂಹದ ಎಲ್ಲಾ ಸಾತ್ವಿಕ ಗುಣಗಳನ್ನು ಹೊಂದಿರುವವನು. ಏನೇ ಆದರೂ ಅವನೇ ಸೃಷ್ಟಿಸಿರುವ ಸಿಂಹ. ಅವನೇ ಅದರಲ್ಲಿ ಇಟ್ಟಿರುವ ಗುಣಗಳು - ಅವನ ಸಂಕಲ್ಪದಂತೆಯೇ ಇರುತ್ತವೆ. ಅದರ ಸ್ವ-ತನ್ನ ರೂಪ - ಎಂದರೆ ಭಾವ, ಸಿಂಹವೂ ಪರಮಾತ್ಮನೇ ಆಗಿರುತ್ತದೆ. ಬಹು - ಎಂದರೆ ಅನೇಕ. ಬಹು - ಎಂದರೆ ಹೆಚ್ಚಾದ, ಸಿಂಹಸ್ವರೂಪವುಳ್ಳವನು, ಗುಣ, ಸ್ವಭಾವವನ್ನು ವಿಶೇಷವಾಗಿ ಉಳ್ಳವನು.

ಅಥವಾ

ಬಹು - ಅನೇಕ. ಸಿಂಹ - ಸಿಂಹಗಳ, ಸ್ವ - ತಮ್ಮ ತಮ್ಮ, ರೂಪ - ರೂಪಗಳುಳ್ಳವನು. ಎಂದರೆ ಹೆಚ್ಚು ಸಂಖ್ಯೆಯ ಸಿಂಹಗಳ ವಿವಿಧ ರೂಪಗಳನ್ನು ಹೊಂದಿರುವವನು - ಪರಮಾತ್ಮನು. ಲೋಕದಲ್ಲಿ ಏನೇನು ರೀತಿಯ ಸಿಂಹಗಳನ್ನು ಸೃಷ್ಟಿಸಿರುವವನೋ, ಅವುಗಳ ತಮ್ಮ ತಮ್ಮ ರೂಪಗಳನ್ನು ಹೊಂದಿರುವವನು ಎಂದರೆ ಪರಮಾತ್ಮನೊಬ್ಬನಿಂದಲೇ ಇದು ಸಾಧ್ಯ. ಅಂತಹ ಪರಮಾತ್ಮನಿಗೆ ನಮಸ್ಕಾರಗಳು - ಅವನು - ಬಹುಸಿಂಹಸ್ವರೂಪಿಯಾದವನು.

**717. ಅಭಯಂಕರಸಿಂಹಾಯ ನಮಃ**

ಭಯ ಎಂದರೆ ಹೆದರಿಕೆ, ಭಯಂ - ಭಯವನ್ನು, ಕರ - ಮಾಡುವವನು.

ಭಯಂಕರ - ಭಯವನ್ನು ಹುಟ್ಟಿಸುವವನು.

ಅಭಯಂಕರಸಿಂಹ - ಸಿಂಹವನ್ನು ನೋಡಿದೊಡನೆಯೇ ಭಯವು ಬಂದು ಬಿಡುತ್ತದೆ.

ಅಭಯಂಕರಸಿಂಹ - ಎಂದರೆ ಸಿಂಹವನ್ನು ನೋಡಿದೊಡನೆ ಯಾವ ಭಯವು ಸಾಮಾನ್ಯವಾಗಿ ಉತ್ಪನ್ನವಾಗುವುದೋ ಅಂತಹ ಭಯವನ್ನು ಹೋಗಲಾಡಿಸುವವನು - ಶ್ರೀಮನ್ನಾರಾಯಣ - ಪರಮಾತ್ಮ - ನರಸಿಂಹದೇವನು - ಎಂದಮೇಲೆ ಲೋಕದಲ್ಲಿ ಬರತಕ್ಕ ಭಯ ಭೀತಿಗಳನ್ನು ಹೋಗಲಾಡಿಸಿ, ಶಾಂತಿಯನ್ನು ಕೊಡುವವನು - ಶ್ರೀ ನರಸಿಂಹಸ್ವಾಮಿಯು - ಅಭಯಂಕರಸಿಂಹಾಯ ತೇ ನಮಃ.

**718. ನಾರಸಿಂಹಾಯ ನಮಃ**

ನಾರಸಿಂಹ - ನರಸಿಂಹನೇ ಎಂದು ಅರ್ಥ, ನರಸಿಂಹನಿಗೆ ನಮಸ್ಕಾರಗಳು.

ನಾರ - ಎಂದರೆ ಸ್ವರ್ಗ, ಸ್ವರ್ಗ ಲೋಕದ ಸಿಂಹನು.

ಸ್ವರ್ಗಲೋಕದಲ್ಲಿ ವಿಜೃಂಭಿಸುವ ಸಿಂಹ ಎಂದ ಮೇಲೆ ಸಕಲ ಲೋಕಗಳಲ್ಲಿರುವ ಸಿಂಹಗಳಿಗಲ್ಲ ಉತ್ತಮನು. ಇವನು ಪರಮಾತ್ಮನಲ್ಲದೆ

ಬೇರೆಯಲ್ಲ - ಮಹಾವಿಷ್ಣುವೇ ಸಾಕ್ಷಾತ್ ನರಸಿಂಹನ ಅವತಾರವನ್ನು ಮಾಡಿದ್ದರಿಂದ ನರಸಿಂಹನು, ವಿಷ್ಣುವು ಬೇರೆ ಬೇರೆಯಲ್ಲ, ಒಂದೇ ದೇವನ ಎರಡು ಸನ್ನಿವೇಶಗಳ ರೂಪಗಳು - ಮಹಾವಿಷ್ಣುವಿಗೆ ನಮಸ್ಕಾರಗಳು - ನಾರಸಿಂಹಾಯ ನಮಃ.

*ಸಪ್ತಾಬ್ಧಿಮೇಖಲಾಯೈವ ಸಪ್ತಸಾಮಸ್ವರೂಪಿಣೇ ।*
*ಸಪ್ತವಾಯುಸ್ವರೂಪಾಯ ಸಪ್ತಛಂದೋಮಯಾಯ ಚ ॥121॥*
*(719-722)*

719. ಸಪ್ತಾಬ್ಧಿಮೇಖಲಾಯ ನಮಃ

ಸಪ್ತ - ಅಬ್ಧಿ - ಮೇಖಲಾಯ.

ಏಳು ಸಮುದ್ರಗಳಿಗೆ, ಮೇಖಲಾ - ಎಂದರೆ ನಡುವಿನ ಪಟ್ಟಿ (ಡಾಬು), ಅಥವಾ ಉಡಿದಾರದಂತಿರುವವನು, ಎಂದಮೇಲೆ ಪರಮಾತ್ಮನ ಆಕಾರ ಬಹಳ ದೊಡ್ಡ ಪ್ರಮಾಣದ್ದು. ಊಹಿಸಲಸಾಧ್ಯವಾದುದು. ಸರ್ವವಿದಿತವಾದುದು ಎಂದರೆ - ವಾಸುಕಿಯು ಮೇರು ಪರ್ವತಕ್ಕೆ ಹಗ್ಗವಾಗಿ ಕಾರ್ಯ ಮಾಡಿದುದು - ಸಮುದ್ರಮಥನ ಕಾಲದಲ್ಲಿ ಮೇರು ಪರ್ವತವನ್ನು ಕಡೆಗೋಲಾಗಿ ಉಪಯೋಗಿಸಿದಾಗ ವಿಷ್ಣುವಿನ ಅವತಾರವಾದ ಮಹಾ ಕೂರ್ಮನ ಮೇಲೆ ನಿಲ್ಲಿಸಿದರು. ವಾಸುಕಿಯನ್ನು ಮೇರುವಿಗೆ ಸುತ್ತಿ ತಲೆಯನ್ನು ರಾಕ್ಷಸರು ಹಿಡಿದುಕೊಂಡು, ಬಾಲವನ್ನು ದೇವತೆಗಳು ಹಿಡಿದುಕೊಂಡು ಕಡೆದರು, ಇದೇ ಬೃಹತ್ಕಾರ್ಯ.

ಆದರೆ ಏಳು ಸಮುದ್ರಗಳಿಗೆ ನಡುವಿನ ಕಟ್ಟಿನಂತಾಗಲೀ, ಉಡಿದಾರದಂತಾಗಲೀ ಅವತರಿಸಿದ ಮಹಾವಿಷ್ಣುವಿನ ರೂಪವನ್ನು ಎಲ್ಲಿಯೂ ಯಾರೂ ಊಹಿಸಲಾರರು, ಬೃಹದಾಕಾರಕ್ಕಿಂತ ಬೃಹತ್ ಆದುದು, ಮಹತ್ತಿಗಿಂತ ಮಹತ್ತಾದುದು - ಪರಮಾತ್ಮನ ರೂಪ, ಭಾವ, ಗುಣ, ಕಾರ್ಯಗಳು. ಸಪ್ತಾಬ್ಧಿಮೇಖಲಾಯ ನಮಃ.

ಜಂಬೂ ದ್ವೀಪ ನಾವಿರುವ ಸ್ಥಳ A 1L
1 ಉಪ್ಪು ಸಮುದ್ರ 1L
ಪ್ಲಕ್ಷದ್ವೀಪ B 2L
2 ಇಕ್ಷು ಸಮುದ್ರ 2L
ಶಾಲ್ಮಲೀ ದ್ವೀಪ C 4L
3 ಸುರೆ ಸಮುದ್ರ 8L
ಕುಶ ದ್ವೀಪ D 16L
4 ತುಪ್ಪದ ಸಮುದ್ರ 16L
ಕ್ರೌಂಚ ದ್ವೀಪ E 32L
5 ಮೊಸರು ದ್ವೀಪ 32L
ಶಾಕ ದ್ವೀಪ F 64L
6 ಹಾಲು ಸಮುದ್ರ 128L
ಪುಷ್ಕರ ದ್ವೀಪ (ಕಮಲ) G 128L
7 ಸಿಹಿ ನೀರಿನ ಸಮುದ್ರ
ಲೋಕಾಲೋಕ ಪರ್ವತ
ಆಲೋಕ ಕತ್ತಲು

ಪರಮಾತ್ಮನ ವಾಸ ಸ್ಥಾನ
ಧ್ರುವ ನಕ್ಷತ್ರ
ಲೋಕಗಳು
ಲೋಕಾಲೋಕ ಪರ್ವತ
ಆಲೋಕ ಲೋಕವಿಲ್ಲದ್ದು ಕತ್ತಲು

ಜಂಬೂ ದ್ವೀಪ A
1 ಉಪ್ಪು ಸಮುದ್ರ
ಪ್ಲಕ್ಷದ್ವೀಪ B
2 ಇಕ್ಷು ಸಮುದ್ರ
ಶಾಲ್ಮಲೀ ದ್ವೀಪ C
3 ಸುರೆ ಸಮುದ್ರ
ಕುಶದ್ವೀಪ D
4 ತುಪ್ಪದ ಸಮುದ್ರ
ಕ್ರೌಂಚ ದ್ವೀಪ E
5 ಮೊಸರು ಸಮುದ್ರ
ಶಾಕದ್ವೀಪ F
6 ಹಾಲು ಸಮುದ್ರ
ಪುಷ್ಕರ ದ್ವೀಪ G
7 ಸಿಹಿ ನೀರಿನ ಸಮುದ್ರ

ಸಂಖ್ಯೆಗಳು = ಲಕ್ಷಯೋಜನಗಳು = L
A, B, C, D, E, F, G = ಸಪ್ತದ್ವೀಪಗಳು
1, 2, 3, 4, 5, 6, 7 = ಸಪ್ತ ಸಾಗರಗಳು

| ಸಪ್ತದ್ವೀಪಗಳು | | ಸಪ್ತಸಾಗರಗಳು |
|---|---|---|
| ನಾವಿರುವ ದ್ವೀಪ A. | ಜಂಬೂದ್ವೀಪ | |
| | | 1. ಉಪ್ಪುನೀರಿನ ಸಮುದ್ರ |
| B. | ಪ್ಲಕ್ಷದ್ವೀಪ | |
| | | 2. ಇಕ್ಷು ಸಮುದ್ರ |
| C. | ಶಾಲ್ಮಲೀದ್ವೀಪ | |
| | | 3. ಸುರಾಸಮುದ್ರ |
| D. | ಕುಶದ್ವೀಪ | |
| | | 4. ತುಪ್ಪದ ಸಮುದ್ರ |
| E. | ಕ್ರೌಂಚದ್ವೀಪ | |
| | | 5. ಮೊಸರು ಸಮುದ್ರ |
| F. | ಶಾಕದ್ವೀಪ | |
| | | 6. ಹಾಲಿನ ಸಮುದ್ರ |
| G. | ಪುಷ್ಕರದ್ವೀಪ | |
| | | 7. ಸಿಹಿನೀರಿನ ಸಮುದ್ರ |

ಧ್ರುವಲೋಕದ ಬೆಳಕು ಸಪ್ತಸಾಗರ, ಸಪ್ತ ದ್ವೀಪಗಳ ಮೇಲೆ ಬೀಳುತ್ತದೆ. ಅದರಿಂದ ಇವುಗಳು ಲೋಕಗಳು ಎಂದು ಹೇಳುತ್ತೇವೆ.

ಲೋಕಾಲೋಕ ಪರ್ವತದ ಹೊರಭಾಗದಲ್ಲಿ ಬೆಳಕು ಹೋಗುವುದಿಲ್ಲ, ಅದರಿಂದ ಆ ಭಾಗಕ್ಕೆ ಅಲೋಕ - ಬೆಳಕಿಲ್ಲದ್ದು, ಕತ್ತಲ ಪ್ರದೇಶ ಎಂದು ಹೇಳುತ್ತೇವೆ.

ಲೋಕಾಲೋಕ ಪರ್ವತದ ಮೇಲೆ ಪರಮಾತ್ಮನು ವಾಸಿಸುತ್ತಾನೆ - ಅದರಿಂದ ಅವನಿಗೆ ಸಪ್ತಸಾಗರ, ಸಪ್ತ ದ್ವೀಪ ಮೇಖಲ ಎಂದು ನಮಸ್ಕರಿಸುತ್ತೇವೆ.

ಮೇಲೆ ಹೇಳಿದಂತೆ ಪರಮಾತ್ಮನು ಲೋಕಾಲೋಕ ಪರ್ವತದಲ್ಲಿ ನೆಲಸಿರುವುದರಿಂದ ಈ ಪರ್ವತವು ಸಪ್ತದ್ವೀಪಗಳಿಗೂ, ಸಪ್ತಸಾಗರಗಳಿಗೂ ಕೋಟೆಯೋಪಾದಿಯದಲ್ಲಿ ಕಾಪಾಡುತ್ತಿರುವುದರಿಂದ ಅವನಿಗೆ ಸಪ್ತಾಬ್ಧಿಮೇಖಲಾಯ ನಮಃ ಎಂದು ಬ್ರಹ್ಮದೇವರು ಬಹಳ ಸಮಂಜಸವಾಗಿ ನಮಸ್ಕರಿಸಿದ್ದಾರೆ. ಭಗವಂತನ ಪವಾಡವೇ ಸರಿ. ಇಂತಹ ಬ್ರಹ್ಮಾಂಡ ಸೃಷ್ಟಿ ಪರಮಾತ್ಮನ ವಿಚಿತ್ರ ಕಾರ್ಯ. ಇಂತಹ ಬ್ರಹ್ಮಾಂಡಗಳು ಅವೆಷ್ಟಿವೆಯೋ! ಅವೆಷ್ಟು 14 ಲೋಕಗಳಿವೆಯೋ ತಿಳಿದವರಾರು! ಈ ರೀತಿ ಊಹಿಸುತ್ತಿರುವಾಗ ನಾವು ವಾಸಮಾಡುವ ಭೂಮಂಡಲವು ಅದೆಷ್ಟು ಚಿಕ್ಕಪ್ರಮಾಣದ್ದು, ಆ ಭೂಮಂಡಲದಲ್ಲಿ ನಾವು ವಾಸಿಸುವ ಭೂಭಾಗ, ಮನೆ, ಆಸ್ತಿ ಎಲ್ಲವೂ ಕೃಪಣವಾಗುತ್ತವೆ. ಇದರಲ್ಲಿ ನಮ್ಮ ಆಯುಃ ಪ್ರಮಾಣ ಅದೆಷ್ಟು ಚಿಕ್ಕದು! ಆ ಆಯುಸ್ಸಿನಲ್ಲಿ ನಾವು ಮಾಡುವ ಕಾರ್ಯಗಳು ಅದೆಷ್ಟು ಚಿಕ್ಕದು! ನಾವು ಸೇವಿಸುವ ಸಮಯವೆಷ್ಟು ಕಡಿಮೆ!! ಅದೆಷ್ಟು ಅಮೂಲ್ಯ - ಅದರಲ್ಲಿ ನಮ್ಮ ಜೀವವು ಆತ್ಮವು ಪರಮಾತ್ಮನಿಂದ ಹೊರಟು ಮತ್ತೆ ಅವನನ್ನು ಸೇರುವ ಕಾಲಯಾಪನೆಯಲ್ಲಿ ಈ ಜನ್ಮದ ಅರಿವಿನಲ್ಲಿ ಮರೆಯುವವರಾದ ನಾವೆಷ್ಟರವರು!! ಪರಮಾತ್ಮನು ನಮ್ಮ ಕಡೆ ಗಮನವಿಡಲು ಸಾಧ್ಯವೇ!! ಇಷ್ಟೆಲ್ಲಾ ಕಾರ್ಯಭಾರವಿದ್ದರೂ ಪ್ರತಿಜೀವಿಗೂ ಸಂಕಲ್ಪಮಾತ್ರದಿಂದ ತನ್ನ ಕೃಪೆಯನ್ನು ತೋರುವ ಪರಮಾತ್ಮನ ಕೃಪೆಯು ಅಪಾರನೇ! ಅಮೂಲ್ಯವೇ!! ನಾವೆಷ್ಟು ಅದೃಷ್ಟವಂತರು. ಅಂತಹ ಪರಮಾತ್ಮನು ಸದಾ ನಮಗಾಗಿ, ನಮ್ಮ ಪ್ರಾರ್ಥನೆಗಾಗಿ ಕಾಯುತ್ತಿರುವನಲ್ಲಾ! ಪ್ರಾರ್ಥನೆಯನ್ನು ಅಂಗೀಕರಿಸಿ ಭಕ್ತರ ಬಾಗಿಲನ್ನು ಬೆನ್ನನ್ನು ಕಾಯುತ್ತಿರುವನಲ್ಲಾ ಎಂದು ತಿಳಿದ ಮೇಲೆ ನಮಗನ್ನಿಸುತ್ತದೆ - ನಾವು ಎಷ್ಟು ಸ್ವಾರ್ಥಿಗಳು - ಅವನಿಗೆ ಅವನ ಕೆಲಸದ ಮಾರ್ಗದಲ್ಲಿ ಅವನಿಗೆ ತೊಂದರೆ ಕೊಡುತ್ತಿದ್ದೇವೆ - ಅಹಾ! ಎಷ್ಟು ಸ್ವಾರ್ಥಿಗಳು ಅಲ್ಲವೇ!! ಪರರ ವಿಚಾರವನ್ನು ಇಷ್ಟು ಶ್ರದ್ಧೆಯಿಂದ ನಡೆಸುತ್ತೇವೆಯೇ ಏನು!! ಅದಕ್ಕಾಗಿ ಒಂದೇ ಪ್ರಾರ್ಥನೆ, ಹರಕೆಯಿಂದ ಎಲ್ಲ ಈ ಅನುಮಾನವೂ ಪರಿಹರಿಸಿ ಹೋಗುತ್ತವೆ!

*1. ದುರ್ಜನಃ ಸಜ್ಜನೋ ಭೂಯಾತ್*
*ಸಜ್ಜನಃ ಶಾಂತಿಮಾಪ್ನುಯಾತ್ ।*
*ಶಾಂತೋ ಮುಚ್ಯೇತ ಬಂಧೇಭ್ಯೋ*
*ಮುಕ್ತಶ್ಚಾನ್ಯಾನ್ ವಿಮೋಚಯೇತ್ ॥*

*2. ಸರ್ವಸ್ತರತು ದುರ್ಗಾಣಿ*
*ಸರ್ವೋ ಭದ್ರಾಣಿ ಪಶ್ಯತು ।*

*ಸರ್ವಸ್ಸದ್ಬುದ್ಧಿಮಾಪ್ನುಯಾತು*
*ಸರ್ವಸ್ಸರ್ವತ್ರ ನಂದತು ॥*

3. *ಸರ್ವೇ ಜನಾಃ ಸುಖಿನೋ ಭವಂತು*
*ಸಮಸ್ತ ಸನ್ಮಂಗಳಾನಿ ಭವಂತು ।*

4. *ಶಂ ನೋ ಅಸ್ತು ದ್ವಿಪದೇ*
*ಶಂ ಚತುಷ್ಪದೇ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥*

''ಇತ್ಯಾದಿ, ಇತ್ಯಾದಿ, ಇತ್ಯಾದಿ''

**720. ಸಪ್ತಸಾಮಸ್ವರೂಪಿಣೇ ನಮಃ**

ಸಪ್ತ - ಏಳು, ಸಾಮ - ಸಾಮಗಳು, ಸಾಮವೇದದ ಭಾಗಗಳು.

ಪರಮಾತ್ಮನು ವೇದಗಳೇ, ಅವನು ವೇದದಲ್ಲಿ ಪ್ರತಿಷ್ಠಿತನಾಗಿದ್ದಾನೆ. ಸಾಮಗಳಲ್ಲಿ ಪ್ರತಿಷ್ಠಿತನಾಗಿದ್ದಾನೆ. ಅದರಿಂದ ಸಪ್ತಸಾಮಸ್ವರೂಪಿಯು ಅವನೇ! ಸಾಮಮಂತ್ರಗಳು ಪರಮಾತ್ಮನಿಂದ ಹೊರಬಂದವು. ಎಂದರೆ ಅವನ ಅಂಶದಿಂದ ಅವು ಸ್ಥಾಪಿತವಾಗಿವೆ, ಅವನು ಸಾಮಮಂತ್ರ ಸ್ವರೂಪನು. ಅದರಿಂದ ಸಪ್ತಸಾಮಸ್ವರೂಪಿಣೇ ನಮಃ ಎಂದಿದ್ದೇವೆ. ''ಸಾಮಾನಿ ಗಾಯಂತೆ'' - ಸಾಮಗಳನ್ನು ಹಾಡುವುದರಿಂದ ಪರಮಾತ್ಮನು ಸಂತುಷ್ಟನಾಗುತ್ತಾನೆ ಮತ್ತು ಸುಪ್ರೀತನಾಗುತ್ತಾನೆ. ಸಾಮಗಳಲ್ಲಿಯೇ ಅವನಿರುವುದರಿಂದ ಅವನಿಗಾಗಿಯೇ ಸಾಮಗಳನ್ನು ಅವನ ಅಂಶ - ಆತ್ಮವಿರುವವರು ಹಾಡುವುದರಿಂದ ಎಲ್ಲೆಲ್ಲಿಯೂ ಅವನೇ ಎಂಬುದು ವ್ಯಕ್ತವಾಗುತ್ತದೆ.

*ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।*
*ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥*

*(ಶ್ಲೋಕ 24, ಅಧ್ಯಾಯ 4 - ಗೀತಾ)*

ಎಂಬಂತೆ ಸಕಲವೂ ಬ್ರಹ್ಮವೇ, ಸಕಲದಲ್ಲಿಯೂ ಅವನೇ ಅವನಾಗಿ ಪ್ರಸರಿಸಿದ್ದಾನೆ. ಅದರಂತೆ ಸಪ್ತಸಾಮಗಳಲ್ಲಿಯೂ ಅವನೇ ತನ್ನ ರೂಪವನ್ನೇ ಇರಿಸಿರುತ್ತಾನೆ.

**721. ಸಪ್ತ ವಾಯುಸ್ವರೂಪಾಯ ನಮಃ**

ಏಳು ವಾಯುಗಳ ಸ್ವರೂಪನು - ಏಳು ವಾಯುಗಳೇ ಅವನು.

ದಿತೀ ದೇವಿಯು ಇಂದ್ರನಿಗೆ ಸಮನಾದ ಮಗನನ್ನು ಪಡೆಯಬೇಕೆಂದು ಕಶ್ಯಪರನ್ನು ಅನುಗ್ರಹಿಸಲು ಕೇಳಿದಳು. ಅವರು ಪಯೋವ್ರತವನ್ನು ಚಾಚೂ

ತಪ್ಪದೇ ನಿರ್ದಿಷ್ಟ ದಿನಗಳು ಮಾಡೆಂದು ಉಪದೇಶಿಸಿದರು. ಅದನ್ನು ಮಾಡುವ ಕಾಲದಲ್ಲಿ ಬರುವ ವಿಪರ್ಯಾಸವನ್ನೇ ಇಂದ್ರನು ಎಡಬಿಡದೆ ನಿರೀಕ್ಷಿಸುತ್ತಿದ್ದನು. ಆಗ ಒಂದು ಸಲ ದಿತೀ ದೇವಿಯು ತಪ್ಪುಮಾಡಲು ಇಂದ್ರನು ಅದನ್ನು ತನ್ನ ಇಷ್ಟಾರ್ಥ ಪೂರಿಕೆಗಾಗಿ ಉಪಯೋಗಿಸಿಕೊಂಡನು. ಗರ್ಭದ ಒಳಗೆ ಹೊಕ್ಕು, ಬೆಳೆಯುತ್ತಿದ್ದ ಶಿಶುವಿನ ಅಂಡವನ್ನು ಏಳು ಭಾಗಗಳಾಗಿ ಕತ್ತರಿಸಿದನು. ಮತ್ತೆ ಪ್ರತಿಯೊಂದು ಭಾಗವನ್ನು ಮತ್ತೆ ಏಳು ಭಾಗವಾಗಿ ಮಾಡಿದನು. ಹೀಗೆ ಏಳು ಭಾಗಗಳ ಏಳು ಗುಂಪುಗಳಾಗಿ ಉಂಟಾದವು. ಶಿಶುಗಳು ಅಳಲು ಪ್ರಾರಂಭಿಸಿದಾಗ "ಮಾ-ರುದ" - ಅಳಬೇಡ ಎಂದು ಸಂತೈಸಿ ಹೊರಗೆ ಬಂದನು. ನಂತರ ದಿತೀ ದೇವಿಯನ್ನು ಕ್ಷಮಿಸಬೇಕೆಂದು ಕೇಳಿಕೊಂಡನು. ಅವಳಿಗೆ ಬಹಳ ದುಃಖವಾಯಿತು. ಇಂದ್ರನು ಚಿಂತಿಸಬೇಡ ಎಂದು ಹೇಳಿ. ಆ ಏಳು ಗಣಗಳನ್ನು ತನ್ನವರನ್ನಾಗಿ ಇಟ್ಟು ಕಾಪಾಡುತ್ತೇನೆಂದು ಆಶ್ವಾಸನೆ ಕೊಟ್ಟು ಹೋದನು. ಮಾ-ರುದ ಎಂದು ಸಂಭೋದಿಸಿದ್ದರಿಂದ ಮರುತ್ತುಗಳು ಎಂದು ಹೆಸರಾಯಿತು - ಇವೇ ಸಪ್ತ ಮರುತ್ತುಗಳು. ಸಪ್ತ ಮರುತ್ತುಗಳೇ ಸಪ್ತವಾಯುಗಳು. ಇವು ಪರಮಾತ್ಮನ ಪ್ರತಿರೂಪಗಳು, ಸಪ್ತವಾಯುಸ್ವರೂಪಗಳು, ವಾಯುದೇವನ ರೂಪಗಳು. ಅಥವಾ

ಪಂಚಪ್ರಾಣಗಳೇ ವಾಯುಗಳು - ಪ್ರಾಣಾಪಾನವ್ಯಾನೋದಾನ ಸಮಾನ ವಾಯುಗಳು -

ಇವುಗಳ ಜೊತೆಗೆ ವಾಯುವು ಅಂತಃಬಹಿಶ್ಚ ವಾಯುವಾಗಿ ಪ್ರಸರಿಸುವುದರಿಂದ ಸಪ್ತವಾಯುಗಳಾದವು. ಇವುಗಳೆಲ್ಲ ಪರಮಾತ್ಮನ ರೂಪವೇ!

ಒಳಗಿನ ಪ್ರಾಣವಾಯುಗಳು ಶರೀರದಲ್ಲಿ ಹೀಗೆ ಪ್ರಸರಿಸಿವೆ.

*ಹೃದಿಪ್ರಾಣೋ ಗುದೇಪಾನಃ ಸಮಾನೋ ನಾಭಿಸಂಸ್ಥಿತಃ ।*
*ಉದಾನಃ ಕಂಠದೇಶಸ್ಥೋ ವ್ಯಾನಸ್ಸರ್ವಶರೀರಗಃ ॥*

*(1 ವರ್ಗ - 75 ಶ್ಲೋಕ*
*ಅಮರಕೋಶ - ಪ್ರಥಮಕಾಂಡ)*

ಸಪ್ತ ವಾಯುಗಳೇ ಸಪ್ತಪ್ರಾಣಗಳು - ಅವು ಎರಡು ಕಣ್ಣುಗಳು, ಮೂಗಿನ ಎರಡು ಹೊಳ್ಳೆಗಳು, ಎರಡು ಕಿವಿಗಳು, ಒಂದು ಬಾಯಿ.

**722. ಸಪ್ತಚ್ಛಂದೋಮಯಾಯ ನಮಃ**

ಏಳು ಛಂದಸ್ಸುಗಳೇ ಪರಮಾತ್ಮನ ರೂಪಗಳು.

ಛಂದಸ್ - ಎಂದರೆ ವೇದಗಳು, ವೃತ್ತ, ವೃತ್ತಶಾಸ್ತ್ರ, ಛಂದಸ್ಸು.

ಛಂದಸ್ಸುಗಳಲ್ಲಿ "ಗಾಯಿತ್ರಿ" ಛಂದಸ್ಸು ಬಹಳ ಪ್ರಚಲಿತ. ಅನುಷ್ಟುಪ್ ಛಂದಸ್ಸು ವಿಸ್ತಾರವಾಗಿ ಪ್ರಚಾರದಲ್ಲಿದೆ. ಎಲ್ಲ ಛಂದಸ್ಸುಗಳಲ್ಲಿಯೂ ಪರಮಾತ್ಮನು ಇದ್ದಾನೆ.

ಛಂದಸ್ಸುಗಳು ಏಳು, ಗಾಯತ್ರಿ ಛಂದಸ್ಸೇ ಎಲ್ಲ ಛಂದಸ್ಸುಗಳಿಗೂ ತಾಯಿಯಿದ್ದಂತೆ.

ಸಪ್ತ ಛಂದಸ್ಸುಗಳು ಮತ್ತು ಅವುಗಳ ದೇವತೆಗಳು, ಸಪ್ತಲೋಕಗಳು, ಗಾಯತ್ರಿ ಮಂತ್ರದ ಛಂದಸ್ಸು, ಮಂತ್ರದ ದೇವತೆಗಳು ಈ ರೀತಿ ಇವೆ.

| ಸಪ್ತ ಲೋಕಗಳು | ಗಾಯತ್ರಿ ಮಂತ್ರದ ಛಂದಸ್ಸು | ಮಂತ್ರದ ದೇವತೆಗಳು |
|---|---|---|
| 1. ಓಂ ಭೂಃ | ಗಾಯತ್ರಿ | ಅಗ್ನಿ (ಇದನ್ನು ಗಾಯತ್ರಿ ಶಿರಸ್ಸು ಎಂದು ಕರೆಯುತ್ತೇವೆ) |
| 2. ಓಂ ಭುವಃ | ಉಸ್ನಿಕ್ | ವಾಯು |
| 3. ಓಗ್ಂ ಸುವಃ | ಅನುಷ್ಟುಪ್ | ಸೂರ್ಯ |
| 4. ಓಂ ಮಹಃ | ಬೃತಿ | ಬೃಹಸ್ಪತಿ |
| 5. ಓಂ ಜನಃ | ಪಂಕ್ತಿ | ವರುಣ |
| 6. ಓಂ ತಪಃ | ತ್ರಿಷ್ಟುಪ್ | ಇಂದ್ರ |
| 7. ಓಗ್ಂ ಸತ್ಯಮ್ | ಜಗತಿ | ವಿಶ್ವೇ ದೇವರು |

ಬ್ರಹ್ಮ - ಪ್ರಜಾಪತಿಯೇ ಈ ಮಂತ್ರಗಳ ಋಷಿ.

"ಶ್ರೀಗಾಯಿತ್ರಿ ಹೃದಯ" ದಲ್ಲಿ ಬರುವ ಸ್ತುತಿಧಾರೆ ಲೋಕಗಳಿಗೆ ಈ ರೀತಿ ಸಂಬಂಧಪಟ್ಟಿದೆ. -

*ಭೂಲೋಕಸ್ಥಾ ತ್ವಮೇವಾಸಿ ಧರಿತ್ರೀ ಲೋಕಧಾರಿಣೀ ।*
*ಭುವರ್ಲೋಕೇ ವಾಯುಶಕ್ತಿಃ ಸ್ವರ್ಲೋಕೇ ತೇಜಸಾಂ ನಿಧಿಃ ॥*
*ಮಹರ್ಲೋಕೇ ಮಹಾಸಿದ್ಧಿಃ ಜನೋಲೋಕೇ ಜಪೇತ್ಯಪಿ ।*
*ತಪಸ್ವಿನೀ ತಪೋ ಲೋಕೇ ಸತ್ಯಲೋಕೇಷು ಸತ್ಯವಾಕ್ ॥*

1. ಓಂ ಭೂಃ ಭವಂತಿ ಅಸ್ಮಿನ್ನಿತಿ ಭೂಃ
2. ಓಂ ಭುವಃ ಶೀತೋಷ್ಣವೃಷ್ಟ್ಯುದಕತೇಜಾಂಸಿ ಅಮುಷ್ಮಾತ್ ಭವಂತಿ ಇತಿ ಭುವಃ

| | | |
|---|---|---|
| 3. | ಓಂ ಸುವಃ | ಸುಷ್ಠು ವ್ಯಾಪತೇ ಸುಕೃತಿಭಿಃ ಇತಿ ಸುವಃ |
| 4. | ಓಂ ಮಹಃ | ಮಹತ್ತ್ವಾತ್ ಮಹಃ |
| 5. | ಓಂ ಜನಃ | ಕಲ್ಪಾಂತೇ ಪ್ರಲೀನಾಃ ಪ್ರಾಣಿನಃ ತತ್ರ ಪ್ರಥಮಂ ಜಾಯಂತೇ ಇತಿ ಜನಃ |
| 6. | ಓಂ ತಪಃ | ಸನತ್ಕುಮಾರಾದಿಯೋಗೀಂದ್ರೈಃ ತಸ್ಮಿನ್ ತಪಃ ತಪ್ಯತೇ ಇತಿ ತಪಃ |
| 7. | ಓಗ್ಂ ಸತ್ಯಂ | ಸತ್ಯವ್ರತಾನಾಂ ಸ್ಥಾನಭೂತತ್ವಾತ್ ಸತ್ಯಂ |

*ಇತ್ಯೇತೇ ಸಪ್ತಲೋಕಾಃ ಸಪ್ತವ್ಯಾಹೃತಿಪ್ರತಿಪಾದ್ಯಾಃ ಪ್ರಜಾನಾಂ ಸ್ಥಿತ್ಯಾದ್ಯರ್ಥಂ ಸಪ್ತವ್ಯಾಹೃತೀನಾಂ ವ್ಯವಹರಣಾತ್ ಆದೌ ಪ್ರಜಾಪತಿನಾ ಸೃಷ್ಟಾಃ ।।*

*ವ್ಯಾಹೃತೀನಾಂ ಪರಮಾತ್ಮನಃ ಪರ್ಯಾಯವಾಚಕತ್ವ ಖ್ಯಾಪನಾಯ*
*ವ್ಯಾಹೃತಿಪ್ರತಿಪಾದ್ಯಲೋಕಾನಾಂ*
*ಪ್ರಣವಪ್ರತಿಪಾದ್ಯಬ್ರಹ್ಮಸ್ವರೂಪತ್ವವಿವಕ್ಷಯಾ ಚ*
*ಪ್ರಣವಾನಾಂ ಪ್ರತ್ಯೇಕ ಉಚ್ಚಾರಣಮ್ ।।*

(ಮಹಾನಾರಾಯಣೋಪನಿಷತ್: 35ನೇ ಅನುವಾಕ, ಎರಡನೆ ಮಂತ್ರ)
(ಪುಟ 214 - 217, ಶ್ರೀ ರಾಮಕೃಷ್ಣ ಮಠ, ಮದ್ರಾಸಿನಿಂದ ಪ್ರಕಾಶಿತವಾದ್ದು)

***ಸಪ್ತಾರ್ಚಿರುದ್ಯದ್ದಂಷ್ಟ್ರಾಯ ಸಪ್ತಾಶ್ವರಥರೂಪಿಣೇ ।***
***ಸ್ವಚ್ಛಾಯ ಸ್ವಚ್ಛರೂಪಾಯ ಸ್ವಚ್ಛಂದಾಯ ನಮೋ ನಮಃ ।।122।।***
*(723-727)*

**723. ಸಪ್ತಾರ್ಚಿರುದ್ಯದ್ದಂಷ್ಟ್ರಾಯ ನಮಃ**

ಸಪ್ತಾರ್ಚಿಗಳು - ಶ್ರಾದ್ಧ ಕಾಲದಲ್ಲಿ, ತರ್ಪಣ ಕೊಡುವ ಕಾಲದಲ್ಲಿ "ಸಪ್ತಾರ್ಚಿ" ಮಂತ್ರವನ್ನು ಪಠಿಸುವುದರಿಂದ ಪಿತೃ ದೇವತೆಗಳು ಬಹಳ ಬೇಗ ಪ್ರಾರ್ಥಿಸಿದ ಕಾಲದೇಶಕ್ಕನುಗುಣವಾಗಿ ಬಂದು ಶ್ರಾದ್ಧವನ್ನು ಮತ್ತು ತರ್ಪಣವನ್ನು ಸ್ವೀಕರಿಸಿ ಸತ್ಫಲಗಳನ್ನು ನೀಡುತ್ತಾರೆ.

ಹೀಗೆ ನೀಡುವಲ್ಲಿ ಸಕಲ ಆಘಾತಗಳನ್ನು ಸಪ್ತಾರ್ಚಿ ಮಂತ್ರವೆಂಬ ಕೋರೆದಾಡೆಗಳಿಂದ ಜಗಿದು ಪೀಡೆಗಳನ್ನು ಪರಿಹರಿಸುತ್ತಾನೆ. ಪರಮಾತ್ಮನೇ ಪಿತೃದೇವತೆಗಳ ರೂಪ, "ಪಿತೃ ರೂಪಿ ಜನಾರ್ದನಃ ಪ್ರೀಯತಾಂ" ಎಂದು ನಮಸ್ಕರಿಸುತ್ತೇವೆ.

ಸಪ್ತಾರ್ಚಿಮಂತ್ರವು ಬಹಳ ಶ್ರೇಷ್ಠವಾದುದು ಮತ್ತು ಕ್ಷಿಪ್ರ ಫಲವನ್ನು ಕೊಡುವಂತಹುದು. ಇದನ್ನು ಸರ್ವಕರ್ತೃಗಳೂ ಆ ತರ್ಪಣಕಾಲದಲ್ಲಿ

ಅವಶ್ಯ ಪಠಿಸಿ ಪಿತೃಗಳನ್ನು ಆಹ್ವಾನಿಸಿ ತರ್ಪಣವನ್ನು ಕೊಡಬೇಕು. ಆ ಮಂತ್ರಗಳ ಶ್ಲೋಕಗಳು ಈ ರೀತಿ ಇವೆ :-

ಸಪ್ತಾರ್ಚಿ ಮಂತ್ರ :-

*ಅಮೂರ್ತಿಣಾಂ ಸಮೂರ್ತಿಣಾಂ ಪಿತೃಣಾಂ ದೀಪ್ತತೇಜಸಾಂ ।*
*ನಮಾಮಿ ಸದಾ ತೇಷಾಂ ಧ್ಯಾನಿನಾಂ ಯೋಗಚಕ್ಷುಷಾಮ್ ।।1।।*
*ಇಂದ್ರಾದೀನಾಂ ಚ ನೇತಾರೋ ದಕ್ಷಮಾರೀಚಯೋ ಸ್ತಥಾ ।*
*ಸಪ್ತರ್ಷೀಣಾಂ ಪಿತೃಣಾಂ ಚ ತಾನ್ನಮಸ್ಯಾಮಿ ಕಾಮದಾನ್ ।।2।।*
*ಮನ್ವಾದೀನಾಂ ಚ ನೇತಾರಃ ಸೂರ್ಯ ಚಂದ್ರಮಸೋ ತಥಾ ।*
*ತಾನ್ನಮಸ್ಕೃತ್ಯ ಸರ್ವಾನ್ ವೈ ಪಿತೃಮತ್ಸುವಿಧಷ್ವಪಿ ।।3।।*
*ನಕ್ಷತ್ರಾಣಾಂ ಗ್ರಹಾಣಾಂ ಚ ವಾಯ್ವಗ್ನ್ಯೋಶ್ಚ ಪಿತೃನಥ ।*
*ದ್ಯಾವಾಪೃಥಿವ್ಯೋಶ್ಚ ಸದಾ ನಮಸ್ಯಾಮಿ ಕೃತಾಂಜಲಿಃ ।।4।।*
*ದೇವರ್ಷೀಣಾಂ ಚ ನೇತಾರಃ ಸರ್ವಲೋಕ ನಮಸ್ಕೃತಾಃ ।*
*ತ್ರಾತಾರಃ ಸರ್ವಭೂತಾನಾಂ ನಮಸ್ಯಾಮಿ ಪಿತಾಮಹಾನ್ ।।5।।*
*ಪ್ರಜಾಪತೇರ್ಗವಾವಹ್ನೇಃ ಸೋಮಾಯ ಚ ಯಮಾಯ ಚ ।*
*ಯೋಗೇಶ್ವರೇಭ್ಯಶ್ಚ ಸದಾ ನಮಸ್ಯಾಮಿ ಕೃತಾಂಜಲಿಃ ।।6।।*
*ಪಿತೃಗಣೇಭ್ಯಃ ಸಪ್ತಭ್ಯೋ ನಮೋ ಲೋಕೇಷು ಸಪ್ತಸು ।*
*ಸ್ವಯಂಭುವೇ ನಮಶ್ಚೈವ ಬ್ರಹ್ಮಣೇ ಯೋಗ ಚಕ್ಷುಷೇ ।।7।।*
*।। ಸಪ್ತಾರ್ಚಿಷಂ ಜಪೇದ್ಯಸ್ತು ಕ್ಷಿಪ್ರಮಾಯಾಂತಿ ಪೈತೃಕಮ್ ।।*

ಪರಮಾತ್ಮನು ತನ್ನ ಕೋರೆದಾಡೆಗಳಿಂದ ಏನನ್ನು ಬೇಕಾದರೂ ಸಾಧಿಸಬಲ್ಲನು. ಈ ಮಂತ್ರವು ಪಿತೃದೇವತೆಗಳಿಗೆ ಅನ್ವಯಿಸುತ್ತದೆ. ಬಹಳ ಶಕ್ತಿಯುತವಾದುದು. ಪಿತೃದೇವತೆಗಳೂ ಸಹ ತಮ್ಮ ಸಂತತಿಗಳು ಶಾಂತಿಯುತವಾಗಿ ಮುಂದುವರಿಯಬೇಕು ಎಂದು ಸದಾ ಒಳ್ಳೆಯದನ್ನೇ ಬಯಸುತ್ತಿರುತ್ತಾರೆ - ಸಪ್ತಾರ್ಚಿರುದ್ಯದ್ದಂಷ್ಟ್ರಾಯ ನಮಃ.

**724. ಸಪ್ತಾಶ್ವರಥರೂಪಿಣೇ ನಮಃ**

ಭಗವಾನ್ ಸೂರ್ಯನಾರಾಯಣನು ತನ್ನ ರಥಕ್ಕೆ ಏಳು ಕುದುರೆಗಳನ್ನು ಇರಿಸಿಕೊಂಡಿರುತ್ತಾನೆ. ಅರುಣನು ರಥವನ್ನು ನಡೆಸುವವನು. ಏಳು ಕುದುರೆಗಳಿಂದ ಎಳೆಯಲ್ಪಟ್ಟ ರಥವನ್ನು ಹೊಂದಿರುವ ಸೂರ್ಯನಾರಾಯಣ ಸ್ವರೂಪಿಯೇ ಶ್ರೀಮನ್ ನಾರಾಯಣ. ಈ ರಥವು ನಿರಂತರ ನಡೆಯುತ್ತಿರುತ್ತದೆ. ಕಾಲದೇವನ ಕಾಲವು ಯಾವ ರೀತಿ ನಿಲ್ಲುವುದಿಲ್ಲವೋ ಅದೇ ರೀತಿ ಈ ರಥವೂ ನಿಲ್ಲುವುದಿಲ್ಲ, ಇದು ಪರಮಾತ್ಮನ ಸಂಕಲ್ಪ.

ಹಗಲು ರಾತ್ರಿಗಳಾಗುವುದು ಕೇವಲ ಸೂರ್ಯನ ಬೆಳಕು ಬೀಳುವ ಭೂಮಿಯ ಭಾಗಗಳಿಗೆ ಮಾತ್ರ. ಭೂಮಿಯ ಚಲನೆಯಿಂದ ಉಂಟಾಗುತ್ತದೆ.

ಸೂರ್ಯನಾರಾಯಣನು ಏಳು ಕುದುರೆಗಳಿಂದ ಎಳೆಯಲ್ಪಡುವ ರಥವನ್ನು ಉಪಯೋಗಿಸುತ್ತಾನೆ. ಈ ರಥವೇ ಪರಮಾತ್ಮನ ಒಂದು ರೂಪ ಎಂದು ಬ್ರಹ್ಮದೇವರು ನರಸಿಂಹನಿಗೆ ಜ್ಞಾಪಿಸುತ್ತಾರೆ.

ಇದೇ ರೀತಿ ಶ್ರೀ ಕೃಷ್ಣನು ಅರ್ಜುನನಿಗೆ ಮಹಾಭಾರತ ಯುದ್ಧದಲ್ಲಿ ಉಪಯೋಗಿಸಿದ ರಥವನ್ನು ಬ್ರಹ್ಮದೇವರು ಹೇಳುತ್ತಿರಬಹುದೇನೋ?

**725. ಸ್ವಚ್ಛಾಯ ನಮಃ**

ಸ್ವಚ್ಛ - ಎಂದರೆ ನಿರ್ಮಲವಾದ್ದು, ಕೊಳೆಯಿಲ್ಲದ್ದು, ಕಲ್ಮಶವಿಲ್ಲದ್ದು, ಸುಂದರವಾದ್ದು, ಶುಭ್ರವಾದ್ದು.

ಪರಮಾತ್ಮನು ಯಾವುದಕ್ಕೂ ಅಂಟದವನಾದ್ದರಿಂದ ಅವನು ಸದಾ ಶುಭ್ರನು, ಸ್ವಚ್ಛನು. ಆದರಿಂದ ಅವನನ್ನು ಸ್ವಚ್ಛಾಯ ನಮಃ ಎಂದು ನಮಸ್ಕರಿಸುತ್ತೇವೆ.

ಇದೇ ರೀತಿ ಮೂಲದಲ್ಲಿ ಆತ್ಮನು ಸ್ವಚ್ಛನು. ಆತ್ಮನಿಗೆ ಸಂಸ್ಕಾರಗಳು, ಇಂದ್ರಿಯಗಳು, ಮನೋಬುದ್ಧಿ, ಅಹಂಕಾರ, ಚಿತ್ತ, ಪ್ರಾಣಗಳು, ಗುಣಗಳು ಅಂಟಿಕೊಂಡಿರುವುದರಿಂದ ಅವನು ಅಸ್ವಚ್ಛ. ಪರಮಾತ್ಮನ ಕೃಪೆಯಿಂದ ಗುರುದರ್ಶನವಾಗಿ ಗುರುವಿನಿಂದ ಉಪದೇಶಪಡೆದು ಪರಮಾತ್ಮನನ್ನು ಸತತ ಪ್ರಾರ್ಥಿಸುತ್ತಾನೆ. ಆಗ ಕಾಲಾನುಕಾಲಕ್ಕೆ ಈ ಆವರಣಗಳು ಒಂದೊಂದಾಗಿ ಕಳಚಿಹೋಗಿ ಆತ್ಮನೊಬ್ಬನೇ ಉಳಿಯುತ್ತಾನೆ ಮತ್ತು ಪರಮಾತ್ಮನನ್ನು ಸೇರುತ್ತಾನೆ. ಆಗ ಆತ್ಮವು ಪುನಃ ಸ್ವಚ್ಛವಾಗಿ ಪರಮಾತ್ಮನ ಹಾಗೆಯೇ ಆಗುತ್ತದೆ.

**726. ಸ್ವಚ್ಛರೂಪಾಯ ನಮಃ**

ಭಗವಂತನು ಶುಭ್ರನು, ಶುಭ್ರದ ರೂಪವೇ ಅವನು, ಅವನ ರೂಪದ ಎಲ್ಲೆಲ್ಲಿಯೂ ಶುಭ್ರತೆಯೇ ಇರುತ್ತದೆ.

**727. ಸ್ವಚ್ಛಂದಾಯ ನಮಃ**

ಸ್ವಚ್ಛತೆಯ ಭಾವವನ್ನೂ ಹೊಂದಿರುವವನು - ಸ್ವಚ್ಛಂದನು.

ಇದೂ ಪರಮಾತ್ಮನನ್ನೇ ಪ್ರತಿಪಾದಿಸುತ್ತದೆ, ಆತ್ಮನನ್ನೂ ಪ್ರತಿಪಾದಿಸುತ್ತದೆ.

ಸ್ವಚ್ಛಂದ - ಪರಮಾತ್ಮನು ಸ್ವತಂತ್ರನು, ಅವನನ್ನು ಯಾರೂ ಅಡ್ಡಿಪಡಿಸಲು ಶಕ್ತರಲ್ಲ.

ಆತ್ಮನು ಸ್ವತಂತ್ರನಲ್ಲ, ಪರಮಾತ್ಮನ ಅಧೀನ. ಈ ನಾಮವು ಪರಮಾತ್ಮನಿಗೆ ಮಾತ್ರ ಅನ್ವಯಿಸುತ್ತದೆ.

*ಶ್ರೀವತ್ಸಾಯ ಸುರೇಶಾಯ ಶೃತಯೇ ಶೃತಿಮೌಲಯೇ ।*
*ಶುಚಿಶ್ರೋತ್ರಾಯ ಶೂರಾಯ ಸುಭಗಾಯ ಸುಧನ್ವನೇ ।।123।।*
*(728-735)*

**728. ಶ್ರೀವತ್ಸಾಯ ನಮಃ**

ಪರಮಾತ್ಮನು ಶ್ರೀವತ್ಸನು, ಶ್ರೀವತ್ಸ ಲಾಂಛನ ಹೊಂದಿರುವವನು, ಶ್ರೀವತ್ಸದಿಂದ ಅಲಂಕೃತನಾಗಿರುವವನು. ಶ್ರೀವತ್ಸ ಚಿಹ್ನೆಯನ್ನು ಧರಿಸಿರುವವನು.

ಶ್ರೀ - ಎಂದರೆ ಲಕ್ಷ್ಮಿ, ಸಂಪತ್ತು, ವತ್ಸ - ಎದೆ, ಕರು, ಮಗು, ವರ್ಷ.

ಎದೆಯಲ್ಲಿ ಲಕ್ಷ್ಮಿಗೆ ನೆಲಸಲು ಸ್ಥಳ ಕೊಟ್ಟಿರುವವನು - ಶ್ರೀವತ್ಸ.

ಬಹಳ ಪ್ರಿಯವಾದದ್ದನ್ನು ಹೃದಯದಲ್ಲಿ, ಎದೆಯಲ್ಲಿ ಇಟ್ಟುಕೊಳ್ಳುತ್ತೇವೆ. ಇದು ಶ್ರೀವತ್ಸ ಸಮಾನವಾದ ಬೆಲೆಯುಳ್ಳದ್ದು. ಕರು, ಮಗು, ಎಲ್ಲವೂ ಪ್ರಿಯವೇ. ಶ್ರೀಯೊಡನೆ ಮತ್ತೂ ಪ್ರಿಯ. ಆದರಿಂದ ಎದೆಯಲ್ಲಿ ಗೋಪ್ಯವಾಗಿರುವುದು.

**729. ಸುರೇಶಾಯ ನಮಃ**

ಸುರ - ದೇವತೆಗಳು, ಈಶ - ಇವರಿಗೆ ಒಡೆಯ -

ಸುರೇಶ - ಪರಮಾತ್ಮ, ಶ್ರೀಮನ್ನಾರಾಯಣನು ಸದಾ ದೇವತೆಗಳ ಪಕ್ಷದಲ್ಲಿಯೇ ಇರುತ್ತಾನೆ ಏಕೆಂದರೆ ಅವರು ಅವನನ್ನು ಆರಾಧಿಸುತ್ತಾರೆ. ಹಾಗೆಯೇ ಭಕ್ತಪರಾಧೀನನು.

**730. ಶೃತಯೇ ನಮಃ**

ಶೃತಿ - ವೇದಗಳು, ಧ್ವನಿ.

ಪರಮಾತ್ಮನನ್ನು ವೇದಗಳು ಹೇರಳವಾಗಿ ಪೂಜಿಸುತ್ತವೆ, ಆರಾಧಿಸುತ್ತವೆ, ಹೊಗಳುತ್ತವೆ. ಪರಮಾತ್ಮನ ವಿಚಾರಗಳನ್ನು ವೇದಗಳು ಪ್ರಕಟಿಸುತ್ತವೆ. ಪರಮಾತ್ಮನು ವೇದಗಳಿಂದ ಕೇಳಲ್ಪಡುವವನು, ಆದರಿಂದ ಅವನು - ಶೃತನು - ಶೃತಯೇ ನಮಃ.

**731. ಶೃತಿಮೌಲಯೇ ನಮಃ**

ಶ್ರುತಿಗಳಲ್ಲಿ ಹೊಗಳುವ, ಹಾಡುವ, ಪಠಿಸುವ ದೇವ, ದೇವತೆಗಳಲ್ಲೆಲ್ಲಾ ಪರಮಾತ್ಮನನ್ನು ಕುರಿತು ಹೇಳುವ ಶೃತಿಗಳು ಅತ್ಯುತ್ತಮ. ಪರಮಾತ್ಮನೇ ಕಲಶಪ್ರಾಯನು, ಬೆಲೆಗಳಲ್ಲೆಲ್ಲ ಅತ್ಯಂತ ಉತ್ಕೃಷ್ಟನು.

ಯಾವ ರೀತಿಯಲ್ಲಿ ವಿಮರ್ಶಿಸಿದರೂ ಪರಮಾತ್ಮನೇ ಸರ್ವೋತ್ತಮನು. ಎಲ್ಲ ಶೃತಿಗಳೂ ನಿರ್ದೇಶಿಸುವುದು ಅವನನ್ನೇ. ಸರ್ವ ದೇವ ದೇವತೆಗಳು, ಪೂಜೆ, ಜಪ, ತಪ, ಭಜನೆ, ಪುರಾಣ, ಇತಿಹಾಸಗಳು ಅವನಲ್ಲಿಯೇ ''ಓಂ'' ಕಾರದಲ್ಲಿ ಪ್ರತಿಷ್ಠಿತವಾಗಿವೆ - ಅವನಿಗೆ ಶೃತಿಮೌಲಯೇ ನಮಃ ಎಂದು ನಮಸ್ಕರಿಸುತ್ತೇವೆ. (ಮೌಲ್ಯ - ಎಂದರೆ ಬೆಲೆಯುಳ್ಳವನು - ಮೌಲಿ.)

732. ಶುಚಿಶ್ರೋತ್ರಾಯ ನಮಃ

ಶ್ರೋತೃ - ಕೇಳುವವನು - ಏನನ್ನು ಕೇಳಿಸಿಕೊಂಡರೂ ಅವನು ಶ್ರೋತೃ ಎಂದು ಕರೆಯಲ್ಪಡುತ್ತಾನೆ.

ಶುಚಿ - ಎಂದರೆ ದೇಹ, ಮನಸ್ಸು, ಮಾತುಗಳ ನಿರ್ಮಲತೆ, ಶುಭ್ರತೆ, ನಿಷ್ಕಲಂಕವಾದ ಕಾಯಾ, ವಾಚಾ, ಮನಸ್ಸಿನಿಂದ ಇರುವುದು.

ಶುಚಿಶ್ರೋತ್ರ - ಉತ್ಕೃಷ್ಟವಾದ, ಉದಾತ್ತವಾದ ಮತ್ತು ಪವಿತ್ರವಾದ ವಿಚಾರಗಳನ್ನು ಕೇಳುವಾಗ ನಿರ್ಮಲವಾದ ಮನಸ್ಸು, ಶುದ್ಧಗೊಳಿಸಿದ ದೇಹ ಮತ್ತು ಸಹನೆಯಿಂದ ಸಹಾನುಭೂತಿಯಿಂದ ವಿಚಾರಗಳನ್ನು ತಿಳಿದು ಮಿತವಾಗಿ, ಕ್ಲುಪ್ತವಾಗಿ ಸಮಯಕ್ಕೆ ತಕ್ಕಂತೆ ತೂಕವಾಗಿ ಆಡುವ ಮಾತುಗಳು ಅವಶ್ಯಕ ಮತ್ತು ಪುರೋಭಿವೃದ್ಧಿಗೆ ಸಮಂಜಸ.

ಪರಮಾತ್ಮನನ್ನು ಕುರಿತು ಮಾಡುವ ಪೂಜೆ, ಭಜನೆ, ಜಪ, ತಪ, ಪುರಾಣ, ಪುಣ್ಯಕಥೆಗಳ ಶ್ರವಣ - ಎಲ್ಲವೂ ಶುಚಿಯಾದ ಕಾಯಾವಾಚಾ ಮನಸ್ಸಿನಿಂದ ಕೂಡಿರಬೇಕು. ಪರಮಾತ್ಮನಿಗೆ ಪ್ರಿಯವಾಗುವ ಹಾಗೆ ಹೇಳುವ ಪ್ರತಿಯೊಂದು ಮಾತೂ ಸಹ ಪವಿತ್ರವಾಗಿರಬೇಕು, ಅರ್ಥ ತಿಳಿದು ಹೇಳಿದಾಗ ಮನಸ್ಸಿಗೆ ಶಾಂತಿ, ಸಮಾಧಾನಗಳು ಬರುತ್ತವೆ. ಆಗ ಪರಮಾತ್ಮನು ಪ್ರೀತನಾದನೆಂದು ತಿಳಿಯಬೇಕು. ಅವನು ಕೇಳುವಾಗ ಪವಿತ್ರತೆ ನಮ್ಮಿಂದ ಹೊರ ಹೊಮ್ಮಬೇಕು. ಅವನು ಎಷ್ಟು ಶುಚಿಯಾಗಿರುವನೋ ಅಷ್ಟೇ ಶುಚಿಯಾಗಿರಲು ನಾವು ಪ್ರಯತ್ನಿಸಬೇಕು - ಅವನು ಶುಚಿ ಶ್ರೋತ್ರನು.

ಅಥವಾ

ಶುಚಿಯಾದದ್ದನ್ನೇ, ಶ್ರೋತೃ - ಕೇಳುವವನು - ಭಗವಂತನಿಗೆ ಯಾವುದರಲ್ಲಿಯೂ ಪಕ್ಷಪಾತವಿಲ್ಲದರಿಂದ ನಾವೇ ಪವಿತ್ರತೆಯನ್ನು ಸಾಧಿಸಬೇಕು.

733. ಶೂರಾಯ ನಮಃ

ಶೂರಾಯ ನಮಃ - ಶೂರನು, ಅಪ್ರತಿಮ ವೀರನು, ಶಕ್ತಿವಂತನು, ಹಿಡಿದದ್ದನ್ನ ಸಾಧಿಸುವವನು. ಇದರಲ್ಲಿ ಭಗವಂತನನ್ನು ಬಿಟ್ಟರೆ ಬೇರೆ ಯಾರೂ ಇಲ್ಲ. ಮಾಡಿದ ಸಂಕಲ್ಪವನ್ನು ಭಗವಂತನು ಸಾಧಿಸಿಯೇ ಸಾಧಿಸುತ್ತಾನೆ.

ಜೀವಿಗಳಾದರೂ ಒಂದು ಸಂಕಲ್ಪವನ್ನು ಮಾಡಿ ಕಾರ್ಯಗತ ಮಾಡುವುದರೊಳಗೆ ಅನೇಕ ಇತರ ಸಂಕಲ್ಪಗಳು ಮೇಲೆ ಬಂದು ನಿಲ್ಲಿಸುತ್ತವೆ. ಆದ್ದರಿಂದ ಭಗವಂತನು ಇದನ್ನು ''ಸಂಕಲ್ಪಪ್ರಭವಾನ್'' ಎನ್ನುತ್ತಾನೆ. ಜೀವಿಯು ಪರತಂತ್ರ, ಪರಮಾತ್ಮನ ಅಧೀನ ಮತ್ತೆ ಅವನ ಸಂಕಲ್ಪಕ್ಕನುಗುಣವಾಗಿ ನಡೆಯುವವನು, ಅದರಿಂದ ಜೀವಿಯು ತನ್ನದೇ ಆದ ಸಂಕಲ್ಪವನ್ನು ಮಾಡಿ ನಡೆಸಲು ಸಾಧ್ಯವಿಲ್ಲ, ತನ್ನದೇ ಆದ ಶೂರತ್ವವನ್ನು ಹೊಂದಲು ಸಾಧ್ಯವಿಲ್ಲ. ಹಾಗಿದ್ದರಿಂದ ಪರಮಾತ್ಮನು ಪರಮ ಶಕ್ತಿಯುತನಾದ ಶೂರನೇ!

734. ಸುಭಗಾಯ ನಮಃ

ಭಗ ಎಂದರೆ ಐಶ್ವರ, ಸೂರ್ಯ, ಚಂದ್ರ, ವೈಭವ, ಸೌಂದರ್ಯ, ಮೋಕ್ಷ, ಅಣುವಿನಷ್ಟು ರೂಪ ಹೊಂದುವ ಸಿದ್ಧಿ.

ಅಥವಾ

''ಭಗವನ್ನು ಹೊಂದಿರುವನು ಭಗವಾನ್''. ಐಶ್ವರ್ಯ, ಧರ್ಮ, ಯಶಸ್ಸು, ಸಂಪತ್ತು, ಜ್ಞಾನ ಮತ್ತು ವೈರಾಗ್ಯ - ಈ ಆರಕ್ಕೆ ಭಗ ಎಂದು ಹೇಳುತ್ತಾರೆ - (ವಿಷ್ಣು ಪುರಾಣ) ಇವುಗಳನ್ನು ಉಳ್ಳವನು ಭಗವನ್.

ಅಥವಾ ಉತ್ಪತ್ತಿ ಪ್ರಲಯಗಳನ್ನು, ಭೂತಗಳ ಬರುವಿಕೆ - ಹೋಗುವಿಕೆಗಳನ್ನು ಮತ್ತು ವಿದ್ಯೆ - ಅವಿದ್ಯೆಗಳನ್ನು ತಿಳಿದವನು ಭಗವಂತನೇ ಎಂದು ಹೇಳಲ್ಪಡುತ್ತಾನೆ'' (ವಿ.ಸ. - 558)

ಅಥವಾ

ಸು - ಉತ್ತಮವಾದ, ಭಗ - ಭಗವನ್ನು ಹೊಂದಿರುವವನು - ಪರಮಾತ್ಮ. ಐಶ್ವರ್ಯ, ಧರ್ಮ, ಯಶಸ್ಸು, ಸಂಪತ್ತು, ಜ್ಞಾನ ಮತ್ತು ವೈರಾಗ್ಯಗಳಿಗಿಂತ ಉತ್ತಮವಾದುದು ಯಾವುದೂ ಇಲ್ಲ - ಇದನ್ನು ಹೊಂದಿರುವವನು ಪೂಜ್ಯನೂ, ಉತ್ತಮನೂ ಭಗವಂತನೂ ಆಗುತ್ತಾನೆ.

735. ಸುಧನ್ವನೇ ನಮಃ

ಧನವನ್ನು ಹೊಂದಿರುವವನು ಧನವಾನ್.

ಒಳ್ಳೆಯ ಧನವನ್ನು ಹೊಂದಿರುವವನು ಸುಧನವಾನ್ - ಅಂದರೆ ಸುಧನ್ವ.

ಧನವೆಂದರೆ ಸಾಮಾನ್ಯ ರೀತಿಯಲ್ಲಿ ಅರ್ಥವಾಗುವ ಹಣವೊಂದೇ ಅಲ್ಲ.

ಪವಿತ್ರತೆಯಿಂದ ಸಂಪಾದಿಸಿದ ಐಶ್ವರ್ಯ, ಶ್ರೇಯಸ್ಸನ್ನು ವರ್ಧಿಸುವ ಐಶ್ವರ್ಯಗಳು, ಇವೇ ಜ್ಞಾನಸಂಪತ್ತು, ವೈರಾಗ್ಯ ಸಂಪತ್ತು, ಧರ್ಮದಿಂದ ಗಳಿಸಿದ ಸಂಪತ್ತು. ಯಾವ ಸಂಪತ್ತನ್ನು ಇತರರಿಗೆ ಕೊಟ್ಟರೂ ಕಡಿಮೆಯಾಗುವುದಿಲ್ಲವೋ ಅದೇ ನಿಜವಾದ ಶಾಂತಿ, ಸಮಾಧಾನ, ಸ್ಥಿತ ಪ್ರಜ್ಞತೆಯನ್ನು ಕೊಡುವ ಸಂಪತ್ತು. ಯಾವ ಸಂಪತ್ತಿನ ಹೊಂದುವಿಕೆಯಿಂದ

ಭಗವಂತನಿಗೆ ಹತ್ತಿರವಾಗುತ್ತೇವೆಯೋ ಅದೇ ನಿಜವಾದ ಸುಧನ್ವ. ಯಾವುದು ಭಗವಂತನ ಸಾಮಿಪ್ಯ, ಸಾಯುಜ್ಯ, ಸಾರೂಪ್ಯ, ಸಾಲೋಕ್ಯವನ್ನು ಹೊಂದುವಂತೆ ಮಾಡುವುದೋ ಅದೇ ನಿಜವಾದ ಸುಧನ್ವ. ಯಾವುದನ್ನು ಹೊಂದಿದ ಮೇಲೆ ಬೇರೆ ಹೊಂದಲು ಬೇಕಾಗುವುದಿಲ್ಲವೋ ಅದೇ ಸುಧನ್ವ - ಅದೇ ಭಗವಂತ - ಅವನೇ ಸುಧನ್ವ - ಅದಕ್ಕೆ ಅವನಿಗೆ ಸುಧನ್ವಾಯ ನಮಃ ಎಂದು ನಮಸ್ಕರಿಸುತ್ತೇವೆ.

ಧನ್ವನ್ - ಮರುಭೂಮಿ, ದಂಡೆ, ತೀರ, ಆಕಾಶ.

ಭವಸಾಗರದ ಸಾತ್ವಿಕವಾದ ತೀರ ಪ್ರದೇಶವೇ ಪರಮಾತ್ಮ. ಅದರಿಂದ ಅವನು ಸುಧನ್ವನ್.

ಸುಂದರವಾದ ಆಕಾಶ ಎಂದು ಅರ್ಥಮಾಡಿದರೂ ಅವನು ಸುಧನ್ವನ್. ಆಕಾಶವು ಪಂಚಭೂತಗಳಲ್ಲೊಂದು. ಸೃಷ್ಟಿಯಲ್ಲಿ ಮೊದಲು ಬಂದದ್ದು ಆಕಾಶ. ಇದರಿಂದ ವಾಯು, ಅಗ್ನಿ, ಆಪಃ, ಪೃಥವಿ ತತ್ವಗಳು ಬಂದವು.

ಸುಧನ್ವನೆಂಬುವನು ಒಬ್ಬ ರಾಜ, ದೈವ ಭಕ್ತ.

*ಶುಭ್ರಾಯ ಸುರನಾಥಾಯ ಸುಪ್ರಭಾಯ ಶುಭಾಯ ಚ ।*
*ಸುದರ್ಶನಾಯ ಸೂಕ್ಷ್ಮಾಯ ನಿರುಕ್ತಾಯ ನಮೋ ನಮಃ ॥124॥*

*(736-742)*

736. ಶುಭ್ರಾಯ ನಮಃ

ಶುಭ್ರ - ಎಂದರೆ ನಿರ್ಮಲವಾದ್ದು, ನಿಷ್ಕಲ್ಮಶವಾದ್ದು, ತೇಜಸ್ಸುಳ್ಳದ್ದು.

ಪರಮಾತ್ಮನು ಸದಾ ದಿವ್ಯ ತೇಜಸ್ಸಿನವನು, ನಿರ್ಮಲನು, ನಿಷ್ಕಲಂಕನು - ಆದ್ದರಿಂದ ಶುಭ್ರನು - ಶುಭ್ರಾಯ ನಮಃ.

ಅಥವಾ

ಆತ್ಮನು ಶುದ್ಧನು, ನಿರ್ಮಲನೂ, ಪರಮಾತ್ಮನ ಅಂಶವಾದ್ದರಿಂದ ನಿತ್ಯಶುದ್ಧನು, ಶುಭ್ರನು. ಆದರೆ ಸಂಸಾರ ಸಾಗರಕ್ಕೆ ಬಂದಮೇಲೆ ಅವನಿಗೆ ಪ್ರಕೃತಿ, ಮಾಯೆ, ಪುರುಷ, ಸಂಸಾರದ ಸಂಪರ್ಕದಿಂದ ಅಂಟಿದ ಅಂಟಿಗೆ ಸಂಸ್ಕಾರ ಎನ್ನುತ್ತೇವೆ. ಈ ಸಂಸ್ಕಾರಗಳು ಆತ್ಮನ ನಿಜ ಭಾವವನ್ನು ಮುಚ್ಚಿಹಾಕುತ್ತವೆ. ಈ ಕಾರಣದಿಂದ ಆತ್ಮನು ಪರಮಾತ್ಮನ ದಯೆಗಾಗಿ ಸಂಸಾರದಲ್ಲಿ ದೇಹಗಳನ್ನು ಪಡೆದು ಅವನ ಕರುಣೆಯಿಂದಲೇ ಭವಸಾಗರದಿಂದ ಹೊರಬರಬೇಕಾಗುತ್ತದೆ ಮತ್ತು ನಂತರ ಪರಮಾತ್ಮನನ್ನು ಸೇರಬೇಕಾಗುತ್ತದೆ. ಆಗಲೇ ತನ್ನ ನಿಜವಾದ ಶುಭ್ರತೆಯನ್ನು ವ್ಯಕ್ತಪಡಿಸಬೇಕಾಗುತ್ತದೆ. ಆಗಲೇ ಆತ್ಮ, ಪರಮಾತ್ಮರು ಶುಭ್ರತೆಯನ್ನು ಹೊಂದಿರುತ್ತಾರೆ, ಸಮಾನವಾಗುತ್ತಾರೆ ಎಂಬ ಅರಿವು ಮೂಡುತ್ತದೆ.

737. ಸುರನಾಥಾಯ ನಮಃ

ಸುರ - ಸುರೆಯನ್ನು ಅಂದರೆ ಅಮೃತವನ್ನು ಸೇವಿಸಿದವರು - ಸುರರು, ದೇವತೆಗಳು, ಅಮರರು.

ಸುರರ ಒಡೆಯ - ಸುರನಾಥನು, ಭಗವಂತನು ಸುರನಾಥನು, ದೇವತೆಗಳಿಗೆ ನಾಥ - ಕಾಪಾಡುವವನು.

738. ಸುಪ್ರಭಾಯ ನಮಃ

ಪ್ರಭೆ - ಎಂದರೆ ತೇಜಸ್ಸು, ಕಿರಣಗಳು.

ಸುಪ್ರಭೆ - ಒಳ್ಳೆಯ ತೇಜಸ್ಸು, ಉತ್ತಮವಾದ ಶ್ರೇಯಸ್ಸನ್ನು ಕೊಡುವ ತೇಜಸ್ಸುಳ್ಳವನು ಯಾರೋ ಅವನು - ಸುಪ್ರಭನು - ಪರಮಾತ್ಮನು. ಅಥವಾ ನೋಡಿದೊಡನೆ ಆಕರ್ಶಣೆ ಮಾಡುವವನು.

ಪರಮಾತ್ಮನು ಬಹಳ ಕರುಣಾಮಯಿ, ಅವನ ತೇಜಸ್ಸಿನ ಒಂದು ಕಿರಣದ ಅಂಶಮಾತ್ರ ಭಾಗವು ಜೀವಿಯ ಕಡೆ ಹರಿಹಾಯ್ದು ಹೋದರೂ ಸಹ ಸಾಕು - ಜೀವಿಯ ಉದ್ಧಾರವಾಗುತ್ತದೆ - ಸಂಸ್ಕಾರಗಳು ಸಾತ್ವಿಕವಾಗುತ್ತವೆ, ತತ್‌ಕ್ಷಣದಲ್ಲಿದ್ದ ಕರ್ಮಗಳು ನಾಶವಾಗುತ್ತವೆ. ಹೆಚ್ಚೇನಂದರೆ ಅವನ ಕೃಪಾ ಪ್ರಸಾದದ ಮಹಿಮೆ ಹೀಗೆ ಎಂದು ಹೇಳಲು ಸಾಧ್ಯವಿಲ್ಲ.

*"ತವ ಪಾದಾರ್ಪಿತಂ ಪುಷ್ಪಂ ಯದ್ವತ್ ಶಿರಸಿ ಧಾರಯನ್ ।*
*ಕೋಟಿ ಜನ್ಮ ಕೃತಂ ಪಾಪಂ ತತ್ತತ್‌ಕ್ಷಣೇ ವಿನಶ್ಯತಿ ॥"*

ಪಾದಾರ್ಪಿತವಾದ ಹೂವಿಗೇ ಈ ಶಕ್ತಿಯಿರುವಾಗ ಅವನ ಕೃಪಾಪ್ರಭೆಗೆಷ್ಟು ಮಹಿಮೆ - ಅವನಿಗೇ ಸ್ವತಃ ಎಷ್ಟು ಮಹಿಮೆ!! - ಅದರಿಂದಲೇ ಅವನನ್ನು ಸುಪ್ರಭಾಯ ನಮಃ ಎಂದು ನಮಸ್ಕರಿಸುವುದು.

ಪರಮಾತ್ಮನು ಸುಪ್ರಭನು, ಎಲ್ಲೆಲ್ಲಿಯು ಸುಪ್ರಭೆಯನ್ನು ಅಂದರೆ ತನ್ನ ಸುಖಮಯವಾದ, ಆನಂದದಾಯಕವಾದ ಪ್ರಭೆಯನ್ನು ಅಂದರೆ ಬೆಳಕನ್ನು ಹರಡುವವನು, ಸುಪ್ರಭೆಯನ್ನು ಹರಡಿ ಅಂಧಕಾರವನ್ನು ಮತ್ತು ತಮಸ್ಸನ್ನು ಹೋಗಲಾಡಿಸುವವನು - ಅದರಿಂದ ಅವನ ಹೆಸರು ಸುಪ್ರಭನು.

ಅಸತ್ತಿನಿಂದ ಸತ್‌ಗೆ ತರುವವನು, ತಮಸ್ಸಿನಿಂದ ಜ್ಯೋತಿಗೆ ತರುವವನು, ಮೃತ್ಯುವಿಂದ ಅಮೃತತ್ವಕ್ಕೆ ತರುವವನು - ಈ ಪರಮಾತ್ಮನೇ ಸುಪ್ರಭನು.

739. ಶುಭಾಯ ನಮಃ

ಶುಭ - ಎಂದರೆ ಒಳ್ಳೆಯದು, ಮಂಗಳದಾಯಕವಾದ್ದು.

ಪರಮಾತ್ಮನ ನಾಮಗಳು ಮಂಗಳದಾಯಕವಾದುವುಗಳು. ಪರಮಾತ್ಮನನ್ನು ಯಾವ ರೀತಿಯಿಂದಲಾದರೂ ಭಜಿಸಲಿ, ಶ್ರದ್ಧೆಯಿಂದಲಾಗಲೀ,

ಅಶ್ರದ್ಧೆಯಿಂದಲಾಗಲೀ ಹೇಗೆ ಸೇವಿಸಿದರೂ ಸರಿಯೇ, ಅವನು ಭಕ್ತನನ್ನು ಕಾಪಾಡುವುದು ಖಚಿತ. ಅವನ ಧ್ಯೇಯವೇ ಮಂಗಳವನ್ನು, ಶುಭವನ್ನು ಕೊಡುವುದು, ಇದನ್ನು ಬಿಟ್ಟು ಅವನು ಬೇರೇನನ್ನೂ ಕೊಡುವುದಿಲ್ಲ. ಸೃಷ್ಟಿಯಲ್ಲಿ ಇವನಿಗಿಂತ ಹಿತಚಿಂತಕರು ಬೇರೆ ಇಲ್ಲ. ಅದೂ ಅಲ್ಲದೇ ಸೃಷ್ಟಿಯ ಸಮಸ್ತ ಜೀವಿಗಳಿಗೂ ಸಚರಾಚರ ವಸ್ತುಗಳಿಗೂ ಸಮಾನವಾಗಿ ತನ್ನ ಕರುಣಾರಸವನ್ನು ದಯಾಸಮುದ್ರದ ಬಿಂದುಗಳನ್ನೂ ಹಂಚುತ್ತಾನೆ. ಸಮಸ್ತ ಜೀವಿಗಳೂ ಏಕ ಧ್ಯೇಯವಾಗಿ ಇವನ ದಯೆಗೆ ಕಾಯುತ್ತಾರೆ.

ಇವನ ನಾಮವೇ ಶುಭಪ್ರದ. ಇವನ ಪೂಜೆ, ಜಪ, ತಪ, ನಾಮಸ್ಮರಣೆ - ಏಕೈಕವೂ ಶುಭದಾಯಕ, ಹಾಗೇ ಇವೆಲ್ಲವೂ ಒಟ್ಟಿಗೇ ಸೇರಿದರೆ ಅದರಿಂದ ಬರುವ ಶುಭಫಲವೂ ಅಪರಿಮಿತ - ಅಗಣಿತ - ಊಹಿಸಲಸಾಧ್ಯ. ಸಕಲ ಶುಭಗಳನ್ನು ಇವನೊಬ್ಬನಲ್ಲಿಯೇ ಕಾಣುತ್ತೇವೆ - ಪ್ರಸನ್ನಮೂರ್ತಿ - ಎಷ್ಟೇ ದಯೆ, ಕೃಪೆ, ಪ್ರಭೆಯನ್ನು ಹಂಚಿದರೂ ಇನ್ನೂ ಇದ್ದೇ ಇರುತ್ತದೆ - ಅವನು ಕಲ್ಪವೃಕ್ಷ - ಕಾಮಧೇನು - ಭಕ್ತರ ಕಾಮಧೇನು - ಏನೆಂದೇ ಕರೆಯಬಹುದು, ಮಿತಿಯಿಲ್ಲ - ಪರಿಮಿತಿಯಿಲ್ಲ - ಕರೆಗಳು, ಹೊಗಳಿಕೆಗಳು - ಅಪರಿಮಿತ - ಅಗಣಿತ.

ಶುಭ - ಮಂಗಳಕಾರಕ, ಸದ್ಗುಣವುಳ್ಳವನು.

ಪರಮಾತ್ಮನು ಸದಾ ಶುಭವನ್ನೇ ನೀಡುವವನು, ಮಾಡುವವನು, ಒಳ್ಳೆಯದನ್ನೇ ನಡೆಸುವವನು, ಸದಾ ಶುಭ - ಕಲ್ಯಾಣಮಯನು.

ಆತ್ಮನೂ ಹಾಗೇ ಶುಭನು, ಆದರೆ ಮಾಯೆಯಿಂದ ಮುಚ್ಚಲ್ಪಟ್ಟಿರುತ್ತಾನೆ. ಮಾಯಾಪಾಶವು ಮರೆಯಾದಾಗ ಆತ್ಮನು ನಿತ್ಯಶುದ್ಧನೂ, ಶುಭನೂ ಆಗಿಯೇ ಇದ್ದಾನೆ ಎಂಬ ಸ್ವಭಾವವು ಅರಿವಾಗುತ್ತದೆ.

**740.** **ಸುದರ್ಶನಾಯ ನಮಃ**

ಪರಮಾತ್ಮನ ದರ್ಶನವು ಸದಾ ಸಂತೋಷವನ್ನು ಕೊಡುತ್ತದೆ. ತನ್ನ ದರ್ಶನಮಾತ್ರದಿಂದಲೇ ಭಗವಂತನು ಭಕ್ತರ ಮನವನ್ನು ಸೂರೆಮಾಡುತ್ತಾನೆ. ಎಲ್ಲೆಲ್ಲಿಂದ ಕರೆಯಲೀ, ಎಲ್ಲಿ ಕರೆಯಲೀ, ಹೇಗೆ ಕರೆಯಲೀ ಯಾವಾ ಕಾಲದಲ್ಲಿಯೇ ಕರೆಯಲೀ, ಅವನು ಕ್ಷಣಮಾತ್ರದಲ್ಲಿ ತನ್ನ ದರ್ಶನವನ್ನು ಅವರ ಮನದಲ್ಲಿ ಆವಿರ್ಭವಿಸುತ್ತಾನೆ. ಇದು ಅವನ ವೈಶಿಷ್ಟ್ಯ. ಅವನ ದರ್ಶನವೇ ಪಾವನವಾದ್ದು - ಅದೇ ಆತ್ಮದರ್ಶನ - ಸಂಸಾರ ಬಂಧನದಿಂದ ಬಿಡುಗಡೆ ಮಾಡುವ ಸಾಧನ - ಸುದರ್ಶನಾಯ ನಮಃ.

ಅಥವಾ

ಸುದರ್ಶನ ಚಕ್ರವು ಭಗವಂತನ ಕೈಯಲ್ಲಿ ಶೋಭಿಸುತ್ತದೆ. ಈ ಚಕ್ರದಲ್ಲಿಯೇ ಪ್ರತಿಷ್ಠಿತನಾಗಿ ಚಕ್ರಿ ಎಂದು ಕರೆಯಲ್ಪಡುತ್ತಾನೆ.

741. ಸೂಕ್ಷ್ಮಾಯ ನಮಃ

ಸೂಕ್ಷ್ಮ - ಎಂದರೆ ಬಹಳ ಚಿಕ್ಕದು, ಅಣುವಿನ ಪ್ರಮಾಣದ್ದು, ಬಹಳ ತೀಕ್ಷ್ಣ ಸ್ವಭಾವದ್ದು, ಕೋಮಲವಾದುದು, ನಯವಾದುದು.

ಪರಮಾತ್ಮನು ಸೂಕ್ಷ್ಮನಾಗಲೀ, ಸ್ಥೂಲವಾಗಲಿ, ಅವನ ಸ್ವಭಾವಗಳು ಎಲ್ಲದರಲ್ಲಿಯೂ ಒಂದೇ. ರೂಪ, ಗುಣ, ಕಾಲ ದೇಶ - ಇವುಗಳನ್ನು ಅವನು ಮೀರಿದವನು. ಅವನ ಸ್ವ - ತನ್ನದೇ ಆದ, ಋಷಿ ಮುನಿಗಳು ಕಂಡ, ತಿಳಿದ ಭಾವಗಳಂತೆ, ಅವನು ಸೂಕ್ಷ್ಮನೂ ಹೌದು, ಸ್ಥೂಲನೂ ಹೌದು, ಅಣುವೂ ಹೌದು, ಮಹತ್ತಮನೂ ಹೌದು, ಅಣೋರಣೀಯಾನ್, ಮಹತೋ ಮಹೀಯಾನ್ ಸಹ ಹೌದು - ಅದರಿಂದ ಈ ನಾಮದಂತೆ ಸೂಕ್ಷ್ಮಾಯ ನಮಃನೂ ಹೌದು.

ಅಥವಾ

ಆತ್ಮನೂ ಸಹ ಸೂಕ್ಷ್ಮನು ಇವನು ಸಕಲ ದೇಹಗಳಲ್ಲಿದ್ದರೂ ಆತ್ಮನ, ರೂಪ, ಭಾವ, ಗಾತ್ರ ಎಲ್ಲವೂ, ಎಲ್ಲದರಲ್ಲಿಯೂ ಒಂದೇ. ಪರಮಾತ್ಮನ ಅಂಶವೇ ಆದ್ದರಿಂದ ಆತ್ಮನು ಸೂಕ್ಷ್ಮನೂ ಹೌದು.

742. ನಿರುಕ್ತಾಯ ನಮಃ

ನಿರುಕ್ತಿ - ಆರು ವೇದಾಂಗಗಳಲ್ಲಿ ಒಂದು, ವ್ಯುತ್ಪತ್ತಿ, ನಿರ್ಣಯಿಸಲ್ಪಡುವುದು.

ಪರಮಾತ್ಮನು ಹೀಗೆಯೇ ಎಂದು ನಿರ್ಣಯಿಸಲ್ಪಟ್ಟಿರುವನು. ಎಂದರೆ ನಿರಾಕಾರನು, ಸಾಕಾರನೂ ಹೌದೆಂದು ನಿರ್ಣಯಿಸಲ್ಪಟ್ಟಿರುವನು. ಹಾಗೆ ಅಲ್ಲವೆಂದೂ ಸಹ ನಿರ್ಣಯಿಸಲ್ಪಟ್ಟಿರುವನು. ನೇತಿ, ನೇತಿ ಎಂದು ಎಲ್ಲವನ್ನೂ ವರ್ಜಿಸಿ ಯಾವುದು ಉಳಿಯುವುದೋ ಅದೇ ಎಂದು ನಿರ್ಣಯಿಸಲ್ಪಟ್ಟಿರುವವನು - ಅದರಿಂದ ಅವನು ನಿರುಕ್ತನು.

ಅಥವಾ ವೇದಗಳೇ ಪರಮಾತ್ಮನಾಗಿರುವುದರಿಂದ ವೇದಾಂಗಗಳೂ ಸಹ ಅವನೇ - ನಿರುಕ್ತಿ,

ಅಥವಾ ವ್ಯುತ್ಪತ್ತಿ - ಎಂದರೆ ಅವನಿಂದಲೇ ಆದ ಚತುರ್ದಶ ಲೋಕಗಳು, ಅವುಗಳ ಅಧಿ ದೇವತೆಗಳು, ಎಲ್ಲವೂ ವ್ಯುತ್ಪತ್ತಿಗಳು. ಇವು ಭಗವಂತನನ್ನೇ ನಿರ್ದೇಶಿಸುತ್ತವೆ.

*ಸುಪ್ರಭಾಯ ಚ ಭಾವಾಯ ಭವಾಯ ವಿಭವಾಯ ಚ ।*
*ಸುಶಾಖಾಯ ವಿಶಾಖಾಯ ಸುಮುಖಾಯ ಸುಖಾಯ ಚ ॥125॥*
*(743-750)*

**743. ಸುಪ್ರಭಾಯ ನಮಃ**

ಪರಮಾತ್ಮನು ತನ್ನ ತೇಜಸ್ಸಿನ ಕಿರಣಗಳನ್ನು ಭಕ್ತರ ಮೇಲೆ ಕಳಿಸುತ್ತಾನೆ, ಬೀರುತ್ತಾನೆ. ಇದು ಕರುಣೆಯದು, ಕೃಪೆಯದು, ತನ್ನ ಅಪಾರ ಕರುಣೆ, ದಯೆಯಿಂದ ಪರಮಾತ್ಮನು ಭಕ್ತರ ಮೇಲೆ, ಮತ್ತಿತ್ತರ ಮೇಲೆ ಬೀರುತ್ತಾನೆ. ಸನ್ನವೇಶದ ಒತ್ತಡದ ಮೇಲೆ ಅದಕ್ಕನುಗುಣವಾಗಿ ಇವು ಸುಪ್ರಭೆಯಾಗುತ್ತವೆ. ನಾವು ಈ ಸುಪ್ರಭೆಯು ಬಂದದನ್ನು ಚೆನ್ನಾಗಿ ತಿಳಿಯಬಲ್ಲೆವು, ಮಾಯೆಯಿಂದ ಬಿಡುಗಡೆ ಹೊಂದಿದ ನಂತರ ಅವನಲ್ಲಿ ನಾವು ಅವಿರತ, ನಿರಂತರ ಮಗ್ನವಾಗಿರುತ್ತೇವೆ.

ನಾವು ಅವನನ್ನು ಗಟ್ಟಿಮಾಡಿಕೊಂಡಷ್ಟೂ ಅವನು ತಾನಾಗಿಯೇ ಹತ್ತಿರವಾಗುತ್ತಾನೆ. ಅವನನ್ನು ಸುಪ್ರಭಾಯ ನಮಃ ಎಂದು ಕೊಂಡಾಡುತ್ತೇವೆ.

ಪರಮಾತ್ಮನ ತೇಜಸ್ವೀರೂಪನಾದ ಆತ್ಮನು ಇಂದ್ರಿಯಗಳಲ್ಲಿ ಕುಳಿತು ಜಗತ್ತಿನೊಡನೆ ಸಂಪರ್ಕ ಇಟ್ಟಿರುತ್ತಾನೆ. ಯಾವಾಗ ಈ ಇಂದ್ರಿಯಗಳು ಒಳಮುಖವಾಗುವುವೋ ಆಗ ಭಗವದ್ದರ್ಶನವಾಗುತ್ತದೆ.

ಆತ್ಮದ ವಿಚಾರದಲ್ಲಿ ಹೇಳಬೇಕಾದರೆ ನಿರಂತರ ಜಪ, ತಪ, ಪೂಜೆ, ಧ್ಯಾನಗಳಿಂದ ಸಂಸ್ಕಾರಗಳ ಜೊತೆಗೆ ಹೊಸ ಸಾತ್ವಿಕ ಸಂಸ್ಕಾರಗಳು ಅಂಟಿಕೊಳ್ಳುತ್ತವೆ. ಮನಸ್ಸು ನಿರ್ಮಲವಾಗುತ್ತದೆ. ಬುದ್ಧಿಯು ವಿಕಾಸವಾಗುತ್ತದೆ. ನಿರಂತರ ಪರಮಾತ್ಮನ ದರ್ಶನಕ್ಕಾಗಿ ಮಾತ್ರವೇ ಅಲ್ಲ, ಅವನಲ್ಲಿ ಸೇರುವುದಕ್ಕಾಗಿ ಮನಸ್ಸು ತವಕಿಸುತ್ತಿರುತ್ತದೆ. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಪದವಿಯನ್ನು ಪಡೆದು ಕೃತಕೃತ್ಯವಾಗಲು ತವಕಿಸುತ್ತಿರುತ್ತದೆ. ಹೀಗೆ ಆದಾಗ ಸಕಲ ಜಗತ್ತಿನ ಯಾವ ಶಕ್ತಿಯೂ ಆತ್ಮನನ್ನು ಪರಮಾತ್ಮನಿಂದ ಬೇರ್ಪಡಿಸಲು ಸಾಧ್ಯವಾಗುವುದಿಲ್ಲ. ಪ್ರಕೃತಿ, ಪುರುಷ ಮತ್ತು ಮಾಯೆಗಳು ಸಫಲವಾಗುವುದಿಲ್ಲ. ಇಂತಹ ಆತ್ಮಗಳು ಇತರ ಆತ್ಮಗಳ ಬಿಡುಗಡೆಗಾಗಿ ತವಕಿಸುತ್ತವೆ ಮತ್ತು ಅವುಗಳಿಗೆ ದಾರಿದೀಪವಾಗುತ್ತವೆ. ಅದರಿಂದ ಲೋಕೋದ್ಧಾರವಾಗುತ್ತದೆ, ಇಂತಹ ಪರಿಶುದ್ಧತೆ ಹೊಂದಿದ ಅಂದರೆ ಸಂಸಾರ ಬಂಧನದಿಂದ ಬಿಡುಗಡೆ ಹೊಂದಿ ಜಗತ್ತಿನಲ್ಲಿದ್ದರೂ ಅವರು ಇತರರ ಮುಕ್ತಿಗಾಗಿಯೇ ಪ್ರಯತ್ನ ಪಡುತ್ತಿರುತ್ತಾರೆ. ''ದುರ್ಜನರು ಸಜ್ಜನರು ಆಗಲಿ, ಸಜ್ಜನರು ಶಾಂತರಾಗಲಿ, ಶಾಂತರು ಮುಕ್ತರಾಗಲಿ, ಮುಕ್ತರಾದವರು ಇತರರನ್ನು ಸಂಸಾರ ಬಂಧನದಿಂದ ಬಿಡಿಸಲಿ'' ಎಂಬುದೇ ಇವರ ಉದಾತ್ತ ಧ್ಯೇಯ. ಭಗವಂತನಿಂದ ಬಂದ ಸುಪ್ರಭೆಯನ್ನು ಇತರರಿಗೆ ಸದಾ ಹಂಚುವುದರಲ್ಲಿಯೇ ನಿರತರಾಗಿರುತ್ತಾರೆ. ಎಂದರೆ ಇವರೂ ಭಗವಂತನಂತೆ ಸುಪ್ರಭರೇ!

744. ಭಾವಾಯ ನಮಃ

ಭಾವ - ಎಂದರೆ ಅಸ್ತಿತ್ವ, ಮನೋವೃತ್ತಿ; ರಸ.

ಪ್ರತಿ ಜೀವಿಯಲ್ಲಿರುವ ಮನಸ್ಸಿನ ಭಾವವೇ ಪರಮಾತ್ಮನ ಪ್ರತಿಬಿಂಬವಾಗಿರುತ್ತದೆ. ಯಾವಾಗ ಪ್ರಕೃತಿ, ಪುರುಷ, ಮಾಯೆಗಳಿಂದ ವಿವೇಚನಾಯುಕ್ತನಾಗಿ, ವಿವೇಕ ಬುದ್ಧಿಯಿಂದ, ಮನಸ್ಸು ಚಂಚಲತೆಯಿಂದ ಬಿಡುಗಡೆ ಹೊಂದುವುದೋ ಆಗ ಮನಸ್ಸು ಸಮಭಾವವನ್ನು ಹೊಂದುತ್ತದೆ. ಮನಸ್ಸಿನ ಈ ಭಾವವೇ ಪರಮಾತ್ಮನ ದಿವ್ಯಸ್ಥಿತಿ.

ಪರಮಾತ್ಮನು ತನ್ನ ಭಕ್ತರಿಗೆ ತನ್ನ ಸಂಕಲ್ಪಮಾತ್ರದಿಂದ ಸ್ಥಿತಪ್ರಜ್ಞತೆಯನ್ನು ಅನುಗ್ರಹಿಸುತ್ತಾನೆ - ಪರಮಾತ್ಮನನ್ನು ಈ ಭಾವದ ಕಾರಣ - ಭಾವಾಯ ನಮಃ ಎಂದು ವಂದಿಸುತ್ತೇವೆ.

ಭಾವ ಎಂದರೆ ರಸ, ಪ್ರೇಮ, ಇಚ್ಛೆ, ಅಭಿಪ್ರಾಯ, ಇತ್ಯಾದಿ. ಭಗವತ್ ಪ್ರೇಮರಸವೇ ಬಹಳ ಅಮೃತಮಯವಾದುದು.

745. ಭವಾಯ ನಮಃ

ಭವ - ಎಂದರೆ ಈಶ್ವರ, ಶಿವ.

ಭವ - ಜಗತ್ತು, ಸಂಸಾರ.

ಭವ - ಎಂದರೆ ಉತ್ಪನ್ನವಾಗುವುದು, ಜನ್ಮವನ್ನು ಪಡೆಯುವುದು, ಉತ್ಪತ್ತಿ, ಉಗಮಸ್ಥಾನ.

ಪರಮಾತ್ಮನು ಶಿವನು, ಸಕಲ ಜೀವಿಗಳಿಗೂ ಉತ್ಪತ್ತಿಸ್ಥಾನ, ಬಹಳ ಪವಿತ್ರ ಸ್ಥಾನ.

ಸಕಲ ಬ್ರಹ್ಮಾಂಡಗಳನ್ನು ಸೃಷ್ಟಿಸಿ, ಅದರಲ್ಲಿಯೇ ಒಳಹೊಕ್ಕರೂ ಹೊರಗೆ ಇರುವುದರಿಂದಲೂ, ಈ ಜಗತ್ತೇ ಅವನ ಸಂಕಲ್ಪ ಸೃಷ್ಟಿಯಾದುದರಿಂದಲೂ, ಎಲ್ಲೆಲ್ಲಿಯೂ ಅವನದೇ ಅಂಶವಾದ ಆತ್ಮಗಳಿಂದಲೂ ತುಂಬಿರುವುದರಿಂದ ಅವನು - ಭವನು - ಭವಾಯ ನಮಃ ಎಂದು ನಮಸ್ಕರಿಸಲ್ಪಡುತ್ತಾನೆ.

746. ವಿಭವಾಯ ನಮಃ

ವಿಭವ - ಎಂದರೆ ಸಂಪತ್ತು, ಸಾಮರ್ಥ್ಯ, ಒಂದು ಸಂವತ್ಸರದ ಹೆಸರು.

ಸಂಪತ್ತು ಎಂದರೆ ಶ್ರೀ, ಶ್ರೀಯು ಪರಮಾತ್ಮನ ಒಂದು ರೂಪ.

ಸಂವತ್ಸರವು ಕಾಲದ ಒಂದು ಗಣನೆ, ಕಾಲನೇ ಪರಮಾತ್ಮ ಆದರಿಂದ ಪರಮಾತ್ಮನನ್ನು ವಿಭವಾಯ ನಮಃ ಎಂದು ನಮಸ್ಕರಿಸುತ್ತೇವೆ.

747. ಸುಶಾಖಾಯ ನಮಃ

ಶಾಖಾ ಎಂದರೆ ವೇದದ ಒಂದು ಅಂಗ, - ಶಾಖಾಗಳು.

ಅಶ್ವತ್ಥವೃಕ್ಷದ ಶಾಖೆಗಳು ಪರಮಾತ್ಮನ ಒಂದು ರೂಪ, ಭವ ಸಾಗರ / ಸಂಸಾರದ ಒಂದು ರೂಪ.

ವೇದಗಳು ಪರಮಾತ್ಮನನ್ನೇ ಪ್ರತಿಪಾದಿಸುತ್ತವೆ, ಅವು ಅಷ್ಟೇ ಅಲ್ಲ - ಆ ವೇದಗಳು ಪರಮಾತ್ಮನೇ.

ಗೀತೆಯಲ್ಲಿ ಪರಮಾತ್ಮನು ಸಂಸಾರವನ್ನು ಅಶ್ವತ್ಥವೃಕ್ಷಕ್ಕೆ ಹೋಲಿಸಿದ್ದಾನೆ. ಸಂಸಾರದ ಬೇರು ಮೇಲೆ ಇದೆ, ಪರಮಾತ್ಮನಲ್ಲಿ ಪ್ರತಿಷ್ಠಿತವಾಗಿದೆ. ಉತ್ತಮವಾದ ಶಾಖೆಗಳನ್ನು ಉಳ್ಳವನು - ಪರಮಾತ್ಮನೇ!

ಅಥವಾ

ಆತ್ಮಗಳೆಲ್ಲ ಅವನಿಂದ ಬಂದಿರುವುದರಿಂದ ಆತ್ಮಗಳು ಸೃಷ್ಟಿಯಲ್ಲೆಲ್ಲ ಉತ್ತಮವಾದ ಶಾಖೆಗಳು, ಸುಶಾಖೆಗಳು - ಅವನೇ ಆದ್ದರಿಂದ ಸುಶಾಖಾಯ ನಮಃ ಎನ್ನುತ್ತೇವೆ.

748. ವಿಶಾಖಾಯ ನಮಃ

ವಿಶಾಖಾ - ಎಂದರೆ 27 ನಕ್ಷತ್ರಗಳಲ್ಲಿ ಒಂದು, ನಕ್ಷತ್ರಗಳು ಪರಮಾತ್ಮನ ರೂಪಗಳೇ ''ನಕ್ಷತ್ರಾಣಾಮಹಂ ಶಶಿ'' ಎಂದಿದ್ದಾನೆ ಶ್ರೀಕೃಷ್ಣನು ಗೀತೆಯಲ್ಲಿ. (ವಿಭೂತಿಯೋಗ ಅಧ್ಯಾಯ 10, ಶ್ಲೋಕ 21)

ಚಂದ್ರನು ಪರಮಾತ್ಮನ ಕಣ್ಣು, ಸೂರ್ಯ ಚಂದ್ರರೇ ಭಗವಂತನ ಚಕ್ಷುಗಳು. ಚಂದ್ರನ ಪತ್ನಿಯರು 27 ನಕ್ಷತ್ರಗಳು. ಈ ಭಾವಸಂಯೋಜನೆಯಿಂದ ವಿಶಾಖವು ಪರಮತ್ಮನೆಂದೇ ಆಯಿತು,

ಅಥವಾ

ವಿಚಿತ್ರವಾದ ಶಾಖೆಗಳನ್ನು ಉಳ್ಳವನು ಯಾರೋ ಅವನು - ವಿಶಾಖನು.

749. ಸುಮುಖಾಯ ನಮಃ

ಸುಮುಖ - ಎಂದರೆ ಗಣಪತಿ, ಗಣಪತಿಯ ಒಂದು ನಾಮ.

ಸುಮುಖ - ಸುಂದರವಾದ ಮುಖವುಳ್ಳವನು - ನಯನ ಮನೋಹರ ರೂಪವುಳ್ಳವನು, ಮನಸ್ಸನ್ನು ತನ್ನೆಡೆಗೆ ಎಳೆದುಕೊಳ್ಳುವ ಮುಖವುಳ್ಳವನು.

ಆತ್ಮನು ಪರಮಾತ್ಮನ ಭಾವವನ್ನೇ ಹೊಂದಿರುವುದರಿಂದ ಆತ್ಮನೂ ಸಹ ಸುಮುಖನೇ!

ಸುಮುಖ - ಪರಮಾತ್ಮನ ಯಾವ ರೂಪವೇ ಆಗಲೀ ಅದು ಸುಮುಖವೇ ಆಗಿರುತ್ತದೆ. ಹಾಗೆಯೇ ಆತ್ಮನು ಯಾವ ಶರೀರವನ್ನೇ ಧರಿಸಿದ್ದರೂ ಒಬ್ಬೊಬ್ಬರಲ್ಲಿ ಒಂದೊಂದು ವಿಶೇಷವಿರುತ್ತದೆ. ಅದರಿಂದ ಸುಮುಖವೇ ಆಗಿರುತ್ತದೆ.

ಅಥವಾ

ಪರಮಾತ್ಮನೇ ಸುಂದರನು ಅವನು ಕಾಮಿಸುವ ಎಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಸುಂದರವೇ ಆಗಿರುತ್ತದೆ. ಅವನು ಕಾಮಿಸಿ ತನ್ನ ಇಚ್ಛೆ, ಸಂಕಲ್ಪದಿಂದ ಸೃಷ್ಟಿಸಿದ ಜಗತ್ತು ಮತ್ತು ಅದರೊಳಗಿನ ಎಲ್ಲವೂ ಸುಂದರವೇ. ಸುಮುಖವೇ. ಜಗತ್ತಿಗೇ ಸುಮುಖಾಯ ನಮಃ ಎನ್ನಬಹುದು.

**750.** ಸುಖಾಯ ನಮಃ

ಸುಖ - ಎಂದರೆ ಸಮಾಧಾನ ಸ್ಥಿತಿ, ಆನಂದದ ಸ್ಥಿತಿ.

ಪರಮಾತ್ಮನು ಸದಾ ಆನಂದನೇ, ಅವನನ್ನು ಸಚ್ಚಿದಾನಂದ ಘನ ಎನ್ನುತ್ತೇವೆ.

ಪ್ರತಿಯೊಂದು ಜೀವಿಯೂ ಈ ಸಚ್ಚಿದಾನಂದವನ್ನು ಅನುಭವಿಸಬಹುದು, ಅನುಭವಿಸುತ್ತಿದೆ ಹೇಗೆಂದರೆ ಪ್ರತಿ ಆತ್ಮದೊಡನೆಯೂ ಬುದ್ಧಿ, ಮನಸ್ಸು, ಅಹಂಕಾರ, ಚಿತ್ತವಿದ್ದೇ ಇದೆ. ಮನಸ್ಸು ಸಾತ್ವಿಕ ಭಾವವನ್ನು ಹೊಂದಿ ಪರಮಾತ್ಮನ ಚಿಂತನೆಯನ್ನೇ ನಿರಂತರ ಮಾಡಿದಾಗ ಅಸಾತ್ವಿಕ ಭಾವನೆಗಳು ಬರುವುದಿಲ್ಲ, ಆಗ ಸ್ಥಿತಪ್ರಜ್ಞೆ ಉಂಟಾಗುತ್ತದೆ ಇದೇ ಸುಖ, ಸಚ್ಚಿದಾನಂದ ಭಾವನೆ. ಇದು ಸದಾ ನಮ್ಮಲ್ಲಿ ಇದ್ದೇ ಇದೆ. ಇದು ಪರಮಾತ್ಮನು ಅನುಗ್ರಹಿಸಿದ ಸಂಪತ್ತು. ಅಪಾರ ಕರುಣೆಯಿಂದ ಸಕಲ ಆತ್ಮಗಳಿಗೂ ಅನುಗ್ರಹಿಸಿದ್ದಾನೆ. ಆದರೆ ಮಾಯೆಯಿಂದ ಕಟ್ಟಿಲ್ಪಟ್ಟಿರುವುದರಿಂದ ಈ ಸಂಪತ್ತು ಮುಚ್ಚಿ ಹೋಗಿರುತ್ತದೆ. ಬಿಡಿಸಿಕೊಂಡು ಹೊರಬಂದರೆ ಜೀವನ್ಮುಕ್ತಸ್ಥಿತಿ ದೊರಕುತ್ತದೆ. ಅದೇ ಶಾಶ್ವತ ಸುಖ. ಇದನ್ನು ಪರಮಾತ್ಮನ ಕೃಪೆ ಮತ್ತು ನಮ್ಮ ಸಂಸ್ಕಾರದ ರೂಪದಲ್ಲಿ ವರ್ಧಿಸಬಹುದು ಮತ್ತು ಶಾಶ್ವತವಾಗಿ ಇರಿಸಿಕೊಳ್ಳಬಹುದು, ಬಹಳ ಸಾಧನೆ ಬೇಕು.

*ಸುನಖಾಯ ಸುದಂಷ್ಟ್ರಾಯ ಸುರಥಾಯ ರಥಾಯ ಚ |*
*ಸಾಂಖ್ಯಾಯ ಸುರಮುಖ್ಯಾಯ ಪ್ರಖ್ಯಾತಾಯ ಪ್ರಭಾಯ ಚ || 126 ||*
*(751-758)*

**751.** ಸುನಖಾಯ ನಮಃ

ನಖ - ಉಗರು, ಸುನಖ - ಉತ್ತಮವಾದ, ಒಳ್ಳೆಯ ಉಗುರುಗಳು.

ಪರಮಾತ್ಮನು ಬ್ರಹ್ಮನ ವರದಂತೆ ನರಸಿಂಹ ಸ್ವಾಮಿಯ ಅವತಾರವನ್ನು ಎತ್ತಿದ್ದನು, ಅದೇ ವರದಂತೆ ಯಾವ ಆಯುಧವನ್ನು ಸಹ ಉಪಯೋಗಿಸುವಂತಿರಲಿಲ್ಲ. ಅದರಿಂದ ಅವನು ಹಿರಣ್ಯಕಶಿಪುವನ್ನು ಕೊಲ್ಲಲು ತನ್ನ ಕೈಯಿನ ಉಗುರುಗಳನ್ನು ಉಪಯೋಗಿಸಿದನು. ಹಿರಣ್ಯಕಶಿಪುವಿನ

ಹೊಟ್ಟೆಯನ್ನು ಉಗುರುಗಳಿಂದ ಬಗೆದು, ಕರುಳನ್ನು ತೆಗೆದು ಹಾರವಾಗಿ ಹಾಕಿಕೊಂಡನು. ಈ ಕಾರಣದಿಂದ ನರಸಿಂಹಸ್ವಾಮಿಯ ಕೈಗಳ ಉಗುರುಗಳು ಸುನಖಗಳು. ಆದರಿಂದ ಅವನಿಗೆ ಸುನಖಾಯ ನಮಃ ಎಂದು ನಮಸ್ಕರಿಸುತ್ತೇವೆ.

752. ಸುದಂಷ್ಟ್ರಾಯ ನಮಃ

ನರಸಿಂಹನ ಸಿಂಹದ ಶಿರದಲ್ಲಿರುವ ಕೋರೆದಾಡೆಗಳು ಸುದಂಷ್ಟ್ರಗಳು. ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗೆದು ರಕ್ತವನ್ನು ಕುಡಿದನು. ಸಿಂಹದ ಸ್ವಭಾವದಂತೆ ರಾಕ್ಷಸನ ರಕ್ತ ಮಾಂಸಗಳನ್ನು ಸೇವಿಸಿದನು. ಆ ಸಿಂಹದ ಮುಖದಲ್ಲಿದ್ದ ಕೋರೆದಾಡೆಗಳು ಸುದಂಷ್ಟ್ರಗಳೆಂದು ತಿಳಿದು ಅವನನ್ನು ಸುದಂಷ್ಟ್ರಾಯ ನಮಃ ಎಂದು ನಮಸ್ಕರಿಸುತ್ತೇವೆ.

753. ಸುರಥಾಯ ನಮಃ

ಪರಮಾತ್ಮನು ಒಳ್ಳೆಯ ರಥವುಳ್ಳವನು, ಅದರಿಂದ ಅವನು ಸುರಥನು. ಪಾರ್ಥನಿಗೆ ಶ್ರೀ ಕೃಷ್ಣನು ಸಾರಥಿಯಾಗಿ ರಥವನ್ನು ಓಡಿಸಿದನು. ಪಾರ್ಥಸಾರಥಿಯ ರಥವಾದ್ದರಿಂದ ರಥವು ಉತ್ತಮವಾದ ಶ್ರೇಷ್ಠ ರಥವಾಯಿತು. ಅವನಿಗೆ ಸುರಥನೆಂದು ಹೆಸರಾಯಿತು. ಎಲ್ಲಿಯವರೆಗೆ ಆತ್ಮನು ದೇಹದಲ್ಲಿ ವಾಸಿಸುವನೋ, ಅಲ್ಲಿಯವರೆಗೆ ದೇಹವು ಸುರಥ. ಇಲ್ಲದಿದ್ದರೆ ದೇಹವು ನಿಷ್ಪ್ರಯೋಜಕ. ಮತ್ತು ಇಟ್ಟುಕೊಳ್ಳಲು ಯೋಗ್ಯವಲ್ಲ.

ಸಜ್ಜನರ, ಸತ್ಪುರುಷರ, ಜೀವನ್ಮುಕ್ತರ, ಭಕ್ತರ ದೇಹಗಳು ಸುರಥಗಳು. ಇಂತಹ ಮಹಾನ್ ಆತ್ಮಗಳಿಂದ ಆ ದೇಹಗಳು ಸುರಥಗಳಾದವು. ಪವಿತ್ರವಾದವು. ಇಂತಹ ಪವಿತ್ರ ರಥದ ಸಹಾಯದಿಂದ ಪರಮಾತ್ಮನನ್ನು ಸೇವಿಸುವ ಆತ್ಮಗಳು ಸುರಥಾಯ ನಮಃ ಎಂದು ವಂದಿಸಲ್ಪಡುತ್ತವೆ.

754. ರಥಾಯ ನಮಃ

ಪರಮಾತ್ಮನು ದೇಹಗಳಲ್ಲಿ ಆತ್ಮನ ರೂಪವಾಗಿ ನಿಂತು, ಪಂಚಭೂತಗಳಿಂದ ಮಾಡಲ್ಪಟ್ಟ ದೇಹವನ್ನೇ ರಥವನ್ನಾಗಿ ಮಾಡಿ ನಡೆಸುತ್ತಾನೆ. ಅವನು ರಥವನ್ನು ನಡೆಸುವುದರಿಂದ ಅವನೇ ರಥಿ - ರಥ, - ಅದರಿಂದ ರಥಾಯ ನಮಃ ಎಂದು ನಮಸ್ಕಾರಗಳು.

ಅಥವಾ,

ಸಕಲ ಅಖಿಲಾಂಡ ಕೋಟಿ ಬ್ರಹ್ಮಾಂಡಗಳೇ ರಥಗಳು, ಈ ರಥದಲ್ಲಿ ಕುಳಿತು ತನ್ನ ಸಂಕಲ್ಪ ಮಾತ್ರದಿಂದ ನಡೆಸುವುದರಿಂದ ಅವನು ರಥದ ಸಾರಥಿ, ಜಗತ್ತು ಅವನ ರಥ, ರಥವೇ ಅವನಾಗಿರುವಾಗ ಅವನನ್ನು ರಥಾಯ ನಮಃ ಎಂದು ನಮಸ್ಕರಿಸುತ್ತೇವೆ.

755. ಸಾಂಖ್ಯಾಯ ನಮಃ

ಭಗವಂತನು ಸಾಂಖ್ಯನು.

ಸಾಂಖ್ಯ - ಹಿಂದೂ ತತ್ವಜ್ಞಾನದ ಆರು ದರ್ಶನಗಳಲ್ಲಿ ಒಂದು, ಸರ್ವಜಗತ್ತು ಪರಮಾಣುಗಳಿಂದ ಆಗಿರುವುದೆಂಬ ಸಿದ್ಧಾಂತವೇ ಸಾಂಖ್ಯ.

ಸಂಖ್ಯಾಮತದ ಅನುಯಾಯಿ - ಸಾಂಖ್ಯ.

756. ಸುರಮುಖ್ಯಾಯ ನಮಃ

ದೇವತೆಗಳಿಗೆ ಮುಖ್ಯನು - ನಾಯಕನು, ಶ್ರೀಮನ್ಮಹಾವಿಷ್ಣುವು ದೇವತೆಗಳಿಗೆ ಮಾರ್ಗದರ್ಶಕನು. ಅಥವಾ

ಇಂದ್ರಿಯ, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಸತ್ವರಜಸ್ತಮೋಗುಣಗಳಿಗೆ ಆತ್ಮನು ಮುಖ್ಯನು, ಮಾರ್ಗದರ್ಶಕನು ಅಥವಾ ಆತ್ಮನೇ ಮೂಲಕಾರಣನು.

ಸ್ಥೂಲ, ಸೂಕ್ಷ್ಮ, ದೇಹಗಳಿಗೆ ಆತ್ಮನೇ ಅಧ್ಯಕ್ಷನು - ಅದರಿಂದ ಸುರಮುಖ್ಯನು - ಸುರಮುಖ್ಯಾಯ ನಮಃ ಎಂದು ಆತ್ಮನಿಗೆ ನಮಸ್ಕಾರಗಳು.

757. ಪ್ರಖ್ಯಾತಾಯ ನಮಃ

ಪ್ರಖ್ಯಾತ - ಪ್ರಸಿದ್ಧಿ ಪಡೆದಿರುವವನು, ಪ್ರಸಿದ್ಧನು, ಒಳ್ಳೆಯ ಹೆಸರುವಾಸಿಯಾದವನು.

ಭಕ್ತರನ್ನು ಕಾಪಾಡುವುದರಲ್ಲಿ ಪ್ರಸಿದ್ಧಿ ಪಡೆದಿರುವವನು - ಪರಮಾತ್ಮನು.

ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ತನ್ನ ಸಂಕಲ್ಪಮಾತ್ರದಿಂದ ಸೃಷ್ಟಿಸಿ, ನಡೆಸಿ, ಉಪ ಸಂಹಾರ ಮಾಡುವವನೆಂದು ಪ್ರಸಿದ್ಧನಾಗಿದ್ದಾನೆ - ಪ್ರಖ್ಯಾತಾಯ ನಮಃ

ಸಕಲ ಜೀವಕೋಟಿಗೂ ಕಾರಣ ಸ್ವರೂಪನಾಗಿ ನಡೆಸುವವನೆಂದು ಪ್ರಖ್ಯಾತನಾಗಿದ್ದಾನೆ.

ಆತ್ಮನೇ ಸಕಲ ದೇಹಗಳಿಗೂ ಆಧಾರನೆಂದು ಪ್ರಸಿದ್ಧನಾಗಿದ್ದಾನೆ. ಆತ್ಮ, ಪರಮಾತ್ಮಗಳೇ ಸಕಲಕ್ಕೂ ಆಧಾರವೆಂದು ಪ್ರಖ್ಯಾತವಾಗಿದೆ. ಜಗತ್ತಿನ ಸ್ಥಿತಿಗತಿಗಳಿಗೆ ಪರಮಾತ್ಮನೇ ಕಾರಣನೆಂದು ಪ್ರಖ್ಯಾತವಾಗಿದ್ದಾನೆ.

758. ಪ್ರಭಾಯ ನಮಃ

ಪ್ರಭಾ - ಎಂದರೆ ಬೆಳಕು, ಕಿರಣಗಳು.

ಪರಮಾತ್ಮನ ಕಿರಣಗಳು ಶಾಂತವಾದವು, ಜ್ಞಾನವನ್ನು ಕೊಡುವವುಗಳು. ಸಕಲವನ್ನೂ ತನ್ನ ಸಂಕಲ್ಪಗಳಿಂದ ಮತ್ತು ಶಾಂತಿಯ ಮತ್ತು ಜ್ಞಾನದ ಕಿರಣಗಳಿಂದ ನಡೆಸುವುದರಿಂದ ಪರಮಾತ್ಮನಿಗೆ ಪ್ರಭಾಯ ನಮಃ ಎಂದು ಹೆಸರಾಗಿದೆ.

*ನಮಃ ಖಟ್ವಾಂಗಹಸ್ತಾಯ ಖೇಟಮುದ್ಗರಪಾಣಯೇ ।*
*ಗಜೇಂದ್ರಾಯ ಮೃಗೇಂದ್ರಾಯ ನಾಗೇಂದ್ರಾಯ ದೃಡಾಯ ಚ ॥127॥*
*(759-764)*

**759. ಖಟ್ವಾಂಗಹಸ್ತಾಯ ನಮಃ**

ಖಟ್ವಾಂಗವನ್ನು ಹಿಡಿದಿರುವವನು.

ಖಟ್ವಾಂಗ - ಎನ್ನುವುದು ಶಿವನು ಆಯುಧ, ಅದನ್ನು ಹಿಡಿದಿರುವವನು, ಶಿವ - ಪರಮಾತ್ಮ.

ಖಟ್ವಾಂಗನೆಂಬ ರಾಜನನ್ನು ಮುಹೂರ್ತಮಾತ್ರದಲ್ಲಿ ಭವಸಾಗರದಿಂದ ತನ್ನ ಹಸ್ತದಿಂದ ಎತ್ತಿದ್ದರಿಂದ ಪರಮಾತ್ಮನ ಹಸ್ತವು ಖಟ್ವಾಂಗ ಹಸ್ತವೆಂದಾಯಿತು.

**760. ಖೇಟ ಮುದ್ಗರಪಾಣಯೇ ನಮಃ**

ಖೇಟ ಮುದ್ಗರಪಾಣಿ - ಖೇಟ, ಮುದ್ಗರವೆಂಬ ಆಯುಧಗಳನ್ನು ಕೈಯಲ್ಲಿ ಹಿಡಿದಿರುವವನು - ಪರಮಾತ್ಮ ಶಿವನು.

ಖೇಟ - ಒಂದು ಆಯುಧ, ಮುದ್ಗರ - ಸುತ್ತಿಗೆ - ಶಿವನ ಆಯುಧಗಳು.

**761. ಗಜೇಂದ್ರಾಯ ನಮಃ**

ಗಜ - ಎಂದರೆ ಆನೆ, ಇಂದ್ರ - ಇಂದ್ರನು

ಗಜೇಂದ್ರ - ಆನೆಗಳ ರಾಜ - ಗಜೇಂದ್ರ, ಗಜೇಂದ್ರನು ತನ್ನ ಅಹಂಭಾವದಿಂದ ಪ್ರಯತ್ನಿಸುತ್ತಿದ್ದಾಗ ಮೊಸಳೆಯಿಂದ ಬಿಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಯಾವಾಗ ಸಂಪೂರ್ಣವಾಗಿ ಪರಮಾತ್ಮನಿಗೆ ಶರಣಾಗತನಾಗಿ ಕರೆದನೋ ಆಗ ವಿಷ್ಣುವು ಬಂದು ತನ್ನ ಚಕ್ರದಿಂದ ಮೊಸಳೆಯನ್ನು ಕೊಂದನು. ಮೊಸಳೆಯು ಮೋಕ್ಷವನ್ನು ಪಡೆಯಿತು. ಗಜೇಂದ್ರನನ್ನು ಪರಮಾತ್ಮನು ಪ್ರೀತಿಯಿಂದ ಮೈದಡವಿದನು. ಗಜೇಂದ್ರನು ಹರಿಯ ಸ್ಪರ್ಶದಿಂದ ಮೋಕ್ಷವನ್ನು ಪಡೆದನು. ಅಥವಾ,

ನಮ್ಮಲ್ಲಿರುವ ಇಂದ್ರಿಯಗಳೆಂಬ ಆನೆಗಳನ್ನು ಆತ್ಮನೆಂಬ ಇಂದ್ರನು ನಿಗ್ರಹಿಸಿ ಸಂಸಾರ ಸಾಗರವೆಂಬ ಮೊಸಳೆಗಳಿಂದ (ಅವುಗಳ ಹಿಡಿತದಿಂದ) ಬಿಡಿಸಿ ಮೋಕ್ಷವನ್ನು ಕೊಡುತ್ತಾನೆ. ಇಲ್ಲಿ ಇಂದ್ರನೇ ಪರಮಾತ್ಮ, ಗಜವೇ ಆತ್ಮ. ಇಂದ್ರಿಯಗಳು ಮೊಸಳೆ, ಸಂಸಾರ ಸಾಗರವೇ ಸಾಗರ, ಪರಮಾತ್ಮನೇ ಗಜೇಂದ್ರ - ಗಜೇಂದ್ರಾಯ ನಮಃ

**762. ಮೃಗೇಂದ್ರಾಯ ನಮಃ**

ಮೃಗ - ಕಾಡುಪ್ರಾಣಿಗಳು, ಇಂದ್ರ - ಇವುಗಳ ರಾಜ - ಸಿಂಹ.

ಸಿಂಹದ ಮುಖದವನು - ನರಸಿಂಹ - ಇವನಿಗೆ ನಮಸ್ಕಾರ.

ಅಥವಾ

ಮೃಗಗಳೇ ಇಂದ್ರಿಯಗಳು - ಸಂಸಾರವೇ ಕಾಡು; ಇಂದ್ರಿಯಗಳ ರಾಜ - ಆತ್ಮ, ಮೃಗೇಂದ್ರನೇ ಆತ್ಮ - ಆತ್ಮನಿಗೆ ನಮಸ್ಕಾರಗಳು.

763. ನಾಗೇಂದ್ರಾಯ ನಮಃ

ನಾಗ - ಸರ್ಪಗಳು, ಇಂದ್ರ - ಇವುಗಳ ರಾಜ - ಸರ್ಪರಾಜ - ಆದಿಶೇಷ.

ಆದಿಶೇಷನು ಪರಮಾತ್ಮನ ಪರ್ಯಂಕ, ಪರಮಾತ್ಮನನ್ನು ಸಾವಿರ ಹೆಡೆಗಳಿಂದ ಸ್ತುತಿಸುತ್ತಿದ್ದಾನೆ.

ಆದಿಶೇಷ, ವಾಸುಕಿ - ಪರಮಾತ್ಮನ ರೂಪಗಳು - ಅದರಿಂದ ನಾಗೇಂದ್ರ - ಎಂದರೆ ಪರಮಾತ್ಮ, ಸುಬ್ರಮಣ್ಯ.

ಅಥವಾ

ಆತ್ಮನ ಸುತ್ತಲೂ ಇರುವ ಇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಸತ್ವರಜಸ್ತಮೋಗುಣಗಳು, ಜಗತ್ತು, ಪ್ರಕೃತಿ, ಪುರುಷ, ಮಾಯೆ - ಎಲ್ಲವೂ ಸರ್ಪಗಳು, ಈ ಸರ್ಪಗಳ ರಾಜನು - ಆತ್ಮ - ಅದರಿಂದ ಆತ್ಮನಿಗೆ ನಮಸ್ಕಾರಗಳು - ಅವನೇ ನಾಗೇಂದ್ರ.

764. ಧೃಡಯ ನಮಃ

ಧೃಡ - ಎಂದರೆ ಗಟ್ಟಿಯಾದವನು, ಮಾಡಿದ ಸಂಕಲ್ಪವನ್ನು ನಡೆಸಿಯೇ ತೀರುವವನು.

ಧೃಡ - ಸ್ಥಿರವಾದವನು, ಬದಲಾಯಿಸದವನು, ನಿರಂತರ ಇರುವವನು.

ಜಗತ್ತಿನಲ್ಲೆಲ್ಲ ಧೃಡವಾದವನು - ಪರಮಾತ್ಮನೊಬ್ಬನೇ. ಅವನಿಗೆ ಸಮರು ಯಾರು ಇಲ್ಲ.

ಆತ್ಮವೂ ಇದೇ ರೀತಿ ಧೃಡ, ಆದರೆ ಪರಮಾತ್ಮನ ಅಧೀನ.

*ನಾಗಕೇಯೂರಹಾರಾಯ ನಾಗೇಂದ್ರಾಯಾಗಹಾರಿಣೇ ।*
*ನದೀರೂಪಾಯ ನಗ್ನಾಯ ನಾನಾರೂಪಧರಾಯ ಚ ॥128॥*
*(765-770)*

765. ನಾಗಕೇಯೂರಹಾರಾಯ ನಮಃ

ಕೇಯೂರ - ಎಂದರೆ ವಂಕಿ, ಆಭರಣ,

ನಾಗ - ಹಾವು, ನಾಗರಹಾವು, ಪಾತಾಳ ಲೋಕದಲ್ಲಿರುವ ದಿವ್ಯವಾದ ಆನೆ, ಮೋಡಗಳು.

ಹಾರ - ಎಂದರೆ ಮಾಲೆ, ಸರ.

ಮೋಡಗಳೆಂಬ ವಂಕಿಗಳಿಂದ ಸೇರಿಸಲ್ಪಟ್ಟ ಹಾರವನ್ನು ಹಾಕಿಕೊಂಡಿರುವವನು.

ಅಥವಾ

ನಾಗರ ಹಾವುಗಳನ್ನೇ ವಂಕಿಗಳೋಪಾದಿಯಲ್ಲಿ, ಸರದಂತೆ ಹಾಕಿಕೊಂಡಿರುವವನು - ಪರಮೇಶ್ವರ, ಶಿವ, ಶಿವನಿಗೆ ಸರ್ಪಗಳೇ ಆಭರಣ.

ಅಥವಾ

ನಾಗವನ್ನೇ ಆಭರಣವನ್ನಾಗಿ ಮಾಡಿಕೊಂಡು ಹಾರದ ರೀತಿಯಲ್ಲಿ ಕಟ್ಟಿಕೊಂಡಿರುವ ಗಣಪತಿ, ವಿಘ್ನೇಶ್ವರ.

ಅಥವಾ

ನಾಗಗಳ ರಾಜನಾದ ಆದಿಶೇಷನನ್ನೇ ಹಾಸಿಗೆಯಾಗಿಯೂ, ಛತ್ರಿಯಾಗಿಯೂ ಮಾಡಿಕೊಂಡಿರುವವನು - ಶ್ರೀಮನ್ನಾರಾಯಣ.

ಆಭರಣ ರೂಪದಲ್ಲಿ ಆನೆಗಳನ್ನೂ, ಸರ್ಪಗಳನ್ನೂ ಆಧಾರವಾಗಿರಿಸಿಕೊಂಡು ಅವುಗಳ ಮೇಲೆ ನಿಂತಿರುವ ಪಾತಾಳ ಲೋಕ, ಅಥವಾ ಭೂಲೋಕ, ಅಥವಾ ದೇವಾಲಯ. ಏಕೆಂದರೆ ಭೂಲೋಕ ಪಾತಾಳ ಲೋಕಗಳು ಪರಮಾತ್ಮನ ಇಚ್ಛೆಯಿಂದ ಸೃಷ್ಟಿಸಲ್ಪಟ್ಟ ಅವನ ಪರ್ಯಾಯ ರೂಪಗಳು, ಮತ್ತು ದೇವಾಲಯದಲ್ಲಿ ಪರಮಾತ್ಮನೇ ಮೂರ್ತಿರೂಪದಲ್ಲಿ ವಾಸಿಸುತ್ತಾನೆ - ಇವೆಲ್ಲವೂ ಪರಮಾತ್ಮನಿಗೆ ಸಲ್ಲುತ್ತವೆ. - ಅವನೇ ನಾಗಕೇಯೂರ ಹಾರಾಯ ನಮಃ ಎಂದು ನಮಿಸಲ್ಪಡುವವನು.

ಆತ್ಮನಿಗೆ ಇಂದ್ರಿಯಗಳು, ಮನಬುದ್ಧಿ, ಅಹಂಕಾರ, ಚಿತ್‌ಗಳು ಸತ್ವ, ರಜಸ್ತಮೋಗುಣಗಳು ಹಾರ, ಸುರಳಿಗಳಂತೆ ಸುತ್ತಿಕೊಂಡು ಆತ್ಮನನ್ನು ಕಾಪಾಡುತ್ತವೆ. ಸದಾ ಸಾತ್ವಿಕ ಪ್ರವೃತ್ತಿಗಳು ಸೇರಿ ಸತ್ - ಸಂಸ್ಕಾರಗಳಾಗಿ ಸುತ್ತಿಕೊಳ್ಳುತ್ತವೆ. ಇತರ ಸಂಸ್ಕಾರಗಳೂ ಅಂಟಿಕೊಳ್ಳುತ್ತವೆ. ವಿವೇಚನಯಿಂದ ಸದ್ಗುಣಗಳೇ ಉತ್ತಮ ನಾಗಕೇಯೂರಗಳಾಗಿ ಅಂಟಿಕೊಳ್ಳುತ್ತವೆ. ಇತರರದು ಮುಳ್ಳುಗಳಾಗಿ ಅಂಟಿ ಆತ್ಮನನ್ನು ಅಧಃಪತನ ಮಾಡುತ್ತವೆ.

**766.** ನಾಗೇಂದ್ರಾಯ ನಮಃ

ನಾಗ - ಎಂದರೆ ಸರ್ಪ ನಾಗಗಳು, ಅವುಗಳ ಇಂದ್ರ - ರಾಜ, ವಾಸುಕಿ, ಆದಿಶೇಷ.

ನಾಗ - ಎಂದರೆ ಆನೆ, ಗಜಗಳ ಇಂದ್ರ - ಗಜೇಂದ್ರ.

ಪರಮಾತ್ಮನಿಗೆ ನಾಗೇಂದ್ರ ಎಂದು ನಮಸ್ಕರಿಸುತ್ತೇವೆ.

ಸುಬ್ರಮಣ್ಯ - ಸುಬ್ರಹ್ಮಣ್ಯ ಸ್ವಾಮಿ - ನಾಗೇಂದ್ರನು.

767. ಅಘಹಾರಿಣೇ ನಮಃ

ಅಘ - ಪಾಪಗಳು, ದೋಷಗಳು, ದುಃಖ, ಪೀಡೆ, ಸಂಕಟ.

ಪರಮಾತ್ಮನು ಅಘಗಳನ್ನು ಅಪಹರಿಸಿ ದೂರ ಕೊಂಡೊಯ್ಯುವುದರಿಂದ ಅವನು - ಅಘಹಾರಿ.

ಅಥವಾ ಅಘಗಳನ್ನು ಕತ್ತರಿಸುವುದರಿಂದ ಅವನು ಅಘಹಾರಿ.

ಅಥವಾ

ಸಂಸಾರವೆಂಬ ಮಹತ್ತಾದ ಅಘದಿಂದ ಅವುಗಳ ಬಂಧನವನ್ನು ದೂರಮಾಡುವುದರಿಂದ - ಅವನು ಅಘಹಾರಿ.

ಅಥವಾ

ಭಕ್ತಿಯೆಂಬ ಕತ್ತರಿಯಿಂದ ಸಂಸಾರವೆಂಬ ಅಘಗಳನ್ನು ಕತ್ತರಿಸುವುದರಿಂದ (ಹಾರಿ) - ಅವನು ಅಘಹಾರಿ.

768. ನದೀರೂಪಾಯ ನಮಃ

ಪರಮಾತ್ಮನು ತನ್ನ ದಯಾಸಾಗರದಿಂದ ದಯೆಯನ್ನು ನಿರಂತರ ನೀರಿನಂತೆ ಹರಿಸುವುದರಿಂದ ಅವನು - ನದೀರೂಪನು.

ಮತ್ತು

ಪರಮಾತ್ಮನು ತನ್ನ ಅಪಾರ ಕರುಣಾಸಾಗರದಿಂದ ಕರುಣೆಯ ಬಿಂದುಗಳನ್ನು ನಿರಂತರ ನದೀರೂಪದಲ್ಲಿ ಹರಿಸುವುದರಿಂದ ಅವನು - ನದೀರೂಪನು.

ಅಥವಾ

ಪರಮ ಪವಿತ್ರವಾದ ದೇವಗಂಗೆಯನ್ನು ಶ್ರೀಮನ್ನಾರಾಯಣನು ತನ್ನ ಪಾದದಿಂದ ಹರಿಸುವುದರಿಂದ ಅವನು ನದೀರೂಪನು. ಅಥವಾ,

ಸಕಲ ಜೀವಕೋಟಿಗೂ ಕ್ಷಣಮಾತ್ರದಲ್ಲಿ ತನ್ನ ಕರುಣೆಯನ್ನು ಲಭಿಸುವಂತೆ ಮಾಡುವ ನದೀರೂಪನು.

ಇಷ್ಟು ಕರುಣೆಯ ಬಿಂದುಗಳು ಹೊರ ಬರುತ್ತಿದ್ದರೂ ಯಾವ ಕಾಲಕ್ಕೂ ಬತ್ತದೆ ಇರುವ ಅಪಾರ ನದಿಯ ರೂಪನು ಅವನು - ನದೀರೂಪಾಯ ನಮಃ.

769. ನಗ್ನಾಯ ನಮಃ

ಸಂಸ್ಕಾರಾದಿ ಆವರಣಗಳನ್ನು ಅಂಟುಗಳನ್ನು ಇರದವನು - ಪರಮ ಪವಿತ್ರನು - ನಗ್ನನು.

ಯಾವುದರಿಂದಲೂ ಸುತ್ತಲ್ಪಡದವನು, ಅನೇಕ ಕರ್ಮಗಳನ್ನು ತನ್ನ ಇಚ್ಛೆಯಂತೆ ಮಾಡುತ್ತಿದ್ದರೂ ಏನನ್ನೂ ಅಂಟಿಸಿಕೊಳ್ಳದೆ, ಎಲ್ಲ ಕಾರ್ಯಗಳನ್ನು ಒಳಹೊಕ್ಕು ಮಾಡಿದರೂ ಹೊರಗೇ ಉಳಿದಿರುವ ಪರಮಾತ್ಮನು - ಸ್ವತಂತ್ರನು - ನಗ್ನನು - ಅವನು ರೂಪವೇ ನಗ್ನಸತ್ಯ ಸ್ವರೂಪ.

ಯಾವ ವಿಧವಾದ ಸಾಕಾರ, ನಿರಾಕಾರ ಮತ್ತು ತಿಳಿಯದ ಆಕಾರಗಳಿಂದ ಮುಕ್ತನಾದವನು - ಅವನು - ನಿರಾಕಾರ - ನಗ್ನಾಯ ನಮಃ - ನಗ್ನನು.

ಅಥವಾ

ಆತ್ಮನು ಸಂಸ್ಕಾರದಿಂದ ಸಂಸಾರ ಬಂಧನದಿಂದ ಬಿಡುಗಡೆ ಹೊಂದಿದಾಗ ಪರಮಾತ್ಮ ಅಂಶವೇ ಅಂಶವಾಗಿ ನಿಲ್ಲುತ್ತಾನೆ - ಇದು ಅವನ ನಗ್ನರೂಪ - ಏನನ್ನು ಅಂಟದಿರುವ ಮತ್ತು ಅಂಟಿಸಿಕೊಳ್ಳದಿರುವ ಸ್ಥಿತಿ.

**770. ನಾನಾರೂಪಧರಾಯ ನಮಃ**

ತನ್ನ ಚತುರತೆಯಿಂದಲೂ, ಇಚ್ಛಾರೂಪದಿಂದಲೂ, ಸಂಕಲ್ಪದಿಂದಲೂ ನಾನಾ ರೀತಿಯ ರೂಪಗಳನ್ನು ತನ್ನದೇ ಆದ ಆತ್ಮಗಳಿಗೆ ತೊಡಿಸುವುದರಿಂದ ಅವನು / ಪರಮಾತ್ಮನು ನಾನಾರೂಪಧರನು.

ಅಥವಾ

ಆತ್ಮನು ಪರಮಾತ್ಮನಿಂದ ಕಲ್ಪಾದಿಯಿಂದ ಹೊರಬಂದಾಗಿನಿಂದ ಮತ್ತೆ ಕಲ್ಪಾಂತದಲ್ಲಿ ಸೇರುವವರೆಗೆ ಅನೇಕ ರೀತಿಯ ದೇಹಗಳನ್ನು / ಶರೀರಗಳನ್ನು ಧರಿಸಿ ಕಾಲಚಕ್ರದಲ್ಲಿ ತಿರುಗುವುದರಿಂದ ಆತ್ಮನೇ ನಾನಾರೂಪಧರನು.

*ನಾಗೇಶ್ವರಾಯ ನಾಗಾಯ ನಮಿತಾಯ ನರಾಯ ಚ ।*
*ನಾಗಾಂತಕರಥಾಯೈವ ನರನಾರಾಯಣಾಯ ಚ ॥129॥ (771-776)*

**771. ನಾಗೇಶ್ವರಾಯ ನಮಃ**

ನಾಗೇಶ್ವರ - ನಾಗಗಳಿಗೆ, ಸರ್ಪಗಳಿಗೆ ಈಶ್ವರ - ಒಡೆಯನು - ರಾಜ, - ಆದಿಶೇಷ, ವಾಸುಕಿ, ಸುಬ್ರಹ್ಮಣ್ಯ ದೇವನು.

ನಾಗ - ಎಂದರೆ ಆನೆಗಳಿಗೆ ಒಡೆಯ - ನಾಗರಾಜ.

ನಾಗಗಳ ಹೃದಯದಲ್ಲಿರುವ ಈಶ್ವರ - ಪರಮಾತ್ಮನ ದಿವ್ಯ ತೇಜಸ್ಸು - ಇದೂ ಪರಮಾತ್ಮನೇ. ನಾಗಗಳಲ್ಲಿರುವ ಚೇತನಾ ಶಕ್ತಿ - ಪರಮಾತ್ಮ.

ಅಥವಾ

ನಾಗಗಳು ಎಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ. ಮಾತ್ಸರ್ಯಗಳೆಂಬ ಸರ್ಪಗಳ ಅಧಿದೇವತೆ - ಪರಮಾತ್ಮನ ಸಂಕಲ್ಪ. ಈ ಸರ್ಪಗಳನ್ನು ಸ್ವೇಚ್ಛೆಯಾಗಿ ಹರಿಯಲು ಬಿಟ್ಟರೆ ಸಂಸಾರ ಬಂಧನದಿಂದ

ಮುಕ್ತಿ ಅಥವಾ ಬಿಡುಗಡೆ ಅಸಾಧ್ಯ. ಯಾವಾಗ ಈ ಸರ್ಪಗಳನ್ನು ಭಗವಂತನನ್ನು ಪಡೆಯಲು ಸಾಧನವಾಗಿ ಉಪಯೋಗಿಸುವೆವೋ ಆಗ ಇವೇ ಪರಮಾತ್ಮನನ್ನು ದೊರಕಿಸುತ್ತವೆ. ಆಗ ನಾಗಗಳ ಈಶ್ವರನಾದ ಪರಮಾತ್ಮನೇ ಸಹಾಯ ಮಾಡುತ್ತಾನೆ.

772. ನಾಗಾಯ ನಮಃ

ನಾಗದೇವತಾ ರೂಪನಾದ ಪರಮಾತ್ಮನಿಗೆ ನಮಸ್ಕಾರಗಳು, ನಾಗ ದೇವತಾರೂಪನಾಗಿ ಶಿವನ ದೇಹವನ್ನು ಅಲಂಕರಿಸುವ ನಾಗಗಳಿಗೆ ನಮಸ್ಕಾರಗಳು. ಅಥವಾ

ಆತ್ಮನನ್ನು ಅಂಟಿಕೊಳ್ಳುವ ಸತ್ ಸಂಸ್ಕಾರಗಳೆಂಬ ನಾಗಗಳಿಗೆ ನಮಸ್ಕಾರಗಳು.

773. ನಮಿತಾಯ ನಮಃ

ನಮಿತ - ನಮಸ್ಕರಿಸಲ್ಪಡುವವನು, ನಮಸ್ಕರಿಸಲ್ಪಟ್ಟವನು - ಪರಮಾತ್ಮನೇ, ಏಕೆಂದರೆ ಯಾರು ಯಾವಾಗ ಯಾರಿಗೆ ಎಲ್ಲಿ ನಮಸ್ಕರಿಸಿದರೂ, ನಮಸ್ಕರಿಸಲ್ಪಟ್ಟರೂ, ಇಬ್ಬರಲ್ಲಿಯೂ ಪರಮಾತ್ಮನ ಅಂಶವಾದ ಆತ್ಮವೇ ಇರುವುದರಿಂದ, ಆತ್ಮನು ಆತ್ಮನ ಪ್ರೇರಣೆಯಿಂದ ಆತ್ಮನಿಗೆ ನಮಸ್ಕಾರ ಮಾಡುವ ಆತ್ಮಕಾರ್ಯವನ್ನು ನಡೆಯಿಸುತ್ತಾನೆ - ಎಲ್ಲೆಲ್ಲಿಯೂ ಆತ್ಮನೇ ಆತ್ಮನಾಗಿ ಸ್ವಯಂಪ್ರಕಾಶನಾಗುತ್ತಾನೆ - ನಮಿಸುವವನು, ನಮಿತನು, ನಮನ ಕಾರ್ಯ - ಇದಕ್ಕೆ ಸಂಬಂಧಿಸಿದ ನಮನ ಕಾರ್ಯ ಪ್ರಚೋದಕನೂ ಪರಮಾತ್ಮನೇ! ಆದರಿಂದ ನಮಿತಾಯ ನಮಃ.

774. ನರಾಯ ನಮಃ

ನರ - ಎಂದರೆ ಮನುಷ್ಯನು - ಮನುಷ್ಯ ರೂಪದಲ್ಲಿರುವ ದೇಹದಲ್ಲಿ ವಾಸಿಸುವ ಆತ್ಮ - ತೇಜಸ್ಸು - ಪರಮಾತ್ಮನ ಅಂಶ - ನರನೂ ಪರಮಾತ್ಮನೇ. ಅಥವಾ

ನರ - ಪುರುಷ - ಪ್ರಕೃತಿ, ಪುರುಷ, ಮಾಯೆ ವಿಭಾಗದಲ್ಲಿ ಪುರುಷನು - ಪರಮಾತ್ಮನೇ. ಅಥವಾ

ನರ - ನರ ನಾರಾಯಣರೆಂದು ಬದರಿಕಾಶ್ರಮದಲ್ಲಿ ತಪಸ್ಸು ಮಾಡುವ ನರನು ಪರಮಾತ್ಮನೇ, - ಕೃಷ್ಣಾರ್ಜುನರೆಂದು ನರ ನಾರಾಯಣನಾಗಿರುವ ರೂಪದಲ್ಲಿ ನರ ಎಂದರೆ ಅರ್ಜುನ.

775. ನಾಗಾಂತಕರಥಾಯ ನಮಃ

ನಾಗ - ಎಂದರೆ ಸರ್ಪಗಳ, ಅಂತಕ - ಕೊನೆಯನ್ನು ಮಾಡುವವನು ಗರುಡ.

ನಾಗಾಂತಕ - ಎಂದರೆ ಗರುಡನ ರಥಾಯ ಚಿಹ್ನೆಯನ್ನು ಧ್ವಜದಲ್ಲಿರಿಸಿಕೊಂಡಿರುವವನು - ಪರಮಾತ್ಮ.

ಗರುಡಾಂಕಿತ ರಥವನ್ನು ಹೊಂದಿರುವವನು - ಪರಮಾತ್ಮ - ಅವನು ನಾಗಾಂತಕ ರಥಾಯ ನಮಃ.

**776. ನರನಾರಾಯಣಾಯ ನಮಃ**

ಯಮಧರ್ಮರಾಯನ ಪುತ್ರನಾಗಿ ಜನಿಸಿದ ನಾರಾಯಣರು ಬದರಿಕಾಶ್ರಮದಲ್ಲಿ ತಪಸ್ಸು ಮಾಡುತ್ತಿರುತ್ತಾರೆ. ಇವರೇ ಮುಂದೆ ಶ್ರೀ ಕೃಷ್ಣಾರ್ಜುನರಾಗಿ ದ್ವಾಪರ ಯುಗದಲ್ಲಿ ಅವತರಿಸುತ್ತಾರೆ.

ನರ ನಾರಾಯಣರು ಮಹಾ ತಪಸ್ವಿಗಳು - ಸಕಲ ಸೃಷ್ಟಿಯ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೆ ಸದಾ ಶ್ರೇಯಸ್ಸು ಉಂಟಾಗಲಿ ಎಂದು ತಪಸ್ಸು ಮಾಡುತ್ತಿದ್ದಾರೆ. ಪರಮಾತ್ಮನ ಸಂದೇಶವೇ ಶಾಂತಿ, ಜಪ, ತಪಸ್ಸು ಎಂದು ತಿಳಿದು ಸಕಲ ಜೀವ ಕೋಟಿಯೂ ಇದರಲ್ಲಿ ತೊಡಗಲಿ ಎಂದು ತಪಸ್ಸು ಮಾಡುತ್ತಿದ್ದಾರೆ.

ಭಗವಂತನು ಕರ್ಮಮಾಡದೇ ಸುಮ್ಮನಿರಲು ಸಾಧ್ಯವಿಲ್ಲ ಎಂಬ ಮಹದುಪದೇಶವನ್ನು ಈ ಮೂಲಕ ಸಕಲ ವಿಶ್ವಕ್ಕೆ ಸಾರುತ್ತಿದ್ದಾನೆ - ನರನಾರಾಯಣಾಯ ನಮಃ.

*ನಮೋ ಮತ್ಸಸ್ವರೂಪಾಯ ಕಚ್ಛಪಾಯ ನಮೋ ನಮಃ ।*
*ನಮೋ ಯಜ್ಞವರಾಹಾಯ ನೃಸಿಂಹಾಯ ನಮೋ ನಮಃ ॥130॥*
*(777-780)*

**777. ಮತ್ಸಸ್ವರೂಪಾಯ ನಮಃ**

ಮತ್ಸ್ಯ - ಎಂದರೆ ಮೀನು.

ಮತ್ಸ್ಯ - ಮತ್ಸ್ಯ ಸ್ವರೂಪನಾದ ಪರಮಾತ್ಮನಿಗೆ ನಮಸ್ಕಾರಗಳು, ಮೀನಿನ ಆಕಾರವನ್ನು ಪರಮಾತ್ಮನು ತಳೆದನು. ಇದು ಪ್ರಸಿದ್ಧವಾದ ಮತ್ತು ಪ್ರಚಲಿತವಾದ ಹತ್ತು ಅವತಾರಗಳಲ್ಲಿ ಮೊದಲನೆಯದು - ಮತ್ಸ್ಯಾವತಾರ - ಮೀನ ಶರೀರ.

ಪರಮಾತ್ಮನ ಅವತಾರಗಳು - ರೂಪಗಳು ಆಯಾ ಕಾರ್ಯ, ಸನ್ನಿವೇಶಗಳಿಗೆ ಹೊಂದುವಂತಹವುಗಳು.

ಮತ್ಸ್ಯಾವತಾರದ ಸನ್ನಿವೇಶ, ಹಿನ್ನಲೆಯೆಂದರೆ —

ಪ್ರಳಯವಾಗುವುದರಲ್ಲಿದ್ದಿತು, ಆಗ ರಾಕ್ಷಸರು ಬ್ರಹ್ಮನಿಂದ ವೇದಗಳನ್ನು ಕದ್ದುಕೊಂಡು ಸಮುದ್ರದೊಳಗೆ ಹೋಗಿದ್ದರು. ಪ್ರಳಯ ಕಾಲಕ್ಕೆ ಮುನ್ನ

ರಾಜರ್ಷಿಯನ್ನು ಮುಂದೆ ಮನುವಾಗುವವನನ್ನು ರಕ್ಷಿಸಿ, ಓಷಧಿಗಳನ್ನು ಕಾಪಾಡಿ ಮುಂದೆ ಕಲ್ಪಾದಿಯನ್ನು ನಡೆಸಬೇಕಾಗಿತ್ತು. ಆಗ ಪರಮಾತ್ಮನು ಅವತಾರ ಮಾಡಬೇಕಾಗಿದ್ದ ಕಾಲ.

ರಾಜನು ಅರ್ಘ್ಯವನ್ನು ಕೊಡಲು ಬೊಗಸೇ ನೀರನ್ನು ಹಿಡಿದುಕೊಂಡಿದ್ದಾಗ ಪರಮಾತ್ಮನು ಒಂದು ಚಿಕ್ಕಮೀನಾಗಿ ಬೊಗಸೇ ನೀರಿನಲ್ಲಿ ಕಾಣಿಸಿಕೊಂಡನು, ರಾಜನಿಗೆ ಮೀನನ್ನು ಕಾಪಾಡಲು ಹೇಳಿದನು - ಮೀನು ಕ್ರಮೇಣ, ಗಿಂಡಿ, ಬಿಂದಿಗೆ, ಭಾಂಡ, ಕೊಳ, ಸರೋವರಗಳಿಗೂ ದೊಡ್ಡದಾಗಿ ಬೆಳೆಯಿತು. ತನ್ನ ಉದ್ದೇಶವನ್ನು ರಾಜನಿಗೆ ತಿಳಿಸಿತು. ಅದರಂತೆ ರಾಜನು ಕಾಯಲಾಗಿ, ಪ್ರಳಯದ ಪ್ರಾರಂಭವಾಯಿತು. ಆಗ ಎಲ್ಲಿಡೆ ಕತ್ತಲಾಗಿ, ಸಾಗರರೂಪವಾಯಿತು. ಒಂದು ದೋಣಿಯು ಪ್ರಕಟವಾಯಿತು. ರಾಜನು, ದೋಣಿಯಲ್ಲಿ ಋಷಿಗಳೊಡನೆ ಕುಳಿತನು. ದೋಣಿಯು ಹೋಗುತ್ತಿರುವಾಗ ಒಂದು ಮೀನು ಬಂದಿತು. ಹಗ್ಗದಿಂದ ದೋಣಿಯನ್ನು ಮೀನಿನ ಕೊಂಬಿಗೆ ಕಟ್ಟಲಾಯಿತು. ಮೀನು ದೋಣಿಯನ್ನು ಎಳೆದುಕೊಂಡು ಹೋಗುತ್ತಾ ಬೆಳಗಾಗುವುದರೊಳಗೆ ಕಾಪಾಡಿತು. ನಂತರ ಮೀನು ರಾಕ್ಷಸನು ಎತ್ತಿಕೊಂಡು ಹೋಗುತ್ತಿದ್ದ ವೇದಗಳನ್ನು ಬಿಡಿಸಿಕೊಂಡು ಬ್ರಹ್ಮದೇವರಿಗೆ ಮೀನು ಕೊಟ್ಟಿತು.

ಇದು ಸೂಕ್ಷ್ಮದಲ್ಲಿ ಮತ್ಸ್ಯಾವತಾರದ ಕಾರಣ. ಅಥವಾ

ನಮ್ಮಲ್ಲಿರುವ ವಿವೇಕವನ್ನು ಮಾಯೆಯು ಅಪಹರಿಸಿಕೊಂಡು ಸಂಸಾರ ಸಾಗರದಲ್ಲಿ ಹೋಗುತ್ತಿದ್ದಾಗ, ಪರಮಾತ್ಮನ ಕೃಪೆಯು ತನ್ನ ದೃಷ್ಟಿಗೆ ಸಿಕ್ಕಿಸಿಕೊಂಡು ಸಾಗರದಿಂದ ಬಿಡಿಸುತ್ತದೆ. ವಿವೇಕ ಬುದ್ಧಿಯು ಮನಸ್ಸಿನೊಡನೆ ಸೇರಿ, ಮುಳುಗಿ ಹೋಗುತ್ತಿರುವ ಇಂದ್ರಿಯಗಳನ್ನು ಮೇಲೆತ್ತಿ ಆತ್ಮನನ್ನು ಉದ್ಧಾರಮಾಡುತ್ತದೆ. ಈ ಮತ್ಸ್ಯಾವತಾರರೂಪೀ ಪರಮಾತ್ಮನೇ ದೋಣಿಯ ಕೊಂಬು, ಕ್ಷಣ ಕ್ಷಣಕ್ಕೂ ವಿವೇಕವನ್ನು ಕಳೆದುಕೊಳ್ಳುತ್ತಿರುವ ಬುದ್ಧಿಯನ್ನು ಮಾಯಾಪಾಶದಿಂದ ಪರಮಾತ್ಮನು ಬಿಡಿಸುತ್ತಾನೆ.

**778. ಕಚ್ಛಪಾಯ ನಮಃ**

ಕ್ಷೀರ ಸಾಗರ ಮಥನ ಕಾಲದಲ್ಲಿ ಮೇರು ಪರ್ವತವನ್ನು ಕಡೆಗೋಲಾಗಿ ಮಾಡಿ ವಾಸುಕಿಯನ್ನು ಹಗ್ಗರೂಪದಲ್ಲಿ ಪರ್ವತವನ್ನು ಸುತ್ತಲಾಗಿ, ಪರ್ವತವನ್ನು ಸಮುದ್ರದಲ್ಲಿ ನಿಲ್ಲುವಂತೆ ಮಾಡಲು ಪರಮಾತ್ಮನು ಮಹಾಕೂರ್ಮನಾಗಬೇಕಾಯಿತು. - ಇದೇ ಕಚ್ಛಪಾಯ ನಮಃ ಎಂದು ಸಂಬೋದಿಸಲ್ಪಡುವ ಕೂರ್ಮಾವತಾರ.

ಸಂಸಾರ ಸಾಗರದಲ್ಲಿ ಮುಳುಗುತ್ತಿರುವಾಗ, ಮನಸ್ಸು, ಬುದ್ಧಿಯನ್ನು ನಿಲ್ಲಿಸಿ ಅಹಂಕಾರ ಬರದ ಹಾಗೆ ಮಾಡಿ ನಿಲ್ಲಿಸಲು ಆತ್ಮನೇ ಮಹಾಕೂರ್ಮನ

ಹಾಗೆ ಆಧಾರಭೂತನಾಗಿ ನಿಲ್ಲುತ್ತದೆ - ಕಚ್ಛಪಾಯ ನಮಃ.

779. ಯಜ್ಞವರಾಹಾಯ ನಮಃ

ಭೂದೇವಿಯನ್ನು ಹಿರಣ್ಯಾಕ್ಷನು ಎತ್ತಿಕೊಂಡು ಹೋಗಿ ಪಾತಾಳ ಲೋಕದ ಬಾಗಿಲಲ್ಲಿ ನಿಲ್ಲಿಸಿದನು. ಇತ್ತ ಭೂದೇವಿಯು ಕಾಣದಿರಲಾಗಿ, ವಿಷ್ಣುವು ಹುಡುಕುತ್ತಿದ್ದನು. ಮಹಾವರಾಹರೂಪವನ್ನು ತಾಳಿ ಸಮುದ್ರದೊಳಗೆ ಪ್ರವೇಶಿಸಿ, ತನ್ನ ಕೋರೆದಾಡೆಗಳ ಮೇಲೆ ಭೂದೇವಿಯನ್ನು ಎತ್ತಿ ಸಮುದ್ರದಿಂದ ಹೊರತಂದನು. ವರಾಹನು ಭೂದೇವಿಯನ್ನು ಸುರಕ್ಷಿತ ಸ್ಥಳದಲ್ಲಿರಿಸಿ, ಹಿರಣ್ಯಾಕ್ಷನನ್ನು ಸಂಹಾರ ಮಾಡಿದನು.

ಅಥವಾ

ಬುದ್ಧಿ ಶಕ್ತಿಯ ವಿವೇಕತೆಯನ್ನು ಮಾಯೆಯು ಎತ್ತಿಕೊಂಡು ಹೋಗಿ. ಸಂಸಾರ ಸಾಗರದಲ್ಲಿ ಬಿಡುತ್ತದೆ. ಆದರೆ ಆತ್ಮನು ಪರಮಾತ್ಮನ ಕೃಪಾ ಬಿಂದುವಿನಿಂದ ಮಾಯೆಯನ್ನು ಹೊಡೆದೋಡಿಸುತ್ತಾನೆ. ವಿವೇಕ ಬುದ್ಧಿಯು ಬಿಡುಗಡೆಹೊಂದಿ ಆತ್ಮನೊಡನೆ ಪರಮಾತ್ಮನನ್ನು ಸೇರುತ್ತದೆ.

780. ನರಸಿಂಹಾಯ ನಮಃ

ಹಿರಣ್ಯಾಕ್ಷನ ಸಹೋದರನಾದ ಹಿರಣ್ಯಕಶಿಪುವು ಹರಿಯೊಡನೆ ದ್ವೇಷವನ್ನು ಸಾಧಿಸುತ್ತಾ ಸಾಧಿಸುತ್ತಾ ಪ್ರಹ್ಲಾದನಿಗೆ ಶಿಕ್ಷೆಯ ಮೇಲೆ ಶಿಕ್ಷೆಯನ್ನು ವಿಧಿಸಿದನು. ಪ್ರಹ್ಲಾದನು ಶ್ರೀ ಹರಿಯನ್ನೇ ಭಕ್ತಿಯಿಂದ ಆರಾಧಿಸುತ್ತಿದ್ದರಿಂದ ಅವನ ಮೇಲೆ ಯಾವ ಶಿಕ್ಷೆಯೂ ಪರಿಣಾಮಕಾರಿಯಾಗಲಿಲ್ಲ. ಅದರಂತೆ ಹಿರಣ್ಯಕಶಿಪುವಿನ ಪುತ್ರವಾತ್ಸಲ್ಯದ ಪರಿಣಾಮವಾಗಿಯೂ ಅವನ ಹರಿಯ ಮೇಲಿನ ದ್ವೇಷ ಕಡಿಮೆಯಾಗಲಿಲ್ಲ. ಕೊನೆಗೆ ಪ್ರಹ್ಲಾದನನ್ನು ಹರಿಯು ಎಲ್ಲೆಲ್ಲಿಯೂ ಇರುವುದಾದರೆ ತೋರಿಸೆಂದು ಹೇಳಿದನು. ಸಭಾಮಂಟಪದಲ್ಲಿದ್ದ ಕಂಬಗಳನ್ನು ತೋರಿಸಿದನು. ಹಿರಣ್ಯಕಶಿಪುವು ತೋರಿಸಿದ ಕಂಬದಲ್ಲಿಯೇ ಹರಿಯು ಇರುವನೆಂದು ಪ್ರಹ್ಲಾದನು ಪ್ರತಿಪಾದಿಸಿದನು. ಹರಿಯನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸಲಾಗಿ, ಹರಿಯು ತಂದೆ ಮಗ ಇಬ್ಬರೂ ತೋರಿಸಿದ ಕಂಬದಲ್ಲಿಯೇ ಒಳಗೆ ಉದ್ಭವನಾಗಿ ಹಿರಣ್ಯಕಶಿಪುವು ಕಂಬವನ್ನು ಗದೆಯಿಂದ ಪ್ರಹಾರ ಮಾಡಿದಾಗ ಕಂಬವನ್ನು ಒಡೆದು ಬಂದನು. ವಿಕಾರ, ವಿಕೃತ, ಹಿಂದೆಂದೂ ಕಾಣದ ಸಿಂಹದ ತಲೆ, ಮನುಷ್ಯನ ದೇಹದಲ್ಲಿ ಯಾವ ಆಯುಧಗಳೂ ಇಲ್ಲದೆ ನರಸಿಂಹನು ಹೊರಬಂದನು. ಹಿರಣ್ಯಕಶಿಪುವಿಗೆ ಆಶ್ಚರ್ಯವಾಯಿತು. ಸಕಲ ಭುವನದ ದೇವ ದೇವತೆಗಳೂ ಸರ್ವರೂ ಅಲ್ಲಿ ನೆರೆದರು.

ರಾಕ್ಷಸನಿಗೂ ನರಹರಿಗೂ ಘೋರಯುದ್ಧವಾಯಿತು. ಬ್ರಹ್ಮದೇವನಿಂದ ಯಾವ ರೀತಿ ವರವನ್ನು ಹಿರಣ್ಯಕಶಿಪುವು ಪಡೆದಿದ್ದನೋ ಅದು ಮುರಿಯದ

ರೀತಿಯಲ್ಲಿ ನರಸಿಂಹನು ಅವಕಾಶ, ಕಾಲ ದೇಶಗಳನ್ನು ಕಲ್ಪಿಸಿಕೊಂಡು ಅದಕ್ಕಾಗಿ ಕಾದು ಹಿರಣ್ಯಕಶಿಪುವನ್ನು ಸಂಹರಿಸಿದನು. ಹೊಸ್ತಿಲ ಮೇಲೆ ಕುಳಿತು ತೊಡೆಯ ಮೇಲೆ ಹಿರಣ್ಯಕಶಿಪುವನ್ನು ಮಲಗಿಸಿಕೊಂಡು ಸೂರ್ಯಾಸ್ತ ಸಂಧ್ಯೆಯಲ್ಲಿ ತನ್ನ ಕೈಗಳಿನ ಉಗುರುಗಳಿಂದ ರಾಕ್ಷಸನ ಹೊಟ್ಟೆಯನ್ನು ಬಗೆದು ಕರುಳಿನ ಮಾಲೆಯನ್ನು ಹಾಕಿಕೊಂಡು ರಾಕ್ಷಸನ ರಕ್ತವನ್ನು ಹೀರುತ್ತಾ, ಅವನ ಸಂಹಾರವಾದ ನಂತರ ಸುತ್ತಲೂ ನೋಡುತ್ತಾ ಕುಳಿತನು.

ನೆರೆದಿದ್ದವರೆಲ್ಲರೂ ದಿಗ್ಭ್ರಮೆಯಿಂದ ವಿಸ್ಮಯರಾದರು. ಬ್ರಹ್ಮದೇವರು ಪ್ರಹ್ಲಾದ, ಲಕ್ಷ್ಮಿಯರನ್ನು ಮುಂದೆ ಮಾಡಿಕೊಂಡು ಬಂದರು. ನರಸಿಂಹನನ್ನು ಉಗ್ರರೂಪವನ್ನು ಬಿಟ್ಟು ಕರುಣಾಮಯನಾಗೆಂದು ಸಾಸಿರ ನಾಮಗಳನ್ನು ಶ್ರದ್ಧೆ ಭಯ ಭಕ್ತಿಯಿಂದ ಹೇಳಿದರು. ನರಸಿಂಹನನ್ನು ಪ್ರಹ್ಲಾದನು ಭಕ್ತಿಯಿಂದ ಪ್ರಾರ್ಥಿಸಿದನು. ಪ್ರಹ್ಲಾದನ ಭಕ್ತಿಗೆ ಮೆಚ್ಚಿ ನರಸಿಂಹನು ಅವನನ್ನು ಕರೆದು ತೊಡೆಯ ಮೇಲೆ ಕುಳ್ಳಿರಿಸಿ ಮೈತಡವಿದನು. ಲಕ್ಷ್ಮಿಯನ್ನು ಒಂದು ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ಶಾಂತನಾಗಿ ಬ್ರಹ್ಮದೇವರಿಗೆ ಪ್ರಹ್ಲಾದನ ಪಟ್ಟಾಭಿಷೇಕ ಮಾಡಲು ಹೇಳಿದನು. ಸಕಲರ ಇಷ್ಟಾರ್ಥಗಳನ್ನು ಕೊಡುವೆನೆಂದೂ, ನೆನೆದವರ ಬೆನ್ನಲ್ಲಿ ನಿಂತು ಕಾಯುವೆನೆಂದು ವರವನ್ನು ನರಸಿಂಹ ಸ್ವಾಮಿಯು ದಯಪಾಲಿಸಿದನು. ಪ್ರಹ್ಲಾದನ ಪ್ರಾರ್ಥನೆಯಂತೆ ಹಿರಣ್ಯಕಶಿಪುವಿಗೆ ಒಂದು ಜನ್ಮವನ್ನು ಕಳೆದು ಮುಂದಿನ ಜನ್ಮವನ್ನು ತಳೆಯಲು ಶ್ರೀ ಹರಿಯು ಸಹಾಯ ಮಾಡಿದನು - ಹೀಗಿದೆ ನರಸಿಂಹಾವತಾರ.

ಹಿಂದಿನ ಮತ್ಸ್ಯ, ಕೂರ್ಮ, ವರಾಹಗಳಿಗಿಂತ ಭಿನ್ನವಾಗಿ ಮೃಗ - ಮನುಷ್ಯನ ದೇಹವಾಗಿ ಮುಂದಿನ ಅವತಾರಗಳು ಪೂರ್ಣ ನರನದಾಗಿರಲು, ಪರಿವರ್ತನೆಯ ಸಂಧಿ ಅವತಾರವಾಗಿರುತ್ತದೆ. ಎರಡು ಸ್ವಭಾವಗಳೂ ಇರುತ್ತವೆ. ಶ್ರೀ ನರಸಿಂಹನು ಪರಮ ಕರುಣಾಳು. ಇವನ ಮಂಗಳ ಸ್ತೋತ್ರವು ಬಹಳ ಉಪಯುಕ್ತ, ಪರಿಣಾಮಕಾರಿ, ನರಸಿಂಹಸ್ವಾಮಿಯ ಅವತಾರ ಸ್ತೋತ್ರವಿಲ್ಲಿದೆ ನೋಡಿ -

*ಓಂ|| ಮಂಗಳಂ ಸ್ತಂಭಡಿಂಭಾಯ ಮಂಗಳಂ ಮೃತ್ಯುಮೃತ್ಯವೇ |*
*ಮಂಗಳಂ ರೌದ್ರರೂಪಾಯ ನರಸಿಂಹಾಯ ಮಂಗಳಂ ||1||*

*ಹಿರಣ್ಯಕಶಿಪುಂ ಹತ್ವಾ ದೈತ್ಯೇಂದ್ರಂ ದೇವಕಂಟಕಂ |*
*ಜಗದ್ರಕ್ಷಣಧುರ್ಯಾಯ ಜಗದ್ಬೀಜಾಯ ಮಂಗಳಮ್ ||2||*

*ಪ್ರಹ್ಲಾದಸ್ತುತಸಂತುಷ್ಟ ಪ್ರಸನ್ನ ನಿಜಮೂರ್ತಯೇ |*
*ವರಾಭಯಹಸ್ತಾಯ ವರದಾಯಾಸ್ತು ಮಂಗಳಮ್ ||3||*

ಕರಾಗ್ರೈರ್ವಜ್ರ ಸಂಸ್ಪರ್ಶೈರ್ನಖರೈಃ ಶತ್ರುದಾರಿಣೇ ।
ತೀಕ್ಷ್ಣದಂಷ್ಟ್ರಾಯ ತತ್ತ್ವಾಯ ತಾರ್ಕ್ಷ್ಯವಾಹಾಯ ಮಂಗಳಮ್ ।।4।।
ನರಕಂಠೀರವಾಕಾರವ್ಯಕ್ತಾತ್ಯುಗ್ರವಿಭೂತಯೇ ।
ಮೃಗೇಂದ್ರಾಯ ನರೇಂದ್ರಾಯ ದೈವತೇಂದ್ರಾಯ ಮಂಗಳಮ್ ।।5।।
ಕಿರೀಟಹಾರಕೇಯೂರಕುಂಡಲಾಲಂಕೃತಾಯ ಚ ।
ಕೋಟಿಸೂರ್ಯಪ್ರಕಾಶಾಯ ದೇವಸಿಂಹಾಯ ಮಂಗಳಮ್ ।।6।।
ತ್ರಿಯುಗಾಯ ತ್ರಿಪುಷ್ಠಾಯ ತ್ರಿಗುಣಾಯ ತ್ರಿಮೂರ್ತಯೇ ।
ನರಕೇಸರಿರೂಪಾಯ ಲಕ್ಷ್ಮೀಲೋಲಾಯ ಮಂಗಳಮ್ ।।7।।
ಮತ್ಸ್ಯಕಚ್ಛಪವಾರಾಯ ರಾಮ ವಾಮನ ಮೂರ್ತಯೇ ।
ರಾಮಕೃಷ್ಣಾತ್ಮನೇ ಬೌದ್ಧ ಕಲ್ಕಿ ಸಿಂಹಾಯ ಮಂಗಳಮ್ ।।8।।
ಸರ್ವಬೀಜಾಯ ಸತ್ತ್ವಾಯ ಸರ್ವಾಧಿಷ್ಠಾನ ಮೂರ್ತಯೇ।
ಸರ್ವೇಶ್ವರಾಯ ಸರ್ವಸ್ಮೈ ಸತ್ಯಸಿಂಹಾಯ ಮಂಗಳಮ್ ।।9।।
(ನವರತ್ನ ಮಾಲಿಕಾ)

ಶ್ರೀ ಶ್ರೀ ಶ್ರೀ ಶೀಬೀ ನರಸಿಂಹ ಸ್ವಾಮಿಯ ಮಂಗಳ ಸ್ತೋತ್ರವಿದು ಹೀಗಿದೆ -

ಮಂಗಳಂ ಹರಿಶ್ರೀ ಕಂಬದ ನರಸಿಂಹನಿಗೇ
ಶೀಬೀಪುರದಲ್ಲಿ ವಾಸಮಾಡುವ
ಶ್ರೀವರ ನರಸಿಂಹಗೇ ।। ಮಂಗಳಂ ಹರಿ ಶ್ರೀ ।।1।।
ಮಂಗಳಂ ಹರಿ ಶ್ರೀ ಅಂಬುಜನಯನನಿಗೇ
ಲೀಲೆಯಿಂದಲಿ ಭಕ್ತನ ಕಾಯ್ದ
ಶ್ರೀವರ ನರಸಿಂಹಗೇ ।। ಮಂಗಳಂ ಹರಿ ಶ್ರೀ ।।2।।
ಮಂಗಳಂ ಹರಿ ಶ್ರೀ ಅಂಬುಜನಾಭನಿಗೇ
ಲೋಕನಾಯಕ ಪ್ರೀತಿ ವಲ್ಲಭ
ಶ್ರೀ ವರ ನರಸಿಂಹಗೇ ।। ಮಂಗಳಂ ಹರೀ ಶ್ರೀ ।।3।।
ಮಂಗಳಂ ನರ ಶ್ರೀ ಸಿಂಹದ ಮುಖದವಗೇ
ಲೋಕನಾಯಕಿ ಚಂದಿರವದನೇ
ಪ್ರಹ್ಲಾದ ವರದನಿಗೇ ।। ಮಂಗಳಂ ಹರಿ ಶ್ರೀ ।।4।।

*ಮಂಗಳಂ ಹರಿ ಶ್ರೀ ಶೀಬಿ ನರಸಿಂಹಗೇ*
*ಮಂಗಳಾರತಿ ತಂದು ಬೆಳಗಿರಿ*
*ಮಂಗಳ ನರಹರಿಗೇ ॥ ಮಂಗಳಂ ಹರಿ ಶ್ರೀ ॥5॥*

*॥ಓಂ ಶ್ರೀ ಲೋಕಾಂಬಾ ಸಮೇತ ಶ್ರೀ ಶೀಬೀ ಲಕ್ಷ್ಮೀ ನರಸಿಂಹ ಸ್ವಾಮಿ ಪರಬ್ರಹ್ಮಣೇ ನಮಃ ॥*

## ಕರುಣಾಳು ನಾರಾಯಣ

ವೈಕುಂಠಪುರವಾಸಿ ಮಹಲಕುಮಿರಮಣ
ಭಕುತ ಭೃತ್ಯರ ಕಾವ ರಮಣಿರಮಣ ॥
ಸನಕಾದಿ ಮುನಿಗಳ ಉಗ್ರಶಾಪವ ಕೇಳಿ
ವನಜನಾಭನ ಭೃತ್ಯರವರನ ಪಾದಕೇಬೀಳುತ
ಇನಿತು ಘೋರ ಬವಣೆಯ ಬಿಡಿಸೆಂದಳುತಲೇ
ಅನುಪಮದ ಪ್ರೀತಿಯಾಕ್ಷಣದಿ ತೋರಿದ ॥1॥

ಭೃತ್ಯ ಭೃತ್ಯರ ಸೇವೆಯ ಅಷ್ಟಿಷ್ಟೆಂದು ಎಣಿಸದೆ
ಸತ್ಯನಾರಾಯಣಸ್ವಾಮಿ ರೂಪಛಾಯೆ ಎನ್ನದೆ
ನಿತ್ಯನಾರಾಯಣ ಭಕ್ತಗೋಸುಗ ಏನ ನೋಡದೆ
ಭೃತ್ಯನಾ ದೇಹವ ನಾಟ್ಯವಾಡಿದ ॥2॥

ಭಕ್ತನಿಗೆ ಬ್ರಹ್ಮರೂಪದಿ ವರಕೊಡುತಲವನ
ಶಕ್ತನ ಮಾಡಿ ತನ್ನ ಎದುರಾಡಲೂ
ಮುಕ್ತಿ ಕೊಡಲು ತಾನೇ ತನ್ನಂಶದಲಿ
ಯುಕ್ತ ಪುತ್ರನಾದ ರೀತಿಯ ತಿಳಿದ ॥3॥

ಇಂತಿಂಥ ಕೋಪ ತಾಪಗಳ ಹಣಿದು
ಎಂತೆಂಥ ರೂಪಗಳ ಒಡನೆ ತಾಳುತ
ಸಂತತ ಭಕ್ತರನು ಸಲಹುತ
ಎಂತಿಷ್ಟು ಪ್ರೀತಿಯ ಪಡೆದೆಯೋ ॥4॥

ಇಂತು ಈ ಪರಿ ತನಗೆ ತಾನೇ ಭೃತ್ಯನಾಗುತ
ಕಂತುಪಿತ ನರಹರಿ ಶಾಪತಾಪ ಪರಿಹರಿಸುತ
ಎಂತಾದರಾಗಲಿ ಶತ್ರು ಮಿತ್ರ ಭಾವದಲಿ
ಶಾಂತಿ ನೆಲೆಮಾಡಿ ಸಲುಹುವ ॥5॥

## ಶ್ರೀ ನರಸಿಂಹಾವತಾರವು

ಹರಿಯವತರಿಸಿದ ಹರುಷದಲೀ। ನಮ್ಮ ನರ
ಹರಿಯವತರಿಸಿದ ಕಂಬದಲೀ ॥ಪ॥
ಕಂದ ಪ್ರಹ್ಲಾದನ ಮೊರೆಯನು ಕೇಳುತ
ನರ ಹರಿಯವತರಿಸಿದ ಕಂಬದಲೀ॥ಅ । ಪ॥

ದುರುಳ ದೈತ್ಯನು
ವರ ಕಂಬವನೇ
ಹೊಡೆದಾಕ್ಷಣದಲೆ
ಹರಿಯವತರಿಸಿದ । 1

ಢಣ ಢಣ ಛಟ ಛಟ
ಫಣ ಫಣ ಫಣ್‌ರೆಂದು
ಫಟ ಫಟ ಭಡ ಭಡ
ಠಣ್ ಠಣ್ ಠಣ್ಣೆನ್ನುವ । ಕಂಬದಲೀ ಹರಿ 2

ಕಂಬವು ಬಿರಿಯುತ
ಪುಡಿಪುಡಿಯಾಗಲು
ದುರುಳ ಹಿರಣ್ಯನ
ರಕ್ತವ ಹೀರಲು । ಹರಿ 3

ನರಮೃಗರೂಪದಿ
ಉರಿಯುತ ಕೋಪದಿ
ಕಿಡಿಯನು ಕಾರುತ
ಸಿಡಿಯುತ ಹಾರುತ । ಹರಿ 4

ಹಾರಿದ ನರಹರಿ
ಬೀಸಿದ ಗದೆಯನು
ಹಿಡಿದನು ಖಡ್ಗವ
ಫಳ ಫಳದಿಂದಲೀ । ಹರಿ 5

ಆಯುಧವೆಲ್ಲವೂ
ಪುಡಿ ಪುಡಿಯಾದವು
ನರಹರಿ ಹಾರಿದ
ದೈತ್ಯನು ಓಡಿದ ॥ ಹರಿ 6

2

ಉಕ್ಕಿತು ಕೋಪವು ಸಿಕ್ಕಿದ ದೈತ್ಯನು
ಸೊಕ್ಕಿನ ಭಾವದಿ ಚಕ್ಕನೆ ಹಾರಿದ ।
ಫಕ್ಕನೆ ನೆಗೆಯಿತು ಕುಕ್ಷಿಯ ಸಿಂಹವು
ಪಕ್ಕಕೆ ಓಡಿದ ಭಕ್ತನ ತಂದೆಯು ॥ 1

ಘುಡು ಘುಡು ಘುಡು ಘುಡು ಎನುತಲಿ ನರಹರಿ
ಫಳ ಫಳ ಹೊಳೆಯುತ ಸಿಂಹದ ರೂಪದಿ ।
ಛಂಗನೆ ಛಂಗನೆ ಹೊಳೆಯುತ ಸಿಂಹದ ರೂಪದಿ ।
ಹಿಡಿಯಲು ದೈತ್ಯ ಓಡಿದ ಹೆದರುತ ॥ 2

ಹೀಗೆಯೆ ಆಯಿತು ಭೀಕರ ಕಾಳಗ
ಬೇಗೆಯು ಸಿಡಿಯಿತು ರಕ್ಕಸನೋಲಗ ।
ಆಗಿಯೇ ಹೋಯಿತು ಪುಡಿ ಪುಡಿಯೋಲಗ
ಯಾಗವೇ ಆಯಿತು ಗುಡುಗಿನ ಕಾಳಗ ॥ 3

ಹರಿಯವತರಿಸಿದ ಕೋಪದಲೀ । ನರ
ಹರಿಯವತರಿಸಿದ ಕಂಬದಲೀ ॥

ಸೋಲೂ ಗೆಲವೂ ಬರಲೇ ಇಲ್ಲಾ
ಸಮ ಸಮವಾಗಿಯೇ ಸಿಂಗವು ದೈತ್ಯ
ಮೇಲೋ ಕೆಳಗೋ ಕೆಳಗೋ ಮೇಲೋ
ಬೀಳುತ ಏಳುತ ಕಳೆದರು ಕಾಲವ ॥ 4

3

ಬಂತಿದೋ ಬಂತಿದು ಕಾಲವು
ಹಗಲಿರುಳೆನ್ನದ ಕಾಲವು
ಹಿರಣ್ಯನದುರಿದ ಕಾಲವು
ಬೊಮ್ಮನೇ ಬರೆದ ಕಾಲವು ॥ 1

ಒಳೆ ಹೊರಗಿಲ್ಲದ ಕಾಲವು
ನೆಲದೊಳಗಿಲ್ಲದ ಕಾಲವು
ಮೇಲ್ಮೇಲಿಲ್ಲದ ಕಾಲವು
ಹಿರಣ್ಯನೊಲ್ಲದ ಕಾಲವು ॥ 2

ಧರಣಿಯದುರಿದ ಕಾಲವು
ಹಿರಣ್ಯನದುರಿದ ಕಾಲವು
ಹರಿಯವತರಿಸಿದ ಕಾಲವು
ಹರಿಯುಗ್ರನಾದ ಕಾಲವು ॥ 3

4

ಉಗ್ರರೂಪನಾದ । ಶ್ರೀ ಹರಿ । ಉಗ್ರರೂಪನಾದ
ಸಿಂಹರೂಪನಾದ । ಶ್ರೀ ಹರಿ । ಸಿಂಹರೂಪನಾದ ॥

ಕ್ರೋಧಾವೇಶದಿ ಕುಣಿಯುತ
ಕೋಪಾಟೋಪದಿ ನೆಗೆಯುತ
ರೋಷಾವೇಶದಿ ನಲಿಯುತ
ಆಶಾ ಪಾಶವ ಕಡಿಯುತ ॥ ಉಗ್ರ 1

ದಾನವ ರಾಜನು ನಡುಗಿದ
ಮಾನವ ಸಿಂಹನು ತುಡುಕಿದ
ದೇವರ ದೇವನು ಗುಡುಗಿದ
ಕಂಬದ ನರಹರಿ ಸಿಡುಕಿದ ॥ ಉಗ್ರ 2

ಮಾನವ ರೂಪವ ಕಳೆಯುತ
ಸಿಂಹದ ರೂಪದಿ ಹೊಳೆಯುತ
ಕೋಪದ ಕಿಡಿಗಳ ಬೆಳೆಸುತ
ದೈತ್ಯನ ಬೆನ್ನಲಿ ಬೀಳುತ ॥ ಉಗ್ರ 3

ಉಗ್ರ ಮುಷ್ಟಿಗಳೆಷ್ಟೆಷ್ಟೋ
ಢಂ ಢಮಾರ್ ದುಡುಂ ಧಡೀರ್
ಫಳ್ ಫಳಾರ್ ಠಣ್ ಠಣಾರ್
ಭಡ್ ಭಡಾರ್ ಢಂ ಢಂ ಎನ್ನುತ ॥ ಉಗ್ರ 4

ದೈತ್ಯನ ಸೊಂಟದಿ ಹಿಡಿಯುತ
ಅಲ್ಲಿಂದಿಲ್ಲಿಗೆ ನೆಗೆಯುತ
ಇಲ್ಲಿಂದಲ್ಲಿಗೆ ಹಾರುತ
ಭೈರವ ನೃತ್ಯವ ಮಾಡುತ ॥ ಉಗ್ರ 5

5

ನಾಟ್ಯವಾಡಿದನು ನರಹರಿಯು । ಕಾಲಭೈರವ
ನಾಟ್ಯವಾಡಿದನು ।
ದಾನವನ ದೇಹವ ಪಿಡಿದು
ನಾಟ್ಯವಾಡಿದನು ॥ ಪ॥

ಆ ಲೋಕ ಈ ಲೋಕ ಹದಿನಾಲ್ಕು ಲೋಕಗಳು
ಒಂದೊಂದು ರೀತಿಯಲಿ ತಲ್ಲಣಿಸಿದವು ॥ 1

ಆ ದೇವ ಈ ದೇವ ಮಹಾದೇವ ದೇವಿಯರು
ಹಿಂದೆಂದು ನೋಡದ ಮುಂದೆ ಕಾಣದ ರೀತಿಯಲಿ ॥ 2

ಉಗ್ರರೂಪದ ನರಹರಿಯು ಅತ್ಯುಗ್ರಭಾವದಿ ತಾನು
ಸುತನಿತ್ತ ವರದಂತೆ ರಕ್ಕಸನ ಶಿರ ಪಿಡಿದು ॥ 3

6

ದುರುಳ ದೈತ್ಯನ ಶಿರವನ್ನು ಪಿಡಿದು
ವರಬಾಗಿಲೊಳಾಕ್ಷಣವೆ ಕುಳಿತು ನಿಜ ।
ವರಾಂಕದಲಿ ಖಳನ ಕೆಡಹುತ ಮೃಗ
ನರ ನಖಗಳನೆ ಅಸ್ತ್ರಮಾಡಿದನು ॥ 1

ದೈತ್ಯನಲ್ಲಾಡದ ರೀತಿಯಲಿ ಪಿಡಿದು
ಮೃತ್ಯು ದೈತ್ಯನ ಬಿಡದಂತೆ ಮಾಡಿ ।
ಅತ್ಯುತ್ತಮದ ನಖಾಗ್ರದಲ್ಲವನ
ಎತ್ತೆತ್ತಿ ಜಠರವನೆ ಸೀಳಿದನು ॥ 2

ಸೀಳಿದಾಕ್ಷಣದಲ್ಲೊಳಗಿಂದ
ಕರುಳಿನ ಸರಣಿಗಳನೆಳೆದು ।
ಮಾಲೆ ಮಾಲೆಗಳನೆತ್ತುತ್ತ
ತನ್ನ ಕೊರಳಲ್ಲಿ ಧರಿಸಿದನು ॥ 3

ಕರುಳಿನ ಮಾಲೆ ಧರಿಸುತ ಕರಾಳ
ಮೂರುತಿ ದುರುಳನ ರಕ್ತವನು
ಹೀರುತ ಸಿಂಹರೂಪದ ನರ
ವರ ಸಿಂಹ ನಾಮವ ಬಲಿಸಿದನು ॥ 4

7

ಮೂರು ಲೋಕವೇ ನೋಡಿತೀ
ಉರುತರದುಗ್ರ ನರಹರಿಯು ।
ಭೂರಿ ದೈತ್ಯನ ಘೋರ ಸಂಹಾರವನು
ಸಾರಿದಾಕ್ಷಣವೇ ಹರಿಯ ಶಾಂತಮಾಡಿದರು ॥ 1

ಶಾಂತ ಮಾಡುವುದ್ಹೇಗೆನೆಂತ
ಹರಿಸುತನ ಮುಂದಿಟ್ಟು ದೇವತೆಗಳು
ನರಹರಿಗೆ ಸಾಸಿರ ನಾಮವನೆ
ಅತಿ ಭಯ ಭಕ್ತಿ ಶ್ರದ್ಧೆಯಿಂದ್ಹೇಳಿದರು ॥ 2

ಬ್ರಹ್ಮದೇವನು ತಾನು ತನ್ನ ಪಿತನಿಗೆ
ಭ್ರಮೆ ಸಂತೋಷ ಭಯ ಭಕ್ತಿಯಿಂದಲಿ ।
ಪಾಡಿ ಪೊಗಳಿ ಕೊಂಡಾಡುತಾಕ್ಷಣದಿ
ಉಗ್ರರೂಪವ ತ್ಯಜಿಸೆಂದು ಬೇಡಿದನು ॥ 3

ಆ ಸಿಂಹ ಈ ಸಿಂಹ ಬಣ್ಣ ಬಣ್ಣದ ಸಿಂಹ
ಎಲ್ಲೆಲ್ಲಿ ನೋಡಿದರಲ್ಲಿ ಇರುವ ಸಿಂಹ ।
ಉಗ್ರರೂಪವೀ ಯೋಗ ಭೋಗದ ಸಿಂಹ
ಅಸಮಾನ್ಯ ಸಿಂಹವೆನುತ ಹೊಗಳಿದನು ॥ 4

ಮಹದುಗ್ರ ನರಹರಿ ಶಾಂತನಾಗುತ
ಮಹಲಕ್ಷ್ಮಿಯನ್ನಂಕದಲಿ ಪಿಡಿಯುತ
ಮಹ ಭಕ್ತ ಪ್ರಹ್ಲಾದನ ಪೊರೆಯುತ
ಮಹದಾನಂದವಿತ್ತನು ನೆರೆದವರಿಗೆ ॥ 5

ನಿಮ್ಮ ಭಕ್ತಿಗೆ ಮೆಚ್ಚಿದೆನು
ನಿಮ್ಮೆಲ್ಲರಿಷ್ಟಾರ್ಥ ಸಿದ್ಧಿಪುದು
ಹೆಚ್ಚೇನು ನಾ ನೆನೆದವರ ಬೆನ್ನಲ್ಲಿ
ಕಾಯುವೆನು ಸಂಶಯನ ಬಿಡಿರೆಂದ ॥ 6

ಪರಿ ಪರಿಯ ರೀತಿಯಲಿ ನೆರೆದವರೆಲ್ಲ ಪೊಗಳುತ
ತರಳ ಪ್ರಹ್ಲಾದನಭಿಷೇಕವನೇ ಮಾಡಿದರು ।
ವರದ ನರಹರಿ ಸಿರಿ ಸಹಿತ ಸುರರೊಡನೆ
ತೆರಳುತ ಸೇರಿದನು ಕ್ಷೀರ ಸಾಗರವ ॥ 7

8

ಇಂತು ನರಹರಿಯವತಾರವನು
ಸಂತಸದಿ ಮನದೊಳಗಿರಿಸಿ ।
ಕಂತುಪಿತನನು ಮರೆಯಲಾಗ
ದಂತಿರಲೆಂದರ್ಪಿಸುವೆ ಜನಗಣಕೆ ॥ 1

ಬಂದ ಭಾವವನೆಲ್ಲ ಹರಿ ಕರುಣೆ
ಯೆಂದರಿತು ಮನದ ದಾರದಲಿ ಸೇರಿಸುತ
ಲೊಂದು ಹಾರವ ಮಾಡಿ ಹರಿಸೇವೆ
ಯೆಂದರ್ಪಿಸುವೆ ಹರಿ ಚರಣದಲಿ ॥ 2

ವರ ಕವಿಯ ಹಿರಿಮೆಯ ಕಾವ್ಯವೆಂ
ದರಿಯಲಾಗದು ಪರಿಪರಿಯ
ತರದಲಿ ನೋಡಿದೊಡೆ ಗುರು
ತರದ ಲೋಪ ದೋಷಗಳಿರಲಹುದು ॥ 3

ಶಿರದ ಶಿಬಿಪುರದಲ್ಲಿ ಗುರುತರದಿ
ಮೆರೆಯುತಿಹ ನರಹರಿಯ ಕರುಣೆಯಿಂ
ಸುರಿದ ಧಾರೆಯನೆ ಪದ್ಯರೂಪದಿ
ನರ ಹರಿಯ ಮೂರುತಿಗರ್ಪಿಸುವೆ ॥ 4

9

ಮಂಗಳವು ಶಿಬಿಪುರದರಸ ನರಹರಿಗೆ
ಮಂಗಳವು ಲೋಕಾಂಬೆಯರಸನಿಗೆ ।
ಮಂಗಳವು ಸಿರಿಲಕುಮಿ ವಲ್ಲಭಗೆ
ಮಂಗಳವು ಮಂಗಳವು ಜಯಮಂಗಳ ॥ 1

10

ಹರಿಯವತರಿಸಿದ ಹರುಷದಲೀ । ನಮ್ಮ ನರ
ಹರಿಯವತರಿಸಿದ ಕಂಬದಲೀ
ತರಳ ಪ್ರಹ್ಲಾದನ ಮೊರೆಯನು ಕೇಳುತ
ಹರಿಯವತರಿಸಿದ ಕಂಬದಲೀ ॥

ಇಂತು ನರಸಿಂಹಾವತಾರದ ಪದ್ಯಗಳು ಸಮಾಪ್ತವು

*ವಿಕ್ರಮಾಕ್ರಾಂತಲೋಕಾಯ ವಾಮನಾಯ ಮಹೌಜಸೇ ।*
*ನಮೋ ಭಾರ್ಗವರಾಮಾಯ ರಾವಣಾಂತಕರಾಯ ಚ ॥131॥*
*(781-785)*

781. **ವಿಕ್ರಮಾಕ್ರಾಂತಲೋಕಾಯ ನಮಃ**

ವಿಕ್ರಮ - ಎಂದರೆ ತನ್ನ ಪ್ರತಾಪದಿಂದ ಅಥವಾ ವಿಚಿತ್ರವಾಗಿ ಕ್ರಮಿಸುವುದರಿಂದ,

ಆಕ್ರಾಂತ - ಎಂದರೆ ವಶಪಡಿಸಿಕೊಳ್ಳುವುದು ಅಥವಾ ತನ್ನ ಗಡಿಯನ್ನು ವೃದ್ಧಿಪಡಿಸುವುದು / ವೃದ್ಧಿ ಪಡಿಸಿದ,

ಲೋಕಾಯ - ಲೋಕಗಳನ್ನು ಹೊಂದಿದವನು.

ಎಂದರೆ ತನ್ನದೇ ಆದ ವಿಚಿತ್ರರೂಪದಿಂದ, ವಿಚಿತ್ರ ಪ್ರಕಾರವಾಗಿ ಸಕಲ ಲೋಕಗಳನ್ನು ವಶಪಡಿಸಿಕೊಂಡವನು ಯಾರೋ ಅವನು - ತ್ರಿವಿಕ್ರಮನು - ಮಹಾವಿಷ್ಣುವಿನ ತ್ರಿವಿಕ್ರಮಾವತಾರ.

ಬಲಿಚಕ್ರವರ್ತಿಯನ್ನು ಗೆಲ್ಲಲು, ದೇವತೆಗಳನ್ನು ಕಾಪಾಡಲು, ಮಹಾವಿಷ್ಣುವು ಅದಿತೀ ದೇವಿಯಲ್ಲಿ ಅವತಾರವನ್ನು ಮಾಡಿದನು.

ಬಲಿಯು ದಾನ ಶೂರನಾದ ಸಾತ್ವಿಕ ರಾಕ್ಷಸ ರಾಜನಾದ್ದರಿಂದ ಅವನನ್ನು ಬಹಳ ಬುದ್ಧಿವಂತಿಕೆಯಿಂದ ವಿಷ್ಣುವೂ ಗೆಲ್ಲಬೇಕಾಯಿತು.

ಬಲಿಯು ಪ್ರಹ್ಲಾದನ ಮೊಮ್ಮಗ. ಪರಮಾತ್ಮನ ಪರಮಭಕ್ತ. ಆದರೆ ಇಂದ್ರನಾಗಬೇಕೆಂಬ ಇವನ ಅಭಿಲಾಷೆಯು ವಾಮನಾವತಾರಕ್ಕೆ ಕಾರಣವಾಯಿತು. ಬಲಿಯು ಪರಮಶ್ರೇಷ್ಠ ದಾನಿ, ಸತ್ಯವಂತ, ದಾನದ ಗುಣ, ಸತ್ಯವಾದಿಯ ಗುಣಗಳನ್ನು ಉಪಯೋಗಿಸಿಕೊಂಡು ವಟು ವಾಮನನು ಬಲಿಯನ್ನು ಗೆದ್ದನು. ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಕೇಳಿ ಸತ್ಯಲೋಕದವರೆಗೆ ಒಂದು ಹೆಜ್ಜೆಯನ್ನು, ಭೂಲೋಕದಿಂದ ಪಾತಾಳ

ಲೋಕದವರೆಗೆ ಇನ್ನೊಂದು ಹೆಜ್ಜೆಯನ್ನು ಅಳೆದು ಮೂರನೆಯ ಹೆಜ್ಜೆಯನ್ನು ಬಲಿಯ ತಲೆಯ ಮೇಲೆ ಇಟ್ಟನು. ಬಲಿಯನ್ನು ಪಾತಾಳ ಲೋಕಕ್ಕೆ ತಳ್ಳಿ, ಅವನ ಗುಣಗಾನ ಮಾಡಿದನು. ದಾನಮಾಡುವ ಗುಣವನ್ನೂ, ಸತ್ಯಸಂಧತೆಯನ್ನೂ ಹೊಗಳಿ ಬಲಿಯನ್ನು ಪಾತಾಳ ಲೋಕದಲ್ಲಿ ವಾಮನನು ಕಾಪಾಡಿದನು ಮತ್ತು ದೇವೇಂದ್ರ ಪದವಿಯನ್ನು ಅನುಗ್ರಹಿಸಿದನು.

782. ವಾಮನಾಯ ನಮಃ

ಬಲಿಯನ್ನು ಚತುರತೆಯಿಂದ ಗೆಲ್ಲಲು ಮಹಾವಿಷ್ಣುವು ವಾಮನನ ರೂಪದಲ್ಲಿ (ಕುಬ್ಜ ಮಾನವ) ತನ್ನ ಸ್ವ-ಇಚ್ಛೆಯಿಂದ ಅವತರಿಸಿದನು. ವಟು ವಾಮನನಿಗೆ ಸಕಲ ದೇವ ದೇವತೆಗಳು ತಮ್ಮ ತಮ್ಮ ಅಮೂಲ್ಯ ವಸ್ತುಗಳಿಂದ ಬ್ರಹ್ಮೋಪದೇಶದ ಸಮಯದಲ್ಲಿ ಅಲಂಕರಿಸಿದರು. ವಟುವು ತನ್ನ ದಂಡ, ಕಮಂಡಲ, ಛತ್ರಿ ಮುಂತಾದುವುಗಳನ್ನು ಹಿಡಿದುಕೊಂಡು ಬಲಿಯ ಯಜ್ಞಶಾಲೆಗೆ ಬಂದನು. ಬಲಿಯನ್ನು ಮೂರಡಿ ನೆಲದ ದಾನಕ್ಕೆ ಮಾತಿನ ಚತುರತೆಯಿಂದ ಕಟ್ಟುಮಾಡಿದನು. ನಂತರ ಲೋಕಗಳನ್ನೆಲ್ಲ ತನ್ನ ಎರಡು ಹೆಜ್ಜೆಗಳಲ್ಲಿ ಅಳೆದು ಮೂರನೆಯ ಹೆಜ್ಜೆಯನ್ನು ಬಲಿಯ ತಲೆಯ ಮೇಲೆ ಇರಿಸಿದನು. ವಟು ವಾಮನನು ತ್ರಿವಿಕ್ರಮ ರೂಪದಲ್ಲಿ ಬೆಳೆದನು.

783. ಮಹೌಜಸೇ ನಮಃ

ಮಹಾ - ಓಜಸೇ - ನಮಃ - ಮಹತ್ತಾದ ತೇಜಸ್ಸುಳ್ಳವನು, ಆತ್ಮನು ಪರಮಾತ್ಮನ ತೇಜಸ್ಸಿನ ಅಂಶದಿಂದ ಬಂದವನು.

ಸಕಲ ತೇಜಸ್ಸಿನ ಗಣಿಯಾದ ಪರಮಾತ್ಮನು ಮಹತೋ ಮಹೀಯಾನ್ ಎಂಬಂತೆ ಮಹಾಓಜಸ್ಸನ್ನು ಹೊಂದಿರುವವನು. ಈ ರೀತಿ ಓಜಸ್ಸನ್ನು ಹೊಂದಿರುವವರಲ್ಲಿ ಪರಮೋತ್ತಮನು ಪರಮಾತ್ಮನೇ. ಈ ಕಾರಣದಿಂದ ಅವನನ್ನು ಮಹೌಜಸೇ ನಮಃ ಎಂದು ನಮಸ್ಕರಿಸುತ್ತೇವೆ.

784. ಭಾರ್ಗವರಾಮಾಯ ನಮಃ

ಭಾರ್ಗವರಾಮ - ಭೃಗುಮುನಿಗಳ ವಂಶದಲ್ಲಿ ಜಮದಗ್ನಿಯ ಮಗನಾಗಿ ಜನಿಸಿದ ರಾಮನು ಪರುಶುರಾಮ, ಭಾರ್ಗವರಾಮ ಎಂದು ಕರೆಯಲ್ಪಡುತ್ತಾನೆ. ಪರುಶುರಾಮನು ಕೊಡಲಿಯನ್ನೇ ತನ್ನ ಆಯುಧವಾಗಿ ಉಪಯೋಗಿಸಿ ಮೂರು ಸಲ ಭೂ ಪ್ರದಕ್ಷಿಣೆಮಾಡಿ ಕ್ಷತ್ರಿಯರನ್ನು ಸಂಹಾರಮಾಡಿದನು. ಶ್ರೀರಾಮನು - ಅಂದರೆ ದಶರಥ ಮಗನಾದ ರಾಮನು ಪರಶುರಾಮನ ಸಕಲ ವೈಷ್ಣವ ತೇಜಸ್ಸನ್ನು ಎಳೆದುಕೊಂಡನು. ನಂತರ ಪರಶುರಾಮನು ಪರ್ವತ ಪ್ರದೇಶಕ್ಕೆ ತಪಸ್ಸಿಗೆ ಹೋದನು.

ಮುಂದೆ ಕರ್ಣನಿಗೆ ಅಸ್ತ್ರಶಾಸ್ತ್ರವನ್ನು ಹೇಳಿಕೊಟ್ಟನು. ಕರ್ಣನು ರಾಜಪುತ್ರನೆಂದು ಸತ್ಯವನ್ನು ಹೇಳದೆ ಧನುರ್ವಿದ್ಯೆಯನ್ನು ಕಲಿತಿದ್ದರಿಂದ ಪರಶುರಾಮರ ಶಾಪಕ್ಕೆ ಗುರಿಯಾದನು. ಏಕೆಂದರೆ ಕ್ಷತ್ರಿಯರು ಪರಶುರಾಮರ ಶತ್ರುಗಳು - ಭಾರ್ಗವರಾಮಯ ನಮಃ.

785. ರಾವಣಾಂತಕರಾಯ ನಮಃ

ಶ್ರೀರಾಮನು ರಾವಣನನ್ನು ಸಂಹಾರಮಾಡಿದರಿಂದ ಈ ಹೆಸರು - ರಾವಣಾಂತಕರನು.

ರಾವಣ ಕುಂಭಕರ್ಣರು ಜಯವಿಜಯರ ಶಾಪದ ಪ್ರತಿರೂಪರು. ಮಹಾವಿಷ್ಣುವು ತನ್ನ ಮಾತಿನಂತೆ ರಾವಣನನ್ನು ಸಂಹರಿಸಿ ಅವನ ಒಂದು ಜನ್ಮವನ್ನು ಕೊನೆಮಾಡಿದನು - ಅಥವಾ ಜನ್ಮದ ದೇಹದಿಂದ ಬಿಡುಗಡೆ ಮಾಡಿದನು,

ಅಥವಾ

ಜೀವಿಗಳ ಸಂಸ್ಕಾರದಲ್ಲಿರುವ ದುಷ್ಟಶಕ್ತಿಗಳನ್ನು ಪರ್ಯವಸಾನ ಮಾಡುವುದರಿಂದ - ರಾವಣಾಂತಕರಾಯ ನಮಃ.

*ನಮಸ್ತೇ ಬಲರಾಮಾಯ ಕಂಸಪ್ರಧ್ವಂಸಕಾರಿಣೇ ।*
*ಬುದ್ಧಾಯ ಬುದ್ಧರೂಪಾಯ ತೀಕ್ಷ್ಣರೂಪಾಯ ಕಲ್ಕಿನೇ ॥132॥*
*(786-791)*

786. ಬಲರಾಮಾಯ ನಮಃ

ಬಲರಾಮ - ಬಲರಾಮನು ಶ್ರೀಕೃಷ್ಣನ ಅಣ್ಣ.

ಬಲರಾಮನು ಲಕ್ಷ್ಮಣನ ಅವತಾರ, ಲಕ್ಷ್ಮಣನು ಆದಿಶೇಷನ ಅವತಾರ, ಆದಿಶೇಷನು ಮಹಾವಿಷ್ಣುವಿನ ಪರ್ಯಂಕ, ಸೇವಕ.

ಶ್ರೀಕೃಷ್ಣನು ಶ್ರೀರಾಮನ ಅವತಾರ, ಶ್ರೀರಾಮನು ಮಹಾವಿಷ್ಣು, ಮಹಾವಿಷ್ಣುವು ಆದಿಶೇಷನ ಪರ್ಯಂಕದಲ್ಲಿ ಮಲಗುತ್ತಾನೆ. ಶೇಷನು ತನ್ನ ಸಾವಿರ ಹೆಡೆಗಳಿಂದ ಪರಮಾತ್ಮನನ್ನು ಸದಾ ಸ್ತುತಿಸುತ್ತಿರುತ್ತಾನೆ.

ಬಲ - ಬಲಕ್ಕೆ ಇರುವ ರಾಮ - ಪರಮಾತ್ಮ - ಪರಮಾತ್ಮನಿಗೆ ಪ್ರದಕ್ಷಿಣೆ ಮಾಡುವಾಗ ಬಲದ ಕಡೆಯಿಂದ ತಿರುಗುತ್ತೇವೆ. ಅದರಿಂದ ಬಲದ ಭಾಗವು ಶ್ರೇಷ್ಠವಾದುದು. ಬಲದ ತೊಡೆಯ ಮೇಲೆ ಪತ್ನಿಯು ಕುಳಿತುಕೊಳ್ಳುತ್ತಾಳೆ, ಬಲದ ಕಡೆ ಪತ್ನಿಯು ಇರುತ್ತಾಳೆ.

ಒಮ್ಮೆ ಶಂತನುವಿನ ತಂದೆಯು ಇಂದ್ರಸಭೆಯಲ್ಲಿದ್ದಾಗ ಗಂಗೆಯನ್ನು ಕಾಮದೃಷ್ಟಿಯಿಂದ ನೋಡಿದಾಗ ಇಂದ್ರನು ರಾಜನಿಗೂ ಮತ್ತು ಗಂಗೆಗೂ

ಶಾಪಕೊಟ್ಟನು. ಆ ಕಾರಣದಿಂದ ಶಂತನು ಗಂಗೆಯನ್ನು ಮದುವೆಯಾಗಬೇಕಾಯಿತು.

ಶಂತನುವಿನ ತಂದೆಯು ಒಮ್ಮೆ ಗಂಗೆಯಲ್ಲಿ ಅರ್ಘ್ಯವನ್ನು ಕೊಡುತ್ತಿದ್ದಾಗ ಗಂಗೆಯು ಬಂದು ಮೋಹಿಸಿ ಎಡದ ತೊಡೆಯ ಮೇಲೆ ಕುಳಿತಳು. ಅದರಿಂದ ರಾಜನು ಗಂಗೆಗೆ ಹೇಳಿದನು - ಏನೆಂದರೆ, ನೀನು ಎಡದ ತೊಡೆಯ ಮೇಲೆ ಕುಳಿತಿದ್ದರಿಂದ ಮಗಳಾಗಿ ಸ್ವೀಕರಿಸಿ ನನ್ನ ಸೊಸೆಯನ್ನಾಗಿ ಮಾಡಿಕೊಳ್ಳುತ್ತೇನೆ ಎಂದನು. ಅದರಿಂದ ಎಡದ ತೊಡೆಯು ಮಗಳಿಗೆ ನಿರ್ದಿಷ್ಟವಾದ್ದು.

ಅಥವಾ

ರಾಮ ಎಂದರೆ ಆತ್ಮನಿಗೆ, ಬಲ - ಶಕ್ತಿಯನ್ನು ಕೊಡುವವನು ಯಾರೋ ಅವನು - ಪರಮಾತ್ಮ - ಬಲರಾಮ.

787. **ಕಂಸಪ್ರಧ್ವಂಸಕಾರಿಣೇ ನಮಃ**

ಕಂಸ - ಕಂಸನನ್ನು, ಪ್ರಧ್ವಂಸ - ಸಂಹರಿಸಲು, ಕಾರಿಣೇ - ಕಾರಣನು, ಶ್ರೀಕೃಷ್ಣನು - ಪರಮಾತ್ಮ.

ನಮ್ಮ ಮನಸ್ಸಿನಲ್ಲಿರುವ ದುಷ್ಟಶಕ್ತಿಗಳನ್ನು ಸಂಹರಿಸುವನು - ಬುದ್ಧಿಶಕ್ತಿ - ಧೀಶಕ್ತಿಯೇ ಪರಮಾತ್ಮ.

ದುಷ್ಟಶಕ್ತಿಗಳು - ಕಂಸ, ಇವುಗಳನ್ನು ನಾಶಮಾಡುವನು ಧೀಶಕ್ತಿಯ ರೂಪನಾದ ಪರಮಾತ್ಮ. ಅಥವಾ,

ಆತ್ಮನಿಗೆ ಅಂಟಿಕೊಂಡಿರುವ ಸಂಸ್ಕಾರಗಳನ್ನು ನಾಶಮಾಡುವವನು.

788. **ಬುದ್ಧಾಯ ನಮಃ**

ಬುದ್ಧ - ಎಂದರೆ ಜ್ಞಾನಶಕ್ತಿಯನ್ನು ಸಿದ್ಧಿಸಿಕೊಂಡವನು.

ಬುದ್ಧ - ಎಂದರೆ ಪರಮಾತ್ಮನ ಅವತಾರ.

ಯಾವಾಗ ಪರಮಾತ್ಮನ ಸಾಕ್ಷಾತ್ಕಾರದಿಂದ ಜ್ಞಾನವು ಮನಸ್ಸಿನಲ್ಲಿ ಅಂಕುರವಾಗುವುದೋ ಆಗ ಬುದ್ಧಸ್ಥಿತಿಯನ್ನು ಪಡೆಯುತ್ತೇವೆ.

789. **ಬುದ್ಧರೂಪಾಯ ನಮಃ**

ಬುದ್ಧರೂಪವನ್ನು ಹೊಂದಿರುವವನು - ಆತ್ಮ, ಗೌತಮ ಬುದ್ಧ - ಪರಮಾತ್ಮ.

ಪರಮಾತ್ಮನು ಬುದ್ಧರೂಪವನ್ನು ಹೊಂದಿರುತ್ತಾನೆ.

790. **ತೀಕ್ಷ್ಣರೂಪಾಯ ನಮಃ**

ತೀಕ್ಷ್ಣ - ಎಂದರೆ ಅತ್ಯಂತ ಹರಿತವಾದ, ಖಂಡ ತುಂಡವಾದ ಧೀಶಕ್ತಿಯುಳ್ಳವನು.

ಇಂತಹ ತೀಕ್ಷ್ಣರೂಪ - ಎಂತಹ ಪರಿಸ್ಥಿತಿಯಲ್ಲಿಯೂ ಸಮಾಧಾನ ಚಿತ್ತದಿಂದ ಇರುವವನು - ಸ್ಥಿತಪ್ರಜ್ಞ, ಇದು ಒಂದು ಪರಮಾತ್ಮನ ಭಾವ.

**791. ಕಲ್ಕಿನೇ ನಮಃ**

ಕಲ್ಕಿಯ ಅವತಾರ - ಪರಮಾತ್ಮನ ಅವತಾರ, ಹತ್ತನೆಯ ಅವತಾರ.

*ಆತ್ರೇಯಾಯಾಗ್ನಿನೇತ್ರಾಯ ಕಪಿಲಾಯ ದ್ವಿಜಾಯ ಚ |*
*ಕ್ಷೇತ್ರಾಯ ಪಶುಪಾಲಾಯ ಪಶುವಕ್ತ್ರಾಯ ತೇ ನಮಃ ||133||*
*(792-798)*

**792. ಆತ್ರೇಯಾಯ ನಮಃ**

ಅತ್ರಿಮುನಿಗಳ ಮಗ ಆತ್ರೇಯ ಋಷಿ.

ಅತ್ರಿಮುನಿಗಳು ಸಪ್ತಋಷಿಗಳಲ್ಲಿ ಒಬ್ಬರು, ಅನಸೂಯಾದೇವಿಯ ಪತಿ, ಇವರು ದತ್ತಾತ್ರೇಯರ ತಂದೆ.

ಅನಸೂಯಾ ದೇವಿಯ ಪಾತವ್ರತ್ಯವನ್ನು (ಪಾತಿವ್ರತ್ಯದ ಹಿರಿಮೆ, ಗರಿಮೆಯನ್ನು) ತಿಳಿಯಬೇಕೆಂದು ಬ್ರಹ್ಮವಿಷ್ಣುಮಹೇಶ್ವರರು ಆಶ್ರಮಕ್ಕೆ ಬಂದರು. ಅನಸೂಯೆಯೊಬ್ಬಳೇ ಇದ್ದಾಗ ಬಂದು, ಪ್ರತ್ಯಕ್ಷರಾಗಿ, ಅವಳನ್ನು ನಿರ್ವಾಣದಿಂದ ಹಾಲುಣಿಸಬೇಕೆಂದು ಕೇಳಿದರು. ಆಗ ಅನಸೂಯೆಯು ಅತ್ರಿಮುನಿಗಳ ಪಾದೋದಕವನ್ನು ತಂದು ಅವರಿಗೆ - ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ಪ್ರೋಕ್ಷಿಸಿದಳು. ಆಗ ಈ ಮೂವರೂ ಮೂರು ಎಳೆಯ ಮಗುಗಳಾಗಿ ಆದರು. ಅನಸೂಯೆಯು ಹಾಲುಣಿಸಿ ಅವರನ್ನು ತೃಪ್ತಿಪಡಿಸಿದಳು. ಅತ್ರಿಮುನಿಗಳು ಆಶ್ರಮಕ್ಕೆ ಬಂದಾಗ ಎಲ್ಲವನ್ನು ಅನಸೂಯೆಯು ತಿಳಿಸಿದಳು. ಇಬ್ಬರೂ ಬಹಳ ಸಂತೋಷದಿಂದ ಮಕ್ಕಳನ್ನು ಲಾಲಿಸಿದರು. ಲಕ್ಷ್ಮಿ, ಸರಸ್ವತಿ, ಪಾರ್ವತಿಯರು ತಮ್ಮ ಪತಿಗಳನ್ನು ಹುಡುಕಿಕೊಂಡು ಬಂದರು. ಈ ಮಕ್ಕಳಲ್ಲಿ ತಮ್ಮ ಪತಿಗಳು ಯಾರೆಂದು ಗುರುತಿಸಲಾರದೇ ಅನಸೂಯೆಯೇ ಗರಿಷ್ಠ ಪತಿವ್ರತೆಯೆಂದು ತಿಳಿಸಿ ಅವಳ ಕೃಪೆಯಿಂದಲೇ ಪತಿಗಳನ್ನು ಪಡೆದರು. ಪರಮಾತ್ಮನು ಅನಸೂಯಾ, ಅತ್ರಿಗಳ ಭಕ್ತಿಗೆ ಮೆಚ್ಚಿ ದತ್ತಾತ್ರೇಯ ಎಂಬ ರೂಪದಲ್ಲಿ ತಮ್ಮ ಮೂವರ ಅಂಶಗಳನ್ನಿಟ್ಟು ಹೋದರು.

ದತ್ತಾತ್ರೇಯರು - ಅತ್ರಿ, ಅನಸೂಯೆಯರ ಪುತ್ರ ಮತ್ತು ತ್ರಿಮೂರ್ತಿಗಳ ಅಂಶ - ಇಂತಹ ಆತ್ರೇಯನಾದ ಪರಬ್ರಹ್ಮನಿಗೆ ನಮಸ್ಕಾರಗಳು.

ದತ್ತಾತ್ರೇಯರು ಮುಂದೆ ತಪಸ್ಸುಮಾಡಿ ಅವಧೂತರಾಗಿ ಕ್ರಮಿಸುತ್ತಿದ್ದಾಗ "ಅವಧೂತ ಗೀತಾ" ಎಂಬ ಅತ್ಯಂತ ಉನ್ನತ ಭಾವದ ಗೀತೆಯನ್ನು ರಚಿಸಿದರು. ಇದು ಆತ್ಮನು ಇಹಲೋಕದ ಸಂಸ್ಕಾರಗಳಿಂದ ಬಿಡಿಸಲ್ಪಟ್ಟು ಪರಮಾತ್ಮನನ್ನು

ಹೊಂದಿ ಆತ್ಮ - ಪರಮಾತ್ಮ - ರ ಏಕತೆಯನ್ನು ವ್ಯಕ್ತಪಡಿಸುತ್ತದೆ. ಆತ್ಮನ ಆ ಪರಿಸ್ಥಿತಿಯಲ್ಲಿ ಯಾರು ಯಾರನ್ನು ಸೇರಬೇಕು, ಪೂಜಿಸಬೇಕು, ನಮಸ್ಕರಿಸಬೇಕು? ಎಂದು ಮುಂತಾದ ಭಾವ, ಜಿಜ್ಞಾಸೆಗಳಲ್ಲಿ ಮುಳುಗಿ ಹೋಗುತ್ತದೆ - ಅನಸೂಯಾ, ಅತ್ರಿಗಳು ಪರಮಧನ್ಯರು. ಆತ್ರೇಯರೇ ತ್ರಿಮೂರ್ತಿರೂಪ.

793. ಅಗ್ನಿನೇತ್ರಾಯ ನಮಃ

ಅಗ್ನಿ - ನೇತ್ರ - ಅಗ್ನಿಯನ್ನೇ ಕಣ್ಣಾಗಿ ಉಳ್ಳವನು ಯಾರೋ ಅವನು - ಅಗ್ನಿನೇತ್ರನು - ಮಹಾದೇವ - ಶಿವ - ಮೂರು ಕಣ್ಣುಳ್ಳವನು - ಮುಕ್ಕಣ್ಣ.

ಅಗ್ನಿ - ಎಂದರೆ ತೇಜಸ್ಸು - ಇರುವ ಎರಡು ಕಣ್ಣುಗಳೊಂದಿಗೆ ಹಣೆಯಲ್ಲಿ ತೇಜಸ್ಸಿನ ಅಂತಃಚಕ್ಷು - ಮೂರನೆಯ ಕಣ್ಣು ಇರುತ್ತದೆ. ಇದು ದಿವ್ಯಚಕ್ಷು - ದಿವ್ಯಂ ಚಕ್ಷುಂ ದದಾಮ್ಯಹಂ ಎಂದು ಶ್ರೀಕೃಷ್ಣನು ಅರ್ಜುನನಿಗೆ ವಿಶ್ವರೂಪವನ್ನು ನೋಡಲು ಕೊಟ್ಟನು. ಇದೇ ರೀತಿ ಜ್ಞಾನ, ವಿವೇಕತೆ ಎಂಬ ಮೂರನೆಯ ಚಕ್ಷುವನ್ನು ಪರಮಾತ್ಮನು ಕೊಡುತ್ತಾನೆ. ಅದು ಆಧ್ಯಾತ್ಮಿಕ ಚಕ್ಷುವಾಗಿ ಪರಿಣಮಿಸಿ ಮುಕ್ತಿಗೆ ಆತ್ಮನನ್ನು ಎಳೆದುಕೊಳ್ಳುತ್ತದೆ.

ಅಥವಾ

ಅಗ್ನಿಚಕ್ಷುವನ್ನೇ ಉಪಯೋಗಿಸಿ ಯಾವ ಮನ್ಮಥನನ್ನು ಸುಟ್ಟನೋ ಅವನೇ ಶಿವ.

794. ಕಪಿಲಾಯ ನಮಃ

ಪರಮಾತ್ಮನು ಕಪಿಲ ಮುನಿಯ ಅವತಾರವನ್ನು ಮಾಡಿದ್ದಾನೆ. ತಾಯಿಯಾದ ದೇವಹೂತಿಗೆ ಪರತತ್ತ್ವವನ್ನು ಬೋಧಿಸಿದನು. ಕಪಿಲನು ಪ್ರಖ್ಯಾತ ಋಷಿ. ಕಪಿಲಮುನಿಯು ಪ್ರಖ್ಯಾತ ಕರ್ದಮಪ್ರಜಾಪತಿಯ ಮತ್ತು ಸ್ವಾಯಂಭೂವಿನ ಎರಡನೆ ಮಗಳಾದ ದೇವಹೂತಿಯರ ಏಕೈಕ ಪುತ್ರನು. ಒಂಬತ್ತು ಜನ ಹೆಣ್ಣುಮಕ್ಕಳ ನಂತರ ಕಪಿಲನು ಭಗವಂತನ ಅಂಶದಿಂದ ಜನಿಸಿದ್ದನು. ತಾಯಿ ದೇವಹೂತಿಗೆ ಜ್ಞಾನ ಭಕ್ತಿ, ವೈರಾಗ್ಯಗಳನ್ನು ವಿಶದವಾಗಿ ಬೋಧಿಸಿ ತಾನು ತಪಸ್ಸಿಗೆ ಹೋದನು. ಕರ್ದಮ ಪ್ರಜಾಪತಿಯ ವಂಶಗಳು ಹೆಣ್ಣುಮಕ್ಕಳಿಂದ ಮುಂದೆ ಬೆಳೆಯ ಬೇಕಾಯಿತು.

ಹೆಣ್ಣುಮಕ್ಕಳು ಅವರ ಪತಿಗಳು ಹೀಗೆ ಇದ್ದಾರೆ -

1. ಕಲಾದೇವಿ - ಮರೀಚಿಮಹರ್ಷಿ
2. ಅನಸೂಯೆ - ಅತ್ರಿಮಹಾಮುನಿಗಳು - ಇವರ ಮಗ ದತ್ತಾತ್ರೇಯ
3. ಶ್ರದ್ಧಾದೇವಿ - ಆಂಗೀರಸ್ಸ್ನ
4. ಹವಿರ್ಭೂದೇವಿ - ಪುಲಸ್ತ್ಯರು

5. ಗತಿ - ಪುಲಹರು
6. ಕ್ರಿಯಾದೇವಿ - ಕ್ರತು
7. ಖ್ಯಾತಿ - ಭೃಗುಮಹರ್ಷಿಗಳು
8. ಅರುಂಧತಿ - ವಸಿಷ್ಠರು
9. ಶಾಂತಿದೇವಿ - ಅಥರ್ವರು

ಕಪಿಲರ ಮೂಲಕ ಪ್ರಜಾಭಿವೃದ್ಧಿಯಾಗಲಿಲ್ಲ. ಕಾರಣ ಅವರು ತಪಸ್ಸಿಗೆ ಹೋದರು.

795. **ದ್ವಿಜಾಯ ನಮಃ**

ದ್ವಿ - ಎಂದರೆ ಎರಡು ಬಾರಿ, ಜ - ಹುಟ್ಟಿದವನು - ಎಂದರೆ ಬ್ರಾಹ್ಮಣ, ಉಪನಯನದ ನಂತರ ಬ್ರಾಹ್ಮಣನಾಗುತ್ತಾನೆ ಎಂದರೆ 2ನೇ ಜನ್ಮಪಡೆಯುತ್ತಾನೆ.

ಉಪ - ಎಂದರೆ ಹತ್ತಿರ, ನಯನ - ಎಳೆಯಲ್ಪಡುವುದು - ಆತ್ಮನನ್ನು ಪರಮಾತ್ಮನ ಹತ್ತಿರ / ಕಡೆಗೆ ಎಳೆದುಕೊಂಡು ಹೋಗುವುದು.

ಅಥವಾ

ಪರಮಾತ್ಮನು ಸೂತ್ರಧಾರ ಆತ್ಮ. ಇವನ ದೇಹದಿಂದ ಆತ್ಮಗಳು ಕಲ್ಪಾದಿಯಲ್ಲಿ ಹೊರಬರುತ್ತವೆ. ಆತ್ಮಗಳು ಮತ್ತೆ ಪರಮಾತ್ಮನ ಕಡೆಗೇ ಎಳೆಯಲ್ಪಡುವುದರಿಂದ ''ಉಪನಯನ'' ಎಂಬ ದಾರಿಯಲ್ಲಿ ಹೋಗುತ್ತವೆ, ಅದರಿಂದ ದ್ವಿಜ ಎಂದು ಹೇಳಬಹುದು.

ಬ್ರಹ್ಮನ ಹತ್ತಿರ ಹೋಗುವ ಆತ್ಮ ''ಬ್ರಾಹ್ಮಣ'' - ಬ್ರಹ್ಮರಿಂದ ಬ್ರಾಹ್ಮಣ ಎಂದಾಯಿತು. ಆತ್ಮವು ಈ ಪ್ರಕೃತಿ, ಪುರುಷ, ಮಾಯೆಗಳಿಂದ ಬಿಡಿಸಲ್ಪಟ್ಟಾಗ ಎಂದರೆ ಅವುಗಳ ಮುಸುಕಿನಿಂದ ಕತ್ತರಿಸಿ ಹೊರಬಂದಾಗ ಎರಡನೆಯ ಜನ್ಮವನ್ನು ಎಂದರೆ ಭಾವವನ್ನು ಪಡೆದಂತಾಯಿತು - ಅದರಿಂದ ಆತ್ಮನು ಪರಮಾತ್ಮನ ಅನ್ವೇಷಣೆಯ ದಾರಿಯಲ್ಲಿ ಹೋದರೆ ಅದನ್ನು ''ದ್ವಿಜ'' ಎಂದು ಹೇಳಬಹುದು. ಮತ್ತೆ ಸಂಸಾರದಲ್ಲಿ ಮುಳುಗಿ ತೇಲುವುದು ಮೊದಲನೇ ಜನ್ಮ. ಅದರಿಂದ ಬಿಡುಗಡೆ ಹೊಂದಿ ಪರಮಾತ್ಮನೆಡೆಗೆ ಹೋಗುವುದು ಎರಡನೇ ಜನ್ಮ ಎಂದು ಹೇಳಬಹುದು. ಆತ್ಮಗಳೆಲ್ಲವೂ ಅನೇಕ ದೇಹ / ಶರೀರ ಧಾರಣೆಮಾಡಿದರೂ ನಿಜತ್ವದಲ್ಲಿ ಅದು ಜನ್ಮವಲ್ಲ. ಹುಟ್ಟು ಸಾವುಗಳಲ್ಲ - ಎಂದು ತರ್ಕಿಸಬಹುದು. ಆತ್ಮಗಳು ಪರಮಾತ್ಮನಿಂದ ಭಿನ್ನವಲ್ಲದಿದ್ದರೂ ಅವು ಅವನ ಅಧೀನವಾಗಿ ಕಾಲಯಾನದಲ್ಲಿ ನಡೆಯುವುದರಿಂದ ಅವು ''ದ್ವಿಜಗಳು''. ಪರಮಾತ್ಮನು - ಅಜನು - ಅವನಿಂದ ಬಂದ ಆತ್ಮಗಳು ''ಜ''ಗಳು - ಬದಲು - ದ್ವಿಜಗಳು

ಅಥವಾ

ದ್ವಿಜ - ಎರಡು ಸಲ ಜನ್ಮ ತಾಳಿದವನು (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ)

- ಹಲ್ಲು, ಒಂದು ಸಲ ಬಿದ್ದು ಹೋಗಿ ಎರಡನೆಯ ಸಲ ಹುಟ್ಟುವ ಹಲ್ಲು - ಇದಕ್ಕೆ ದ್ವಿಜ ಎಂದೂ ಹೇಳಬಹುದು.

796. ಕ್ಷೇತ್ರಾಯ ನಮಃ

ಕ್ಷೇತ್ರ - ಎಂದರೆ ಬೆಳೆಯುವ ಸ್ಥಾನ, ಫಲವನ್ನು ಕೊಡುವ ನೆಲ.

- ಜೀವನು ವಾಸಿಸುವ ಸ್ಥಳ - ಶರೀರ, ಮನಸ್ಸು, ಕ್ಷೇತ್ರಗಳನ್ನು ಮಾಡಿದವನು ಪರಮಾತ್ಮ.

ಕ್ಷೇತ್ರ - ಶರೀರ, ಮನಸ್ಸುಗಳು ಪರಮಾತ್ಮನ ವಾಸಸ್ಥಾನ.

ಕ್ಷೇತ್ರ - ಪವಿತ್ರಸ್ಥಾನಗಳು, ತೀರ್ಥಕ್ಷೇತ್ರಗಳು, ಪವಿತ್ರಮಾಡುವ ಸ್ಥಾನಗಳು.

ಕ್ಷೇತ್ರ - ಪತಿ, ಪತ್ನಿಯರಲ್ಲಿ, ಪತ್ನಿಯೇ ಕ್ಷೇತ್ರಸ್ಥಾನ, ಇದರಲ್ಲಿಯೇ ಸಂತತಿಯು ಬೆಳೆಯುತ್ತದೆ, ಮುಂದಿನ ಜೀವಿಯ ವಾಸಸ್ಥಾನ.

ಭೂದೇವಿ, ಪತ್ನಿ ಇವರೆಲ್ಲ ಪರಮಾತ್ಮ ಸ್ವರೂಪಗಳು, ಆದ್ದರಿಂದ ಇವುಗಳು - ಪರಮಾತ್ಮನೇ - ಅದರಿಂದ ಕ್ಷೇತ್ರಾಯ ನಮಃ.

797. ಪಶುಪಾಲಾಯ ನಮಃ

ಪಶು - ಎಂದರೆ ಪ್ರಾಣಿಗಳು - ಪ್ರಾಣವು ಯಾವ ಯಾವ ಶರೀರದಲ್ಲಿರುವುವೋ ಅವು ಪ್ರಾಣಿಗಳು - ಪಶುಗಳು, ಇದರಲ್ಲಿ ಮನುಷ್ಯನನ್ನು ಸೇರಿಸಬಹುದು. ಎಲ್ಲಿಯವರೆಗೆ ಅವನು ಪಶುವಿಗೂ ತನಗೂ ಇರುವ ಭೇದ - ಬುದ್ಧಿಶಕ್ತಿ, ವಿವೇಚನಾಶಕ್ತಿ, ವಿವೇಕಗಳನ್ನು ಉಪಯೋಗಿಸುವುದಿಲ್ಲವೋ ಅಲ್ಲಿಯವರೆಗೆ ಅವನೂ ಪಶುವೇ.

ಪಶು - ಪ್ರಾಣಿಗಳನ್ನು, ಪಾಲ - ಕಾಪಾಡುವವನು.

ಆತ್ಮಗಳನ್ನು ಶರೀರಗಳಲ್ಲಿ ಹಾಕಿ ಸಂಸಾರ ಸಾಗರದಲ್ಲಿ ಇರುವಂತೆ ಮಾಡಿದ ಪರಮಾತ್ಮನು, ಅವನೇ ಅವುಗಳನ್ನು ಕಾಪಾಡುತ್ತಾನೆ. ಅಂದರೆ ಅವನೇ ಭವಸಾಗರದಿಂದ ಬಿಡುಗಡೆ ಹೊಂದುವ ದಾರಿಯನ್ನು ಕರುಣಿಸುತ್ತಾನೆ. ಅದರಿಂದ ಅವನು ಪಶುಪಾಲನು - ಪಶುಪಾಲಾಯ ನಮಃ.

ಅಥವಾ / ಮತ್ತೇ

ಪಶು - ದನಗಳು, ಮುಂಜಿಯಾಗದ ಮಾನವ, ಯಜ್ಞದ ಆಡು, ಮಂದಬುದ್ಧಿಯ ಮನುಷ್ಯ.

ಇವುಗಳಿಗೆ ಸೂಕ್ತ ಪರಿವರ್ತನೆ ಮಾಡಿ ಮೋಕ್ಷವನ್ನು ಪರಮಾತ್ಮನು ದಯಪಾಲಿಸುತ್ತಾನೆ, ಅದರಿಂದ ಅವನು ಪಶುಪಾಲನು.

**798.** ಪಶುವಕ್ತ್ರಾಯ ನಮಃ

ಪಶುವಿನ ಮುಖವುಳ್ಳವನು - ಮತ್ಸ್ಯ, ಕೂರ್ಮ, ವರಾಹ, ನರಸಿಂಹ ಅವತಾರದ ಮುಖಗಳು ಪ್ರಾಣಿಗಳ ಮುಖದವು - ಅದರಿಂದ ಅವನು ಪಶುವಕ್ತ್ರನು.

ಪಶುವಕ್ತ್ರನು - ಕಾಮಧೇನು, ಐರಾವತ, ನಯನ ಮನೋಹರವಾದ ನವಿಲು, ಕೋಗಿಲೆ, ಗರುಡನು, ಹನುಮಂತ, ತುಂಬುರರು, ಮುಂತಾದವರು ಪರಮಾತ್ಮನ ರೂಪವೇ - ಅವರು ಪಶುವಕ್ತ್ರರು.

*ಗೃಹಸ್ಥಾಯ ವನಸ್ಥಾಯ ಯತಯೇ ಬ್ರಹ್ಮಚಾರಿಣೇ ।*
*ಸ್ವರ್ಗಾಪವರ್ಗದಾತ್ರೇ ಚ ತದ್ಭೋಕ್ತ್ರೇ ಚ ಮುಮುಕ್ಷುವೇ ॥134॥*
*(799-805)*

**799.** ಗೃಹಸ್ಥಾಯ ನಮಃ

ಗೃಹ - ಎಂದರೆ ಮನೆ, ಸ್ಥ - ಎಂದರೆ ಅದರಲ್ಲಿರುವವನು - ಗೃಹಸ್ಥ.

ಗೃಹ - ಎಂದರೆ ಶರೀರ, ಸ್ಥ - ಅದರಲ್ಲಿ ಇರುವವನು - ಆತ್ಮ, ಜೀವ, ಆತ್ಮನು ಪರಮಾತ್ಮನ ಅಂಶ - ಅದರಿಂದ ಗೃಹಸ್ಥನು ಪರಮಾತ್ಮನೇ.

ಗೃಹಸ್ಥ - ಶರೀರದ ಯಜಮಾನ - ಆತ್ಮ / ಪರಮಾತ್ಮ.

ಗೃಹ - ಎಂದರೆ ಸಂಸಾರ ಸಾಗರ, ಸ್ಥ - ಇದರಲ್ಲಿ ಇರುವವನು - ಜೀವಿಗಳು, ಪರಮಾತ್ಮ.

ಗೃಹ - ಅಖಿಲಾಂಡ ಬ್ರಹ್ಮಾಂಡಗಳು - ಸ್ಥ - ಇವುಗಳಲ್ಲಿ ವಾಸಿಸುವವನು - ಜೀವಿಗಳು - ಅವುಗಳ ಯಜಮಾನನೇ ಪರಮಾತ್ಮ.

ಅದರಿಂದ ಗೃಹಸ್ಥಾಯ ನಮಃ.

**800.** ವನಸ್ಥಾಯ ನಮಃ

ವನ - ಎಂದರೆ ಕಾಡು, ಸ್ಥ - ಅದರಲ್ಲಿರುವವನು, ಜೀವಿಗಳು ಅವುಗಳ ಯಜಮಾನ ಪರಮಾತ್ಮ.

ವನ - ಗಿಡಗಳ ಸಮೂಹ - ಉಪವನ, ಉದ್ಯಾನವನ, ಇಂದ್ರನ ಉದ್ಯಾನವನಗಳಲ್ಲಿ ಶ್ರೇಷ್ಠವಾದ್ದು, ಅದೇ ಪರಮಾತ್ಮ.

ವನ - ಎಂದರೆ ಮನೆ, ಸ್ಥ - ಇರುಪವನು, ಮನೆಯಲ್ಲಿರುವವನು - ಜೀವಾತ್ಮ, ಪರಮಾತ್ಮ.

ವನಸ್ಥಾಯ ನಮಃ - ಪರಮಾತ್ಮನಿಗೆ ನಮಸ್ಕಾರಗಳು.

ವನ - ಸಂಸಾರಸಾಗರವೆಂಬ ಕಾಡು - ಅದರಲ್ಲಿರುವವನು ಸರ್ವಾಂತರ್ಯಾಮಿ ಪರಮಾತ್ಮ - ವಿಷ್ಣು - ವಿಷ್ಣುವಿನ ರೂಪದ ನರಸಿಂಹ.

**801. ಯತಯೇ ನಮಃ**

ಯತಿ - ಸನ್ಯಾಸಿ.

ಪರಮಾತ್ಮನು ಗುಣ ಕರ್ಮ ವಿಭಾಗ ಮಾಡಿ ಚತುರ್ವರ್ಣಗಳನ್ನು ಸೃಷ್ಟಿಸಿದನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಈ ನಾಲ್ಕು ವರ್ಣಗಳು. ಇದೇ ರೀತಿ ಸರ್ವರಿಗೂ ನಾಲ್ಕು ಆಶ್ರಮಗಳನ್ನು ವಯೋಧರ್ಮಗಳಿಗನುಸಾರವಾಗಿ ವಿಭಾಗಿಸಿದನು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ ಆಶ್ರಮಗಳೇ ಈ ನಾಲ್ಕು ಆಶ್ರಮಗಳು. ಮೊದಲಿನಿಂದ ಅಂದರೆ ಬ್ರಹ್ಮಚರ್ಯ ಮೊದಲು, ನಂತರ ಗೃಹಸ್ಥ, ನಂತರ ವಾನಪ್ರಸ್ಥ, ನಂತರ ಸಂನ್ಯಾಸ - ಇವು ಒಂದರ ನಂತರ ಒಂದು ಮೆಟ್ಟಲುಗಳು. ಸಂನ್ಯಾಸವನ್ನು ಬ್ರಹ್ಮಚಾರಿಗಳೂ, ಗೃಹಸ್ಥಾಶ್ರಮ, ವಾನಪ್ರಸ್ಥಾಶ್ರಮ ಸ್ವೀಕರಿಸಿದವರು ಸ್ವೀಕರಿಸುತ್ತಾರೆ. ಸಂನ್ಯಾಸಾಶ್ರಮ ಎಲ್ಲಕ್ಕಿಂತ ಉತ್ಕೃಷ್ಟವಾದುದು ಮತ್ತು ಪಾರಮಾರ್ಥಿಕ ಸಾಧನೆಗೆ ಬಹಳ ಉನ್ನತವಾದುದು. ಪರಮಾತ್ಮನು ಎಲ್ಲ ಆಶ್ರಮದವರಿಗೂ, ಎಲ್ಲ ವರ್ಣದವರಿಗೂ ಅವನನ್ನು ಸೇರಲು ದಾರಿ ಕಲ್ಪಿಸಿದ್ದಾನೆ. ಪರಮಾತ್ಮನು ಅನೇಕ ಅವತಾರಗಳನ್ನು ಎತ್ತಿ ಯತಿಗಳ ಆಶ್ರಮವನ್ನೇ ನೇರವಾಗಿ ಸ್ವೀಕರಿಸಿದ್ದಾನೆ. ಸನಕ, ಸನಂದನ, ಸನತ್ಕುಮಾರ ಮತ್ತು ಸನತ್ಸುಜಾತ ನಾಲ್ಕು ಋಷಿಗಳು, ಕಪಿಲ, ದತ್ತಾತ್ರೇಯರು, ನರ, ನಾರಾಯಣರು, ಮುಂತಾದವರು - ಮಹಾನ್ ಯತಿಗಳು.

**802. ಬ್ರಹ್ಮಚಾರಿಣೇ ನಮಃ**

ಪರಮಾತ್ಮನು ಬ್ರಹ್ಮಚರ್ಯಾಶ್ರಮದಲ್ಲಿಯೇ ಇರುವವನು. ಬ್ರಹ್ಮನ ಸುತ್ತಮುತ್ತಲು ಚಲಿಸುವವನು.

ಬ್ರಹ್ಮ - ಬ್ರಹ್ಮ, ಪರಬ್ರಹ್ಮನನ್ನು ಕುರಿತು - ಚಾರಣ - ಚಿಂತಿಸುವವನು, ಬ್ರಹ್ಮವಾದಿಗಳು. ಪರಬ್ರಹ್ಮನನ್ನೇ ಸೇರುವವರು. ಬ್ರಹ್ಮೋಪದೇಶವಾಗಿರುವವನು - ಬ್ರಹ್ಮಚಾರಿ, ಗೃಹಸ್ಥಾಶ್ರಮ ಸ್ವೀಕರಿಸುವ ಮೊದಲಿನ ಆಶ್ರಮ - ಬ್ರಹ್ಮಚರ್ಯ. ಬ್ರಹ್ಮನನ್ನು ಕುರಿತು ಚಿಂತಿಸುವವರು - ಬ್ರಹ್ಮಚಾರಿಗಳು - ಇವರು ಬ್ರಹ್ಮನಲ್ಲಿಯೇ ಮನಸ್ಸನ್ನು ಲೀನವಾಗಿಸುವವರು - ಬ್ರಹ್ಮನೇ ಆಗುತ್ತಾರೆ.

**803. ಸ್ವರ್ಗಾಪವರ್ಗದಾತ್ರೇ ನಮಃ**

ಸ್ವರ್ಗ, ಅಪವರ್ಗಗಳನ್ನು ಕೊಡುವವನು ಯಾರೋ ಅವನು - ಸ್ವರ್ಗಾಪವರ್ಗದಾತನು - ಪರಮಾತ್ಮನು - ಪರಬ್ರಹ್ಮನು.

ಸರ್ವಲೋಕಗಳನ್ನು ಕಾಮಿತ ಫಲಗಳನ್ನು, ಮುಕ್ತಿಯನ್ನು, ಸಾಲೋಕ್ಯ, ಸಾಮಿಪ್ಯ, ಸಾಯುಜ್ಯ, ಸಾರೂಪ್ಯ ಪದವಿಗಳನ್ನು ಕೊಡುವವನು - ಪರಮಾತ್ಮ.

ಅಥವಾ

ಆತ್ಮವನ್ನೇ ಚಿಂತಿಸುತ್ತಾ, ಸಾತ್ವಿಕ ಕರ್ಮಗಳನ್ನು ಬುದ್ಧಿ ಮನಸ್ಸುಗಳಿಂದ ಮಾಡಿಸುತ್ತಾ, ದೇಹವನ್ನು ಪವಿತ್ರಗೊಳಿಸುವುದು ಪರಮಾತ್ಮನ ದಿವ್ಯ ಸಂಕಲ್ಪದಂತೆ ಶರಣಾಗತವಾಗುವುದು - ಆತ್ಮತತ್ವವನ್ನು ತಿಳಿಯುವುದೇ - ಸ್ವರ್ಗಾಪವರ್ಗವನ್ನು ಸೇರುವುದು.

804. **ತದ್ಭೋಕ್ತ್ರೇ ನಮಃ**

ಪರಮಾತ್ಮನು ಕರುಣಿಸಿದ ಸ್ವರ್ಗ, ಅಪವರ್ಗ ಮತ್ತು ಉನ್ನತ ಪದವಿಗಳನ್ನು ಅನುಭವಿಸುವವನು - ಆತ್ಮ - ಆತ್ಮನೇ ಪರಮಾತ್ಮನ ಅಂಶ - ಪರಮಾತ್ಮನೇ - ಆದರಿಂದ ತದ್ಭೋಕ್ತ್ರೇ ನಮಃ ಎನ್ನುವುದು ಆತ್ಮಕ್ಕೆ, ಪರಮಾತ್ಮನಿಗೆ.

805. **ಮುಮುಕ್ಷುವೇ ನಮಃ**

ಮುಮುಕ್ಷ - ಮೋಕ್ಷ ಪಡೆಯುವ ಆಸೆಯುಳ್ಳವನು. ಎಂದರೆ ಸಂಸಾರ ಬಂಧನದಿಂದ ಬಿಬಿಡುಗಡೆ ಹೊಂದುವ ಇಚ್ಛೆಯುಳ್ಳವನು.

ಪರಮಾತ್ಮನನ್ನು ಕುರಿತು ಚಿಂತಿಸುವವರು, ಅವನನ್ನು ಸೇರಲು ಕಾತುರರಾಗಿರುವವರು, ಸಂಸಾರಬಂಧನವನ್ನು ತ್ಯಜಿಸಲು ಪ್ರಯತ್ನಿಸುವವರು - ಸಂನ್ಯಾಸಿಗಳು, ಪ್ರತಿ ಆಶ್ರಮದ ಭಗವದ್ಭಕ್ತರು - ಎಲ್ಲ ಇಂಥವರೂ ಮುಮುಕ್ಷುಗಳೇ - ಆತ್ಮಜ್ಞಾನ, ನಾನು ಯಾರು? ಎಂಬುದನ್ನು ತಿಳಿಯಲು ಕಾತುರರಾಗಿ ತಿಳಿಯುವವರು ಸಹ ಮುಮುಕ್ಷುಗಳೇ!

*ಶಾಲಗ್ರಾಮನಿವಾಸಾಯ ಕ್ಷೀರಾಬ್ಧಿಶಯನಾಯ ಚ ।*
*ಶ್ರೀಶೈಲಾದ್ರಿನಿವಾಸಾಯ ಶಿಲಾವಾಸಾಯ ತೇ ನಮಃ ॥135॥*

*(806-809)*

806 **ಶಾಲಾಗ್ರಾಮನಿವಾಸಾಯ ನಮಃ / ಸಾಲಿಗ್ರಾಮನಿವಾಸಾಯ ನಮಃ**

ಸಾಲಿಗ್ರಾಮ ಎಂಬುದು ಒಂದು ರೀತಿಯ ವಿಶೇಷ ಶಿಲೆ. ಸಾಮಾನ್ಯವಾಗಿ ದೊರಕುವಂತಹ ಶಿಲೆಯಲ್ಲ. ಸರ್ವ ಶ್ರೇಷ್ಠವಾದ ಸಾಲಿಗ್ರಾಮಗಳು ಗಂಡಕಿ ನದಿಯ ಪಾತ್ರದಲ್ಲಿ ಸಿಕ್ಕುತ್ತವೆ. ಒಂದು ರೀತಿಯ ಪ್ರಾಣಿಗಳು (ಬಹಳ ಚಿಕ್ಕವು) ಶಿಲೆಯನ್ನು ಕಟ್ಟಬಹುದು ಅಥವಾ ಕೊರೆಯಬಹುದು ಅಥವಾ ಕೊರೆದು ಅದರಲ್ಲಿ ವಾಸಮಾಡಿ ದೇಹತ್ಯಾಗ ಮಾಡಬಹುದು ಮತ್ತು ಹೊರಗೆ ಹೊರಟು ಹೋಗಬಹುದು ಅಥವಾ ಅದರಲ್ಲಿಯೇ ವಾಸಮಾಡುತ್ತ ಇದ್ದೇ ಬಿಡಬಹುದು ಅಥವಾ ಅವಶೇಷವು ಶಿಲೆಯ ಒಳಗೆ ಹೊರಬರದ ಹಾಗೆ ಇರಬಹುದು. ಈ ರೀತಿ ಅನೇಕ ರೀತಿಯ ಸಾಲಿಗ್ರಾಮಗಳು ಇವೆ. ಈ ಶಿಲೆಗಳು ಬಹಳ ಶ್ರೇಷ್ಠವಾದವು. ಪರಮಾತ್ಮನು ಇದರಲ್ಲಿ ಸರ್ವಕಾಲದಲ್ಲಿಯೂ ವಾಸಮಾಡುವುದರಿಂದ ಅವನಿಗೆ ವಿಶೇಷ ಗೌರವ,

ಆದರವನ್ನು ಮಾಡಿ ಈ ಶಿಲೆಯನ್ನು ಪೂಜಿಸುತ್ತೇವೆ. ಇತರ ಪ್ರತಿಮೆಗಳಂತೆ ಇದರಲ್ಲಿ ಆವಾಹನ ಮಾಡಬೇಕಾಗಿಲ್ಲ. ಪರಮಾತ್ಮನು ಸದಾ ಇದರಲ್ಲಿ ಅಂದರೆ ಸಾಲಿಗ್ರಾಮಗಳಲ್ಲಿ ಇರುವುದರಿಂದ ಇದರ ಪೂಜಾವಿಧಿಗಳು ಚಾಚೂ ತಪ್ಪದೆ ಕ್ರಮವಾಗಿ ನಡೆಯಬೇಕು.

ಸಾಲಿಗ್ರಾಮಗಳು ಅನೇಕ - ಕೆಲವು ಶಿವ ಸಾಲಿಗ್ರಾಮ, ವಿಷ್ಣು ಸಾಲಿಗ್ರಾಮ, ನರಸಿಂಹ ಸಾಲಿಗ್ರಾಮ, ರತ್ನಗರ್ಭ ಸಾಲಿಗ್ರಾಮ ಎಲ್ಲವುಗಳ ರೂಪರೇಖೆಗಳು ಒಂದೇ ರೀತಿಯಲ್ಲ, ಬೇರೆ ಬೇರೆ.

ಸಾಲಿಗ್ರಾಮಗಳು ಮತ್ತು ಗಂಡಕಿ ನದಿಯ ಸಂಬಂಧದಲ್ಲಿ ಒಂದು ಕಥೆ ಇದೆ -

ಹಿಂದೆ ಪ್ರಾಚೀನಕಾಲದಲ್ಲಿ ಗಂಡಕಿ ಎಂಬ ಒಬ್ಬ ವೇಶ್ಯೆ ಇದ್ದಳು. ಅವಳ ಕ್ರಮ ಪ್ರತಿ ದಿನ ಬಂದ ಮೊದಲ ನರನನ್ನು ಪತಿಯನ್ನಾಗಿ ಸ್ವೀಕರಿಸಿ ರಾತ್ರಿಪೂರ್ತ ಅವನಿಗೆ ಅವನ ಇಷ್ಟದಂತೆ ಸೇವೆಗೈದು ತೃಪ್ತಿಪಡಿಸಿ ಬೆಳಿಗ್ಗೆ ಕಳಿಸುತ್ತಿದ್ದಳು. ಈ ಪಾತಿವ್ರತ್ಯವನ್ನು ಪರೀಕ್ಷಿಸಬೇಕೆಂದು ಶ್ರೀಮಹಾವಿಷ್ಣುವು ಒಂದು ದಿನ ಸಾಯಂಕಾಲ ತಾನೇ ಮೊದಲನೆಯವನಾಗಿ ಅವಳಲ್ಲಿಗೆ ಹೋದನು. ವೃದ್ಧ ಅತಿ ಅಸಹ್ಯವಾದ ರೂಪ, ಆದರೂ ಗಂಡಕಿಯು ಸೇವೆಮಾಡಲು ಉದ್ಯುಕ್ತಳಾದಳು. ರಾತ್ರಿಯೆಲ್ಲ ಅವನಿಗೆ ಅತಿಸಾರದ ಬೇಧಿ, ಮುಂತಾದವುಗಳು. ಸ್ನಾನ ಮಾಡಿಸಿ ಶುಚಿ ವಸ್ತ್ರವನ್ನು ಹಾಕಿ ಪೋಷಿಸಿದಳು. ಬೆಳಗಾಗುವುದು ಇನ್ನೇನು ಎನ್ನುವಾಗ ಈ ವ್ಯಕ್ತಿ ಪ್ರಾಣಬಿಟ್ಟನು. ಆಗ ಗಂಡಕಿಯು ಅವನೇ ಪತಿ ಎಂದು ವಿಧ್ಯುಕ್ತ ರೀತಿಯಲ್ಲಿ ದಹನ ಕ್ರಿಯೆಮಾಡಿ ಸಹಗಮನ ಮಾಡಲು ಅನುವಾದಳು. ಇನ್ನೇನು ಚಿತೆಯಲ್ಲಿ ಹಾರಬೇಕು ಎನ್ನುವಾಗ ವಿಷ್ಣುರೂಪವನ್ನು ಆ ಮುದುಕನು ಹೊಂದಿ ಅವಳಿಗೆ ಸಂತೋಷದಿಂದ ವರವನ್ನು ಬೇಡೆಂದನು. ಆಗ ಗಂಡಕಿಯು - "ಹೇ ಭಗವನ್, ನೀನು ಸದಾ ನನ್ನ ಮಡಿಲಿನಲ್ಲಿ ಯಥೇಚ್ಛವಾಗಿ ಆಡಿ ನಲಿದಾಡಿಕೊಂಡಿರು" ಎಂದು ಪ್ರಾರ್ಥಿಸಿದಳು. ಭಗವಂತನು "ತಥಾಸ್ತು" ಎಂದು ವರವನ್ನಿತ್ತನು. ಈ ವರದಂತೆ ಗಂಡಕಿಯು ನದಿಯಾಗಿ ಹರಿದಳು. ವಿಷ್ಣುವು ನದಿಯ ಪಾತ್ರದಲ್ಲಿರುವ ಶಿಲೆಗಳಲ್ಲಿ ಸೇರಿ ಸಾಲಿಗ್ರಾಮಗಳಾದನು. ಈ ರೀತಿ ಸಾಲಿಗ್ರಾಮ ಶಿಲೆಗಳು ಗಂಡಕಿ ನದಿಯ ಪಾತ್ರದಲ್ಲಿ ಮಗುವಿನಂತೆ ಹೊರಳಾಡುತ್ತಿವೆ ಮತ್ತು ವಾಸಮಾಡುತ್ತಿವೆ. ಈ ಸಾಲಿಗ್ರಾಮಗಳು ಬಹಳ ಶ್ರೇಷ್ಠವಾದವುಗಳು - ಸಾಲಿಗ್ರಾಮನಿವಾಸಾಯ ನಮಃ.

807. ಕ್ಷೀರಾಬ್ಧಿಶಯನಾಯ ನಮಃ

ಕ್ಷೀರ - ಹಾಲಿನ, ಅಬ್ಧಿ - ಸಮುದ್ರದಲ್ಲಿ, ಶಯನ - ಮಲಗಿರುವವನು - ಶ್ರೀಮನ್ನಾರಾಯಣ.

ಶ್ರೀಮನ್ನಾರಾಯಣನು ಅನಂತಶಯನನಾಗಿ ಕ್ಷೀರಸಾಗರದಲ್ಲಿ ಮಲಗಿದ್ದಾನೆ. ಮಹಾಲಕ್ಷ್ಮಿಯು ಪಾದವನ್ನು ಸೇವಿಸುತ್ತಿದ್ದಾಳೆ. ಭಗವಂತನ ನಾಭಿಕಮಲದಿಂದ ಬಂದ ನಾಳದ ತುದಿಯಲ್ಲಿರುವ ಕಮಲದ ಮೇಲೆ ಬ್ರಹ್ಮನು ವಿರಾಜಿಸುತ್ತಿದ್ದಾನೆ. ಮತ್ತೆ ಆದಿಶೇಷನು ತನ್ನ ಸಾವಿರ ಹೆಡೆಗಳಿಂದ ಶೋಭಿಸುತ್ತಾ ಮಹಾವಿಷ್ಣುವನ್ನು ಸ್ತುತಿಸುತ್ತಿದ್ದಾನೆ. ಇಂತಹ ಮಹಾವಿಷ್ಣುವು ಅನಂತ ಶಯನ, ಕ್ಷೀರಾಬ್ಧಿಶಯನ ಎಂದು ಕರೆಯಲ್ಪಟ್ಟು, ಅವನನ್ನು ನಮಸ್ಕರಿಸುತ್ತೇವೆ.

ಕ್ಷೀರ ಸಮುದ್ರವು ಅತ್ಯಂತ ಇಷ್ಟವಾದ ಸಾಗರ. ಸ್ವಚ್ಛವಾದುದು, ನಿರ್ಮಲವಾದುದು, ಕಲುಷಿತವಲ್ಲದುದು. ಇದರಲ್ಲಿಯೇ ಲಕ್ಷ್ಮಿದೇವಿಯು ಬಂದಳು. ಅವಳು ಕ್ಷೀರಸಾಗರ ಕನ್ಯಕಾ ದೇವಿ.

ಅದರಿಂದ ಕ್ಷೀರಸಾಗರವು ಪರಮಾತ್ಮ - ಶ್ರೀಮನ್ನಾರಾಯಣನಿಗೆ ತನ್ನ ಪ್ರಿಯೆಯಾದ ಲಕ್ಷ್ಮೀ ದೇವಿಯ ತಂದೆ ತಾಯಿಯ ಮನೆ. ಹರಿಗೆ ಪ್ರಿಯವಾದ ಸ್ಥಾನ, ಸಾಕೆನ್ನದೆ ಆದಿಶೇಷನೇ ತಲ್ಪವಾಗಿ ಸೇವಿಸುತ್ತಿದ್ದಾನೆ. ಮಹಾವಿಷ್ಣುವು ಅತ್ಯಂತ ಸಂತೋಷದಿಂದ ಇಲ್ಲಿರುತ್ತಾನೆ. ಲಕ್ಷ್ಮೀದೇವಿಯ ಸೌಂದರ್ಯವು ಕಿಂಚಿತ್ತೂ ಕಡಿಮೆಯಾಗಬಾರದೆಂದು ತಾನೇ ತನ್ನ ನಾಭಿಕಮಲದಿಂದ ಬ್ರಹ್ಮದೇವರಿಗೆ ಜನ್ಮವಿತ್ತಿದ್ದಾನೆ. ಬ್ರಹ್ಮನೇ ಸಕಲ ಜಗತ್ತನ್ನು, ಸೃಷ್ಟಿಸಿ ಪ್ರಜಾಭಿವೃದ್ಧಿ ಮಾಡುತ್ತಾನೆ. ಪರಮಾತ್ಮನ ದೇಹದಿಂದಲೇ ಬಂದ ಅಗಣಿತ ಆತ್ಮಕೋಟಿಗಳಿಗೆ ದೇಹಗಳನ್ನು ಕೊಡುವ ಕಾರ್ಯದಲ್ಲಿ ನಿರತನಾಗಿದ್ದಾನೆ. ಸಾಕ್ಷಾತ್ ಲಕ್ಷ್ಮೀದೇವಿಯು ತನ್ನ ಸೌಂದರ್ಯದಲ್ಲಿ ಲವಲೇಶವೂ ಬದಲಾಗಂತೆ ವೃದ್ಧಿಸುತ್ತಿದ್ದಾಳೆ. ಇದು ಪರಮಾತ್ಮನ ಸಂಕಲ್ಪ - ಅದರಿಂದ ವಿಷ್ಣುವು ಯಾವ ರೀತಿಯಲ್ಲಿಯೂ ಕುಂದಿಲ್ಲದೆ ಸಂತೋಷದಿಂದ ಕ್ಷೀರಾಬ್ಧಿಶಯನನಾಗಿದ್ದಾನೆ. ಸಕಲ ಜೀವಕೋಟಿಯೂ ಅವನನ್ನು ಸ್ತುತಿಸುತ್ತಾ ಅವನ ಕೃಪೆಗಾಗಿ ತವಕಿಸುತ್ತಿದ್ದಾರೆ.

ಇದೇ ರೀತಿ ಆತ್ಮವು ತನ್ನ ತೇಜಸ್ಸಿನಿಂದ ಶರೀರದೊಳಗೆ ವಾಸಮಾಡುತ್ತಿದೆ. ಸಂಸಾರ ಸಾಗರದಲ್ಲಿ ನಡೆಯುತ್ತಿದ್ದರೂ ಶರೀರ, ಬುದ್ಧಿ, ಮನಸ್ಸು, ಅಹಂಕಾರ, ಚಿತ್ತ, ಇಂದ್ರಿಯಗಳಿಗೆ ಸ್ವತಂತ್ರ ನೀಡಿ ತಾನು ಎಲ್ಲವನ್ನು ನೋಡುತ್ತಿದೆ. ಅವುಗಳು ಆತ್ಮದರ್ಶನಕ್ಕಾಗಿ ಸಂಸಾರ ಬಂಧನದಿಂದ ಬಿಡುಗಡೆ ಹೊಂದಲು ಕಾತರಿಸುತ್ತಿವೆ. ಆತ್ಮನು ಪರಮಾತ್ಮನ ಸ್ವರೂಪ. ಆತ್ಮನು ಸಹ ಪರಮಾತ್ಮನ ಸಂಕಲ್ಪದಂತೆ ಅವನ ಕೃಪೆಗೆ ಕಾಯುತ್ತ ಸಾಕ್ಷೀರೂಪವಾಗಿ ಶರೀರಗಳಲ್ಲಿ ವಾಸಿಸುತ್ತಿರುತ್ತದೆ. ಇದೇ ವಿಚಿತ್ರ ಮತ್ತು ವಿಸ್ಮಯವಾದುದು.

**808. ಶ್ರೀಶೈಲಾದ್ರಿನಿವಾಸಾಯ ನಮಃ**

ಶ್ರೀಶೈಲಾದ್ರಿನಿವಾಸ - ಶ್ರೀಶೈಲ ಬೆಟ್ಟದಲ್ಲಿ ವಾಸಿಸುವವನು - ಈಶ್ವರ, ಈಶ್ವರ ರೂಪನಾಗಿ ಇಲ್ಲಿ ವಾಸಿಸುತ್ತಾನೆ.

ಶ್ರೀ - ಎಂದರೆ ಲಕ್ಷ್ಮೀದೇವಿಯ, ಶೈಲ - ಎಂದರೆ ಸೌಂದರ್ಯವೆಂಬ, ಅದ್ರಿ - ಶಿಖರದಲ್ಲಿ, ವಾಸ - ಇದ್ದು ಸಂತೋಷಪಡುವವನು - ಶ್ರೀಮನ್ನಾರಾಯಣ.

ಅವನು ಸೌಂದರ್ಯ, ಸಂಪತ್ತುಗಳ ಗಣಿ - ಮೇರುಮಣಿ, ಇವನಿಗಿಂತ ಉತ್ತಮ ಭೋಗಿಗಳು ಇನ್ನೊಬ್ಬರಿಲ್ಲ. ಆದರೆ ಇವನಷ್ಟು ದಾನಿಗಳು, ಕೊಡುವವರು ಯಾರೂ ಇಲ್ಲ. ಏನನ್ನು ಯಾರು ಕೇಳಿದರೂ ಕೊಡುತ್ತಾನೆ. ಎಲ್ಲರೂ ಪರಮಾತ್ಮನನ್ನೇ ಬೇಡುತ್ತಾರೆ, ಪ್ರಾರ್ಥಿಸುತ್ತಾರೆ. ಅವನಿಂದಲೇ ಪಡೆಯುತ್ತಾರೆ. ಇವನು ಎಲ್ಲಿಯೇ ಇರಲಿ, ಭಕ್ತರ ಹತ್ತಿರ ಕ್ಷಣಮಾತ್ರದಲ್ಲಿ ಬಂದು ನಿಲ್ಲುತ್ತಾನೆ - ಶ್ರೀಶೈಲಾದ್ರಿನಿವಾಸಾಯ ನಮಃ.

**809. ಶಿಲಾವಾಸಾಯ ನಮಃ**

ಶಿಲೆಯಲ್ಲಿ ವಾಸಮಾಡುವವನು - ಪರಮಾತ್ಮ. ಭಕ್ತರು ಪರಮಾತ್ಮನನ್ನು ಪ್ರತಿಮೆಗಳಲ್ಲಿ ಆಹ್ವಾನಿಸಿ ಪೂಜಿಸುವುದರಿಂದ ಪರಮಾತ್ಮನು ಇಲ್ಲಿ ಪೂಜಿಸುವ ಸಮಯದಲ್ಲಿ ನಿಲ್ಲಬೇಕಾಗುತ್ತದೆ. ಕೆಲವು ಸಮಯಗಳಲ್ಲಿ ಇವನು ಸದಾ ಶಿಲೆಯಲ್ಲಿಯೇ ವಾಸಮಾಡುತ್ತಾನೆ. ಸಾಲಿಗ್ರಾಮ ಶಿಲೆಯಲ್ಲಿ ಅಲ್ಲಿಯೆ ಇರುವುದರಿಂದ ಆವಾಹನೆ, ವಿಸರ್ಜನೆ ಬೇಕಾಗಿಲ್ಲ.

ಕೆಲವು ಕಡೆ ಭಕ್ತರ ಸೇವೆ ಹೇಗಿರುವುದೆಂದರೆ ಭಗವಂತನನ್ನು ನಿರಂತರ ಸೇವಿಸುವುದರಿಂದ ಅವನು ಶಿಲೆಯನ್ನು ಬಿಟ್ಟುಹೋಗಲು ಸಮಯವೇ ಇರುವುದಿಲ್ಲ - ಉದಾಃ ತಿರುಪತಿ ವೆಂಕಟರಮಣ.

ಕಾಶಿವಿಶ್ವನಾಥನಿಗೆ ರಾತ್ರಿಯೂ ಬ್ರಹ್ಮದೇವರು ಬಂದು ಪೂಜಿಸುವುದರಿಂದ ಅಲ್ಲಿಯೇ ಪ್ರತಿಮೆಯಲ್ಲಿ ಶಿವನು ಇದ್ದೇ ಇರುತ್ತಾನೆ. ಅಥವಾ,

ಪರಮಾತ್ಮನು ಸದಾ ನಿರಂತರ ಎಲ್ಲೆಲ್ಲಯೂ ಇರುವುದರಿಂದ ಶಿಲಾವಾಸನೂ ಹೌದು - ಅದರಿಂದ ಶಿಲಾವಾಸಾಯ ನಮಃ.

*ಯೋಗಿಹೃತ್ಪದ್ಮವಾಸಾಯ ಮಹಾಹಂಸಾಯ ತೇ ನಮಃ ।*
*ಗ್ರಹಮಾಲಾಯ ಗುಹ್ಯಾಯ ಗುಪ್ತಾಯ ಗುರವೇ ನಮಃ ॥136॥*
*(810-815)*

**810. ಯೋಗಿಹೃತ್ಪದ್ಮವಾಸಾಯ ನಮಃ**

ಯೋಗ - ಯೋಗಿಗಳ, ಪರಮಾತ್ಮನನ್ನು ಆಳವಾಗಿ ಧ್ಯಾನಿಸುವವರ, ಹೃತ್ - ಹೃದಯದಲ್ಲಿ, ಆಧ್ಯಾತ್ಮಿಕ ಹೃದಯದ, ಪದ್ಮ - ಕಮಲದಲ್ಲಿ (ಕಮಲವು ಪರಮಾತ್ಮನಿಗೆ ಪ್ರಿಯವಾದುದು), ವಾಸ - ವಾಸಮಾಡುವವನು ಯಾರೋ ಅವನು - ಪರಮಾತ್ಮನು.

ಯೋಗಿ - ಸನ್ಯಾಸಿ, ಯತಿ, ಅಷ್ಟಾಂಗ (ಧ್ಯಾನಾಯೋಗವನ್ನು ಸಾಧಿಸಿದವನು) ಯೋಗ - ಎಂದರೆ ಯೋಗಗಳು, ಪಡೆಯುವುದು, ಧ್ಯಾನ, ಸಮಾಧಿ, ಹೃದಯಗಳು ಎರಡು - ಶಾರೀರಿಕ ಹೃದಯದಿಂದ ರಕ್ತವು ಮಲದಿಂದ ಶುದ್ಧೀಕರಣವಾಗಿ ಶರೀರದ ಎಲ್ಲ ಭಾಗಗಳಿಗೂ ಕಳಿಸಲ್ಪಡುತ್ತದೆ. ಅಶುದ್ಧವಾದ ರಕ್ತವು ಶರೀರದ ಎಲ್ಲ ಭಾಗಗಳಿಂದಲೂ ಹೃದಯಕ್ಕೆ ಬಂದು ಅಲ್ಲಿ ಶುದ್ಧವಾಗುತ್ತದೆ, ನಿಯಮಿತ ರೀತಿಯಲ್ಲಿ ಇಲ್ಲಿಂದ ಹೃದಯ ಬಡಿತದಿಂದ ಹೋಗುತ್ತದೆ.

ಆಧ್ಯಾತ್ಮಿಕ ಹೃದಯವು ಪರಮಾತ್ಮನ ವಾಸಸ್ಥಾನ, ಆತ್ಮನ ವಾಸಸ್ಥಾನ. ಆತ್ಮನು ಪರಮಾತ್ಮನ ಅಂಶವೇ ಆದ್ದರಿಂದ ಪರಮಾತ್ಮನ ವಾಸಸ್ಥಾನ ಎಂದರೆ ಆತ್ಮನಿಗೂ ಅನ್ವಯಿಸುತ್ತದೆ. ಇದನ್ನು ಮಹಾನಾರಾಯಣೋಪನಿಷತ್ತಿನಲ್ಲಿ 13ನೇ ಅನುವಾಕದಲ್ಲಿ ಮತ್ತು ಮಂತ್ರಪುಷ್ಪದಲ್ಲಿ ವಿಶದವಾಗಿ ವರ್ಣಿಸಿದ್ದಾರೆ.

*ಅನಂತಮವ್ಯಯಂ ಕವಿಗ್ಂ ಸಮುದ್ರೇಽನ್ತಂ ವಿಶ್ವಶಂಭುವಮ್ ।*
*ಪದ್ಮಕೋಶಪ್ರತೀಕಾಶಗ್ಂ ಹೃದಯಂ ಚಾಪ್ಯಧೋಮುಖಮ್ ॥6॥*

*ಅಧೋನಿಷ್ಟ್ಯಾ ವಿತಸ್ತ್ಯಾಂತೇ ನಾಭ್ಯಾಮುಪರಿ ತಿಷ್ಠತಿ ।*
*ಹೃದಯಂ ತದ್ವಿಜಾನೀಯಾದ್ವಿಶ್ವಸ್ಯಾಯತನಂ ಮಹತ್ ॥7॥*
*(ಜ್ವಾಲಮಾಲಾಕುಲಂ ಭಾತೀ ವಿಶ್ವಸ್ಯಾಯತನಂ ಮಹತ್ ॥)*

*ಸನ್ತತಗ್ಂ ಸಿರಾಭಿಸ್ತು ಲಂಬತ್ಯಾಕೋಶಸನ್ನಿಭಮ್ ।*
*ತಸ್ಯಾನ್ತೇ ಸುಷಿರಗ್ಂ ಸೂಕ್ಷ್ಮಂ ತಸ್ಮಿನ್ಸರ್ವಂ ಪ್ರತಿಷ್ಠಿತಮ್ ॥8॥*

*ತಸ್ಯ ಮಧ್ಯೇ ಮಹಾನಗ್ನಿರ್ವಿಶ್ವಾರ್ಚಿರ್ವಿಶ್ವತೋ ಮುಖಃ ।*
*ಸೋಽಗ್ರಭುಗ್ವಿಭಜನ್ತಿಷ್ಠನ್ನಾಹಾರಮಜರಃ ಕವಿಃ ॥9॥*

*(ತಿರ್ಯಗೋರ್ಧ್ವಮಧಃ ಶಾಯೀ ರಶ್ಮಯಸ್ತಸ್ಯ ಸಂತತಾ ।)*

*ಸಂತಾಪಯತಿ ಸ್ವಂ ದೇಹಮಾಪಾದತಲಮಸ್ತಕಮ್ ।*
*ತಸ್ಯ ಮಧ್ಯೇ ವಹ್ನಿಶಿಖಾ ಅಣೀಯೋರ್ಧ್ವಾ ವ್ಯವಸ್ಥಿತಾ ॥10॥*

*ನೀಲತೋಯದಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ ।*
*ನೀವಾರಶೂಕವತ್ತನ್ವೀ ಪೀತಾ ಭಾಸ್ವತ್ಯಣೂಪಮಾ ॥11॥*

*ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ।*
*ಸ ಬ್ರಹ್ಮಾ ಸ ಶಿವಃ ಸ ಹರಿಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್॥12॥*

ಹೃದಯಪದ್ಮದಲ್ಲಿ ವಾಸಿಸುವ ಪರಮಾತ್ಮನ ನಾಮಗಳು, ರೂಪಗಳು, ಭಾವಗಳು ಇವನ್ನು ಚೆನ್ನಾಗಿ ವರ್ಣಿಸಿದ್ದಾರೆ.

ಈ ಪರಮಾತ್ಮನ ದರ್ಶನವಾಗಬೇಕಾದರೆ ಬಹಳ ಸಾಧನೆಮಾಡಿ ಸಫಲರಾದ, ಸಿದ್ಧರಾದ ಯೋಗಿಗಳಿಗೆ ಮಾತ್ರ ಸಾಧ್ಯ.

ಈ ಪರಮಾತ್ಮನು ಈ ರೀತಿ ಆತ್ಮ ಮತ್ತು ಪರಮಾತ್ಮ ಸ್ವರೂಪನಾಗಿ ಸಕಲರ ಹೃದಯದಲ್ಲಿಯೂ ಇದ್ದಾನೆ. ತಿಳಿಯಲು, ನೋಡಲು, ಭಾವಿಸಲು ಆತ್ಮದರ್ಶನಮಾಡಲು ಭಗವಂತನ ಕೃಪೆ ಬೇಕು.

**811. ಮಹಾಹಂಸಾಯ ನಮಃ**

ಹಂಸ - ಹೃದಯದ ಬಡಿತದ ಶಬ್ದ, ಉಸಿರಾಡುವ ಶಬ್ದಕ್ಕೆ ಹಂಸ ಎಂದು ಹೇಳುತ್ತಾರೆ. ಇದು ಸೋऽಹಂ, ಅಹಂ ಸಃ'' ಎನ್ನುವುದರ ಸಂಕ್ಷೇಪ ಶಬ್ದ.

ಸಃ - ಎಂದರೆ ಅವನು ಎಂದರೆ ಪರಮಾತ್ಮನು. ಅಹಂ - ಎಂದರೆ ''ನಾನೇ'' ಎಂದರೆ ನನ್ನಲ್ಲಿರುವ ಆತ್ಮರೂಪಿಯಾದ ತೇಜಸ್ಸು ಅಥವಾ ತೇಜೋ ರೂಪದಿಂದ ಪರಮಾತ್ಮನಿಂದಲೇ ಬಂದ ಆತ್ಮ.

ಇದು ಪರಮ ಉಚ್ಚವಾದ ಜ್ಞಾನ. ಇದೇ ಉದಾತ್ತವಾದ ಎರಡು, ಎಂದರೆ ಆತ್ಮ, ಪರಮಾತ್ಮ ಬೇರೆ. ನಾನು, ಪರಮಾತ್ಮ ಬೇರೆ ಎಂದ ವಾದವನ್ನು ಏಕೀಕರಿಸಿ ಎರಡೂ ಒಂದೇ ಆತ್ಮನಿಗೂ ಪರಮಾತ್ಮನಿಗೂ ಭೇದವಿಲ್ಲ ಎಂಬ ಜ್ಞಾನ, ಹಂಸಜ್ಞಾನ ಅಥವಾ ಮಹಾನ್ ಹಂಸಜ್ಞಾನ.

ಗುರುಗೀತೆಯಲ್ಲಿ ಹಂಸಜ್ಞಾನವನ್ನು ಈ ರೀತಿ ಹೇಳಿದೆ -

*''ಸೋऽಹಂ । ಸೋऽಹಂ । ಸೋऽಹಂ । ಸೋऽಹಂ । ಸೋऽಹಂ ।''*

''ಒಂದೇ ಉಸಿರಿನಲ್ಲಿ ಸೋऽಹಂ ಎಂದಾದರೂ ಆಗಬಹುದು ಅಹಂಸೋ ಎಂದಾದರೂ ಆಗಬಹುದು. ಇದು ಅದಾದರೂ ಸರಿ ಅದು ಇದಾದರೂ ಸರಿ - ಗುಟ್ಟು ಎರಡೂ ಒಂದೇ''.

*ಹಂಸಾಕ್ಷಮಾಲಾಂಬರ ಉಚ್ಚ ಆನಂದ ಭೈರವಾಯ ನಮಃ ॥*
*''ಹಂಸೋ ಗಣೇಶೋ ವಿಧಿರೇವ ಹಂಸೋ ।*
*ಹಂಸೋ ಹರಿಃ ಹಂಸಮಯಶ್ಚ ಶಂಭುಃ ।*
*ಹಂಸಶ್ಚ ಜೀವೋ ಗುರು ದೇವ ಹಂಸೋ ।*
*ಹಂಸೋऽಹಮಾತ್ಮಾ ಪರಮಾತ್ಮಾ ಹಂಸಃ ॥*
*ಓಂ ನಮಃ ಶ್ರೀ ಗುರುವೇ ದೇವಾಯ ಪರಮಪುರುಷ*
*ಸರ್ವ ದೇವತಾ ವಶೀಕರಾಯ ಸರ್ವಾರಿಷ್ಟವಿನಾಶಾಯ*

*ಸರ್ವಮಂತ್ರ ಛಿದನಾಯ ತ್ರೈಲೋಕ್ಯಂ ವಶಮಾನಾಯ*
*ಓಂ ಗುರುಂ ಓಂ ಓಂ ಓಂ ಸ್ವಾಹಾ ॥" ಇತಿ ಮಂತ್ರಃ ॥*
*ಓಂ ಗುರುದೇವಾಯ ವಿದ್ಮಹೇ ಪರಮಗುರುಭ್ಯೋ ಧೀಮಹಿ ।*
*ತನ್ನೋ ಗುರುಃ ಪ್ರಚೋದಯಾತ್ । ಲಕ್ಷಮೇತಂ*
*ದ್ವಾದಶ ಸಹಸ್ರಮಂತ್ರಂ ಜಪಃ ಪುರಶ್ಚರಣ ಮುಚ್ಯತೇ*
*ಓಂ ಓಂ ಓಂ ಸ್ವಾಹಾ । ಗುರು ಗುರುಭ್ಯೋ ನಮಃ ಸ್ವಾಹಾ ॥*
*ಸೋಽಹಂ ಹಂಸಃ ಇತಿ ಬೀಜಮಂತ್ರಂ । ಹಂಸ ಹಂಸಾಯ*
*ವಿದ್ಮಹೇ। ಪರಮ ಹಂಸಾಯ ಧೀಮಹಿ। ತನ್ನೋ ಹಂಸಃ ಪ್ರಚೋದಯಾತ್॥*
*ಗುಹ್ಯಾದ್ಗುಹ್ಯತರಾ ವಿದ್ಯಾ ಗುರುಗೀತಾ ವಿಶೇಶತಃ ।*
*ತತ್ಪ್ರಸಾವಾಚ್ಚ ಶ್ರೋತವ್ಯಂ ಸೂತ ಮೇ ವದ ।*

ಗುರುವಿನ ಮಹತ್ವವನ್ನು ತಿಳಿಸುತ್ತದೆ ಮತ್ತು "ಹಂಸಃ" ದ ಮಹತ್ವವನ್ನು ತಿಳಿಸುತ್ತದೆ.

**812.** ಗ್ರಹಮಾಲಾಯ ನಮಃ

ಗ್ರಹ - ಎಂದರೆ ಗ್ರಹಗಳ, ಮಾಲ - ಎಂದರೆ ಹಾರ ಎಂದರ್ಥ.

ಗ್ರಹಗಳನ್ನೇ ತನ್ನ ಹಾರವನ್ನಾಗಿ ಮಾಡಿಕೊಂಡಿರುವವನು. ಗ್ರಹಗಳನ್ನೇ ತನ್ನ ಸುತ್ತಲೂ ತಿರುಗುವ ಹಾಗೆ ಮಾಡಿಕೊಂಡಿರುವವನು, ಎಂದರೆ ತನ್ನನ್ನೇ ಕೇಂದ್ರವನ್ನಾಗಿ ಮಾಡಿಕೊಂಡು ಸಕಲ ಗ್ರಹಗಳೂ ತನ್ನ ಸುತ್ತಲೂ ನಿರಂತರ ತಿರುಗುವ ಹಾಗೆ ಮಾಡಿಕೊಂಡಿರುವವನು - ಎಂದರೆ ಸೂರ್ಯನಾರಾಯಣ - ಸೂರ್ಯನ ಸುತ್ತಲೂ ಗ್ರಹಗಳು ಸೂರ್ಯಮಂಡಲದಲ್ಲಿ ನಿರಂತರ ತಿರುಗುತ್ತಿರುತ್ತವೆ. ಸೂರ್ಯನೇ ಪರಮಾತ್ಮನ ಕಣ್ಣು. ಈ ಕಣ್ಣಿನಿಂದ ಸೂರ್ಯನು ಹುಟ್ಟಿದನು - "ಚಕ್ಷೋಸ್ಸೂರ್ಯೋಽಜಾಯತ" ಎಂದು ಪುರುಷ ಸೂಕ್ತದಲ್ಲಿ ಹೇಳಿದೆ.

ಪರಮಾತ್ಮನೇ ಸೃಷ್ಟಿಕರ್ತ. ಆತನು ಸೃಷ್ಟಿಸಿದ್ದೆಲ್ಲವೂ ಸ್ವತಂತ್ರವಾಗಿರದೆ ಆತನನ್ನೇ ಕೇಂದ್ರವಾಗಿರಿಸಿ ಆತನನ್ನೇ ಸಕಲ ಆಗು ಹೋಗುಗಳಿಗೂ ನೋಡುತ್ತಿರುತ್ತವೆ - ಇದೇ ಗ್ರಹಗಳಿಗೂ ಅನ್ವಯಿಸುತ್ತದೆ - ಆದ್ದರಿಂದ - ಗ್ರಹಮಾಲಿ.

ಅಥವಾ

ಪರಮಾತ್ಮನ ಅಂಶವಾದ ಆತ್ಮಗಳಿಗೂ ಅವುಗಳಿರುವ ಶರೀರಗಳಿಗೂ ಈ ಗ್ರಹಗಳು ಬಿಟ್ಟಿಲ್ಲ. ಆತ್ಮಗಳಿಗೂ ಗ್ರಹಗಳು ಮಾಲೆಯಾಗಿ ಸುತ್ತುತ್ತಿರುತ್ತವೆ ಮತ್ತು ಆತ್ಮನಿಗೆ ದೇಹಗಳ ಮೂಲಕ ಕಾಲ ದೇಶಗಳಲ್ಲಿ ಫಲಾಫಲಗಳನ್ನು

ತಮ್ಮ ತಮ್ಮ ಶಕ್ತಿಗಳಿಗನುಸಾರವಾಗಿ ನೀಡುತ್ತವೆ. ಇದು ನಿರಂತರದ ಕೆಲಸ. ಒಂದು ಜನ್ಮಕ್ಕಲ್ಲ. ಸದಾ ಸರ್ವಕಾಲದಲ್ಲಿಯೂ ಆತ್ಮವೂ ಒಂದು ದೇಹದಿಂದ ಮುಂದಿನ ದೇಹಕ್ಕೆ ಹೋದರೂ ಈ "ಆತ್ಮ - ಗ್ರಹಮಾಲೆ" ಗಳ ಸಂಬಂಧ ನಿರಂತರ, ಬಿಡಿಸಲಾಗದುದು - ಇದು ಪರಮಾತ್ಮನ, ಸೃಷ್ಟಿಕರ್ತನ ಸಂಕಲ್ಪ.

813. ಗುಹ್ಯಾಯ ನಮಃ

ಗುಹ್ಯ - ಎಂದರೆ ಬಹಳ ಗೋಪ್ಯವಾದುದು, ಗುಟ್ಟಾಗಿರುವುದು - ಎಂದರೆ ಯಾರಿಗೂ ಸುಲಭವಾಗಿ ತಿಳಿಯುವಂತಹದಲ್ಲ ಪರಮಾತ್ಮನ ವಿಚಾರ. ಆತ್ಮದ ತತ್ತ್ವವಿಚಾರ, ಆತ್ಮಬೋಧ - ಇವುಗಳ ವಿಚಾರ ತಿಳಿಯಬೇಕಾದರೆ ಬಹಳ ಸಾಧನೆಮಾಡಿರಬೇಕು. ಸಾಮಾನ್ಯವಾಗಿ ತಿಳಿಯುವುದಿಲ್ಲ. ಸಂಸ್ಕಾರ, ಪರಮಾತ್ಮನ ಕೃಪೆ, ಕಾಲ ದೇಶಗಳ ಅನುಕೂಲತೆ ಎಲ್ಲ ಸಿದ್ಧಿಸಿರಬೇಕು. ಈಗ ಈ ವಿಚಾರ ಹೊಳೆಯುವುದಕ್ಕೂ ಅವನ ಸಂಕಲ್ಪವೇ ಕಾರಣ, ಅವನ ಕೃಪೆಯೇ ಕಾರಣ.

ಅಥವಾ

ಗುಹ್ಯ - ಗುಹೆಯಲ್ಲಿ ವಾಸಮಾಡುವವನು. ಹೃದಯವೆಂಬ ಗುಹೆಯಲ್ಲಿ ನಿರಂತರ ವಾಸಮಾಡುವವನು - ಅವನ ತೇಜೋಮಯ ಅಂಶವಾದ ಆತ್ಮ - ಅರ್ಥಾತ್ ಅವನೇ - ಪರಮಾತ್ಮನೇ! ಅಧ್ಯಾತ್ಮಹೃದಯವೆಂಬ ಗುಹಾಮಂದಿರ - ಹೃನ್ಮಂದಿರ.

ಅಥವಾ

ಪರಮ ಪವಿತ್ರವಾದ ಹೃದಯ ಮಂದಿರದ ಗುಹೆಯಲ್ಲಿ ಗೋಪ್ಯವಾಗಿ ವಾಸಮಾಡುವವನು - ಪರಮಾತ್ಮ - ಅಥವಾ -

ಸಕಲ ಭೂಮಂಡಲದಲ್ಲಿ ಸುತ್ತಲೂ ಇರುವ ಸಪ್ತಸಾಗರ - ಸಪ್ತದ್ವೀಪದ ಆಚೆ ಇರುವ ಲೋಕಾಲೋಕ - ಸಪ್ತಸಾಗರ ಮೇಖಲನಾದ ಭಗವಂತ - ಇವನು ಅಲ್ಲಿ ನಿಂತು ಗುಹ್ಯವಾಗಿ ಇದ್ದು ಎಲ್ಲವನ್ನು ಅಖಿಲಾಂಡ ಕೋಟ ಬ್ರಹ್ಮಾಂಡಗಳನ್ನು ಸೃಷ್ಟಿಸಿ ಕೇವಲ ನಾಯಕನಾಗಿರುವ - ಗುಹ್ಯನು - ಪರಮಾತ್ಮ - ಏಕಾಂತನು - ರಹಸ್ಯನು.

814. ಗುಪ್ತಾಯ ನಮಃ

ಗುಪ್ತನು - ಎಂದರೂ ಸಹ ರಹಸ್ಯವಾಗಿರುವವನು.

ಜೀವಕೋಟಿಯು ಅನಾದಿಕಾಲದಿಂದಲೂ ಇವನನ್ನು ಹುಡುಕುತ್ತಿದ್ದರೂ ರಹಸ್ಯವಾಗಿಯೇ ಉಳಿದಿರುವವನು.

ಪರಮಾತ್ಮನ ರೂಪ, ಭಾವ, ಏನೇನೇ ರೀತಿ ನಾವು ಊಹಿಸಿದರೂ

ಸರ್ವರೀತಿಯಲ್ಲಿಯೂ ಅಭೇದ್ಯನು - ಹೇಗೇ ಪ್ರಯತ್ನಪಟ್ಟರೂ ಅವನು ಅವನ ಸಂಕಲ್ಪದಂತೆ ಗುಪ್ತನಾಗಿಯೇ ಉಳಿದಿದ್ದಾನೆ. ನಿರಾಕಾರನೂ ಸಾಕಾರನೂ ಎಂದು ನಮ್ಮ ಮನಸ್ಸು ನಿರ್ಧಾರಕ್ಕೆ ಬಂದರೂ ಮತ್ತೆ ಅವನು ಇವೆರ‍ ಅಲ್ಲದ ಮೇರೆ ಮೀರಿದವನಾಗಿಯೇ ಗುಪ್ತನಾಗಿಯೇ ಉಳಿದಿರುತ್ತಾನೆ - ಇ... ಪರಮ ರಹಸ್ಯವಾದದು. ವೇದಾದಿಗ್ರಂಥಗಳು, ಪುರಣೇತಿಹಾಸಗಳು ಹೊಗಳುವುದು, ಸ್ತುತಿಸುವುದು, ಪಾಡಿಪೊಗಳಿ ಕೊಂಡಾಡಿ ನಲಿಯುವುದು ಅವನ ಈ ಗುಪ್ತನಾಗಿರುವಿಕೆಯನ್ನೇ, ವಿಚಿತ್ರವಾದದ್ದನ್ನೇ - ಅದರಿಂದಲೇ ಅವನು ಗುಪ್ತನು.

ಅಥವಾ ಆತ್ಮನೂ ಸಹ ಗುಪ್ತನೇ! ಆತ್ಮನನ್ನು ತಿಳಿಯುವಂತಿಲ್ಲ. ತಿಳಿದರೂ ತಿಳಿಯದಿರುವುದು ಇನ್ನೂ ಇರುತ್ತದೆ. ತಿಳಿದದ್ದನ್ನೇ ಯಾರಿಗೂ ಹೀಗೆಂದು ಹೇಳಲು ಅಸಮರ್ಥರು ನಾವು - ಅದರಿಂದ ಆತ್ಮನೂ ಸಹ ಗುಪ್ತನೇ!!

**815.** ಗುರವೇ ನಮಃ

ಗುರು - ಪರಮಾತ್ಮನು, ಗುರು - ಜ್ಞಾನವನ್ನು ಆತ್ಮಜ್ಞಾನವನ್ನು ತಿಳಿಸುವವನು. ಪರಮಾತ್ಮನ ಎಡೆಗೆ ದಾರಿತೋರುವವನು - ಆ ದಾರಿಯಲ್ಲಿ ನಮ್ಮನ್ನು ತಿಳಿಸುವವನು, ಬಿಡುವವನು - ಪರಮಾತ್ಮನಿಗಿಂತಲೂ ಶಕ್ತಿವಂತನು, ಕಾಪಾಡುವವನು. ಗುರುಗೀತೆಯಲ್ಲಿ ಗುರುವಿನ ವಿಚಾರ ವಿಶದವಾಗಿದೆ. ಇದನ್ನು ಓದಬೇಕು, ತಿಳಿಯಬೇಕು, ತಲ್ಲೀನವಾಗಬೇಕು. ಪರಮಾತ್ಮನನ್ನೇ ಗುರುವು ಪ್ರತಿಬಿಂಬಿಸುತ್ತಾನೆ. ಅವನನ್ನು ಪ್ರತಿನಿಧಿಸುತ್ತಾನೆ. - ಗುರುತತ್ವವೇ ಪರತತ್ವ. ಗುರುಗೀತೆಯನ್ನು ಓದಬೇಕು - ಓದಿ ಆನಂದಿಸಬೇಕು. ಅದು ಸಿಕ್ಕುವುದೇ ಪರಮಾತ್ಮನ ಕೃಪೆಯಿಂದ. ನಮ್ಮ ಸಂಸ್ಕಾರ ಬಲದಿಂದ. ಕರ್ಮ ಸವೆದಿರುವುದರಿಂದ - ಇಲ್ಲದೇ ಇಲ್ಲ - ಗುರುವೇ ನಮಃ.

*ನಮೋ ಮೂಲಾಧಿವಾಸಾಯ ನೀಲವಸ್ತ್ರಧರಾಯ ಚ ।*
*ಪೀತವಸ್ತ್ರಾಯ ವಸ್ತ್ರಾಯ ರಕ್ತವಸ್ತ್ರಧರಾಯ ಚ ॥137॥ (816-820)*

**816.** ಮೂಲಾಧಿವಾಸಾಯ ನಮಃ

ಮೂಲ - ಅಧಿವಾಸ

ಮೂಲ - ಎಂದರೆ ಎಲ್ಲಕ್ಕೂ ಮೊದಲೇ ಇರುವುದು ಯಾವುದೋ ಅದು - ಪರಮಾತ್ಮನು.

ಅಧಿ - ಎಂದರೆ ಪರಮಾತ್ಮನಿಗೆ, ಇಹ ಮತ್ತು ಪರಕ್ಕೂ ಮೀರಿದುದು ಯಾವುದೋ ಅದು - ಆ ಸ್ಥಾನ, ವಾಸ - ಅಲ್ಲಿ ಇರುವವನು.

ಪ್ರಳಯಕಾಲದಲ್ಲಿ ವಟಪತ್ರಶಾಯಿಯಾಗಿ ಇದ್ದವನು ಯಾರೋ ಅವನು

- ಪರಬ್ರಹ್ಮ - ಪರಮಾತ್ಮ - ಪರಮೇಶ್ವರ ಎಲ್ಲ ನಾಮದಿಂದ ಕರೆದರೂ ಅವನೇ. ಅವನೇ ಮೂಲಾಧಿವಾಸ.

ಅಥವಾ

ಆತ್ಮಗಳು ಪರಬ್ರಹ್ಮದಲ್ಲಿಯೇ ಹಿಂದಿನ ಕಲ್ಪಾಂತದಲ್ಲಿ ಐಕ್ಯವಾದ್ದರಿಂದ ಅವೂ ಸಹ ಮೂಲನಾದ ಪರಬ್ರಹ್ಮನಲ್ಲಿ ಪ್ರಳಯಕಾಲದಲ್ಲಿ ಪರಮಾತ್ಮನಲ್ಲಿ (ಅಧಿ) ವಾಸಮಾಡುತ್ತವೆ. ಅದರಿಂದ ಆತ್ಮಗಳು ಸಹ - ಮೂಲಾಧಿವಾಸಗಳೇ.

ಅಥವಾ

ಪರಮಾತ್ಮನಲ್ಲಿ ವಾಸಮಾಡುವುದಕ್ಕಿಂತ ಉತ್ತಮವಾದ ಸ್ಥಿತಿ ಬೇರೊಂದಿಲ್ಲ. ಅದರಿಂದ ಆತ್ಮಗಳು - ಮೂಲಾಧಿವಾಸಗಳೇ.

ಅಥವಾ

ಶರೀರಗಳಲ್ಲಿ ವಾಸಮಾಡುವುದಕ್ಕಿಂತ ಪರಬ್ರಹ್ಮನ ಚಿಂತನೆಯಲ್ಲಿ ನಿರಂತರ ಬುದ್ಧಿ ಮನಗಳನ್ನು ಐಕ್ಯಮಾಡುವುದು ಅತಿ ಉತ್ತಮ ಸ್ಥಿತಿ - ಇದು ಮೂಲಾಧಿವಾಸ ಸ್ಥಿತಿ. ಅಥವಾ,

ಎಲ್ಲಿಂದ ಆತ್ಮವು / ದೇಹವು ಬಂದಿತೋ ಅಲ್ಲಿ ಮೂಲದಲ್ಲಿ ತಮ್ಮ ತಮ್ಮ ಸ್ಥಾನ ಅಥವಾ ವಸ್ತು (ಪಂಚಭೂತಗಳು, ಇಂದ್ರಿಯ ಅಧಿ ದೇವತೆಗಳು) ಅಲ್ಲಿ ವಾಸಮಾಡಿದರೆ ಅಥವಾ ಅವುಗಳ ಚಿಂತೆಯಲ್ಲಿಯೇ ಮನಸ್ಸನ್ನು ಮತ್ತು ವಿವೇಕ ಬುದ್ಧಿಯನ್ನು ತೊಡಗಿಸಿದರೆ ಅದೂ ಸಹ ಮೂಲಾಧಿವಾಸವೇ ಆಗುತ್ತದೆ.

**817. ನೀಲವಸ್ತ್ರಧರಾಯ ನಮಃ**

ನೀಲಿಯ ಅಥವಾ ಆಕಾಶವರ್ಣದ ವಸ್ತ್ರವನ್ನು ಧರಿಸಿರುವವನು ಯಾರೋ ಅವನು ಪರಮಾತ್ಮ.

ನೀಲ - ಇಂದ್ರ ನೀಲಮಣಿ, ರತ್ನಗಳಿಂದ ಅಲಂಕರಿಸಲ್ಪಟ್ಟವನು. ಶ್ರೀದೇವಿಯೇ ನೀಲಮಣಿ, ರತ್ನ, ಸಂಪತ್ತು ಇವುಗಳಿಂದ ಶೋಭಿಸುವವನು / ಶೋಭಿಸುವ ವಸ್ತ್ರವನೇ ಧರಿಸಿರುವವನು.

ನೀಲ - ಆಕಾಶವನ್ನೇ ವಸ್ತ್ರವಾಗಿ ಧರಿಸಿರುವವನು.

ನೀಲ - ನೀಲಿಯ ಆಕಾಶದಲ್ಲಿ ನಕ್ಷತ್ರ, ಚಂದ್ರರು ಹೊಳಪಿನಿಂದ ಶೋಭಿಸುತ್ತಾರೆ. ಅಂದರೆ ಪರಮಾತ್ಮನ ದಿವ್ಯತೇಜೋಮಯ ವದನವನ್ನು ಮತ್ತು ಅದರ ಬೆಳಕನ್ನು ಹೇಳಬೇಕೇ!

**818. ಪೀತವಸ್ತ್ರಾಯ ನಮಃ**

ಪೀತ - ಹಳದಿ, ಬಂಗಾರದ ವರ್ಣ.

ಪೀತವಸ್ತ್ರಧರ - ಬಂಗಾರ ವರ್ಣದ ವಸ್ತ್ರವನ್ನು ಉಟ್ಟಿರುವವನು, ನೀಲಮೇಘಶ್ಯಾಮನಾದ ಪರಬ್ರಹ್ಮನಿಗೆ ಬಂಗಾರದ ವರ್ಣದ ವಸ್ತ್ರವು ಬಹಳವಾಗಿ ಮೆಚ್ಚುತ್ತದೆ. ನೀಲಿಯ ಆಕಾಶದಲ್ಲಿ ಹಳದಿಯ ಮಿಂಚು ಬಂದರೆ ಯಾವ ರೀತಿ ಎದ್ದು ಶೋಭಿಸುವುದೋ ಹಾಗೆ ಪರಮಾತ್ಮನು ಚೆನ್ನಾಗಿ ಕಾಣುತ್ತಾನೆ.

ಮಹಾವಿಷ್ಣು, ಶ್ರೀಹರಿ, ಶ್ರೀಕೃಷ್ಣರು ಈ ವಸ್ತ್ರದಲ್ಲಿ ಬಹಳ ಮನಮೋಹಕರಾಗಿ ಕಾಣುತ್ತಾರೆ ಎಂದು ವರ್ಣಿಸಲ್ಪಟ್ಟಿದೆ. ಋಷಿ ಮುನಿಗಳು, ತಪಸ್ವಿಗಳು ವರ್ಣಿಸಿ ಪ್ರಾರ್ಥಿಸುವ ರೀತಿ ಇದು. ಮಹಾ ತಪಸ್ಸುಮಾಡಿ ಪರಮಾತ್ಮನನ್ನು ಸಾಕ್ಷಾತ್ತಾಗಿ ಪ್ರತ್ಯಕ್ಷಮಾಡಿಸಿಕೊಂಡು ನೋಡಿದಾಗ ಭಕ್ತರು ಕೊಂಡಾಡಿದ ರೀತಿ ಇದು. ಇನ್ನು ಬ್ರಹ್ಮದೇವರು ನರಸಿಂಹನಿಗೆ ಈ ರೀತಿ ವರ್ಣಿಸುವುದು ಮಹತ್ತಾದ್ದು!!

**819. ವಸ್ತ್ರಾಯ ನಮಃ**

ವರ್ಣಿಸಲಸಾಧ್ಯವಾದ ಬಣ್ಣದ ವಸ್ತ್ರವನ್ನು ಧರಿಸಿರುವವನು. ಎಂದರೆ ಇಂತಹದೇ ರೀತಿ ಇರುವವನು, ಇಂತಹದೇ ಬಣ್ಣದ ವಸ್ತ್ರವನ್ನು ಧರಿಸಿದ್ದಾನೆ ಎಂದರೆ ಅವನನ್ನು ನಿರ್ದೇಶಿಸಿದ ಹಾಗೆ ಆಗುತ್ತದೆ. ಆಗ ಪರಮಾತ್ಮನು ನಮ್ಮ ಮನಸ್ಸಿನ ಅಳತೆ, ಪರಿಮಿತಿಗೆ ಒಳಪಡುತ್ತಾನೆ. ಆದರೆ ಅವನು ಇದಕ್ಕೆ ಅಪವಾದ. ಇದನ್ನು ಮೀರಿದವನು. ಅದರಿಂದ ವಸ್ತ್ರಗಳ ಬಣ್ಣಗಳನ್ನು ಹೇಳಿ ಹೊಗಳಲು ಹೋಗಿ ವರ್ಣವೇ ಗುರುತಿಸಲಾಗದ ರೀತಿಯ ವಸ್ತ್ರವಾದ್ದರಿಂದ ವಸ್ತ್ರಾಯ ನಮಃ ಎಂದಿರುವುದು.

ಅಥವಾ ನೋಡುತ್ತ ನೋಡುತ್ತ ಗ್ರಹಿಸಿ ಹೇಳುವುದರೊಳಗೆ ಬಣ್ಣಗಳು ಬದಲಾಯಿಸುವುದರಿಂದ ''ವಸ್ತ್ರಾಯ ನಮಃ'' ಎಂದಿರಬೇಕು!!

**820. ರಕ್ತವಸ್ತ್ರಧರಾಯ ನಮಃ**

ರಕ್ತದ ಎಂದರೆ ಕೆಂಪು ಬಣ್ಣದ ವಸ್ತ್ರವನ್ನು ಧರಿಸಿರುವವನು - ಪರಮಾತ್ಮ, ಆತ್ಮ.

ಅಥವಾ ಆತ್ಮನು ರಕ್ತಮಯವಾದ ಶರೀರಗಳನ್ನು ಹೊಂದಿ ಅದರಲ್ಲಿ ವಾಸಿಸುವುದರಿಂದ ರಕ್ತವಸ್ತ್ರಧರನು.

*ರಕ್ತಮಾಲ್ಯವಿಭೂಷಾಯ ರಕ್ತಗಂಧಾನುಲೇಪಿನೇ ।*
*ಧುರಂಧರಾಯ ಧೂರ್ತಾಯ ಸುಧರ್ಮಾಯ ಧನಾಯ ಚ ।।138।।*
*(821-826)*

**821. ರಕ್ತಮಾಲ್ಯವಿಭೂಷಾಯ ನಮಃ**

ರಕ್ತ - ಎಂದರೆ ರಕ್ತ, ಅಥವಾ ರಕ್ತವರ್ಣ ಅಥವಾ ರಕ್ತದಿಂದಾದ ವಸ್ತುಗಳಿಂದ ಮಾಡಿದ, ಮಾಲ್ಯ - ಹಾರದಿಂದ, ಅಥವಾ ಹಾರಗಳಿಂದ,

ವಿಭೂಷಾಯ - ವಿಶೇಷವಾಗಿ ಅಲಂಕರಿಸಲ್ಪಟ್ಟವನು ಅಥವಾ ತನಗೆ ತಾನೇ ಅಲಂಕರಿಸಿಕೊಂಡಿರುವವನು - ಯಾರೋ ಅವನು - ನರಸಿಂಹಸ್ವಾಮಿ (ಹಿರಣ್ಯಕಶಿಪುವನ್ನು ಸಂಹಾರಮಾಡಿದ ತಕ್ಷಣದ ನರಸಿಂಹಸ್ವಾಮಿಯ ದೇಹ), ಅಥವಾ ಮಾತಾ ಕಾಳಿಕಾದೇವಿ / ಭದ್ರಕಾಳಿ.

ಈ ನಾಮವು ಬ್ರಹ್ಮದೇವರಿಂದ ಹೇಳಲ್ಪಟ್ಟು ಸಾಕ್ಷಾತ್ ನರಸಿಂಹಸ್ವಾಮಿಯನ್ನೇ ಸೂಚಿಸುತ್ತದೆ. ಸಹಸ್ರನಾಮವನ್ನು ಬ್ರಹ್ಮದೇವರು ಹಿರಣ್ಯಕಶಿಪುವನ್ನು ಸಂಹರಿಸಿದ ಕ್ಷಣದಲ್ಲಿ ಕಂಡ ಉಗ್ರ ಮತ್ತು ಕರಾಳವಾದ ರೂಪ - ರಾಕ್ಷಸನ ಹೊಟ್ಟೆಯನ್ನು ಉಗುರುಗಳಿಂದ ಬಗೆದು ಅದರಲ್ಲಿದ್ದ ಕರುಳುಗಳನ್ನು ಮಾಲೆ ಮಾಲೆಗಳಾಗಿ ತೆಗೆದು ತನ್ನ ಕೊರಳಿಗೆ ಹಾರ ರೂಪದಲ್ಲಿ ಹಾಕಿಕೊಂಡಿದ್ದನು. ಸಿಂಹದ ಮುಖ, ಕರುಳಿನ ಮಾಲೆ, ರಕ್ತಮಾಲ್ಯವಿಭೂಷನು, ರಾಕ್ಷಸನ ರಕ್ತವನ್ನು ಪಾನಮಾಡಿದ ಸಿಂಹದ ಮುಖ, ಮೈಮೇಲೆ ಸುರಿಯುತ್ತಿರುವ ರಕ್ತದ ಕೋಡಿ, ಮೈಮೇಲೆ ಅಲ್ಲಲ್ಲಿ ಬಿದ್ದಿರುವ ಮಾಂಸದ ಚೂರುಗಳು, ಮೇಲಾಗಿ ಕೋಪಗೊಂಡಿದ್ದ ಸಿಂಹದ ಮುಖ, ರಾಕ್ಷಸನನ್ನು ಕೊಂದೆನೆಂಬ ಸಂತೋಷದ ಹೀ ಹ್ಞೀ ಹ್ಞೀ ಕಾರ, ಪ್ರಹ್ಲಾದನ ಮೇಲಿನ ಪ್ರೀತಿ, ಉಗ್ರದಲ್ಲೂ ಭಕ್ತನ ಮೇಲಿನ ಪ್ರೀತಿ, ಮುಂದೆ ಬ್ರಹ್ಮದೇವರು, ಹಿಂದೆ ಲಕ್ಷ್ಮಿ, ಅಲ್ಲಿ ಪ್ರಹ್ಲಾದ ಕಂದ, ಹಿಂದೆ ದೇವ ದೇವತೆಗಳ ಗಣ, ನೆರೆದವರ ಮುಖದಲ್ಲಿ ಭಯ, ಭೀತಿ, ಕಾತುರ, ಉಗ್ರದಿಂದ ಹೇಗೆ ಶಾಂತನಾಗುವನೆಂಬ ವಿಸ್ಮಯ - ಮುಂತಾಗಿ ಸನ್ನವೇಶವಿರುವಾಗ ಬ್ರಹ್ಮ, ಪ್ರಹ್ಲಾದ ಲಕ್ಷ್ಮೀ, ನರಸಿಂಹರೇ ಪ್ರಧಾನರು - ಸಕಲ ವಿಶ್ವವನ್ನು ಕಾಪಾಡಬೇಕು - ಬ್ರಹ್ಮರು ಸ್ತೋತ್ರಮಾಡಿ ಸ್ತೋತ್ರದ ಕೊನೆ ಕೊನೆಯ ಹಂತವನ್ನು ಮುಟ್ಟುತ್ತಿದ್ದಾರೆ - ನರಸಿಂಹನ ಮಾತು, ಕೃತಿಗಾಗಿ ಕಾಯುತ್ತಿದ್ದಾರೆ - ಆಗ ಈ ನಾಮ - ರಕ್ತಮಾಲ್ಯವಿಭೂಷಾಯ ನಮಃ.

**822. ರಕ್ತಗಂಧಾನುಲೇಪಿನೇ ನಮಃ**

ರಕ್ತ - ರಕ್ತದ, ರಕ್ತವರ್ಣದ.

ಗಂಧ - ಗಂಧದಿಂದ

ಅನುಲೇಪಿನೇ - ಯಥೇಚ್ಛವಾಗಿ ಹಚ್ಚಿಕೊಂಡಿರುವವನು ಯಾರೋ ಅವನು - ಸಾಕ್ಷಾತ್ ನರಸಿಂಹನು - (ಮೇಲೆ ಹೇಳಿದ ರಾಕ್ಷಸನ ಸಂಹಾರವಾದ ಸಮಯದಲ್ಲಿ ರಕ್ತದಿಂದಲೇ ಲೇಪನನಾಗಿದ್ದನು.)

ಇತರ ಸಮಯದಲ್ಲಿ ರಕ್ತವರ್ಣದ ದಿವ್ಯಗಂಧದಿಂದ ಲೇಪಿಸಿದ ದೇಹದವನಾಗಿದ್ದನು. ಇದರಿಂದ ಸುಗಂಧವು ಹೊರಸೂಸಿ ವಾತಾವರಣವನ್ನು ದಿವ್ಯವನ್ನಾಗಿ ಮಾಡಿದ್ದಿತು. ನರಸಿಂಹನು ಲಕ್ಷ್ಮಿಯೊಡನೆ ಸುಗಂಧ ಲೇಪನದಿಂದ ಸುಂದರವಾಗಿಯೂ, ಸಂತೋಷಯುಕ್ತನಾಗಿಯೂ ಭೋಗದಿಂದ ಕೂಡಿ ಭೋಗಾನರಸಿಂಹನಾಗಿದ್ದಾನೆ.

823. ಧುರಂಧರಾಯ ನಮಃ

ಧರುಂಧರ - ಭಾರ ಹೊರುವ ಪ್ರಾಣಿ / ಮುಖಂಡ / ನಾಯಕ, ಭಾರ ಹೊರುವ ಶ್ರೇಷ್ಠ ಪುರುಷ.

ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾದ ಪರಮಾತ್ಮನು ಈ ಎಲ್ಲಾ ಬ್ರಹ್ಮಾಂಡಗಳನ್ನು ತನ್ನ "ಏಕಾಂಶೇನ ಸ್ಥಿತೋ ಜಗತ್" - ಸಂಪೂರ್ಣ ಭಾವದಲ್ಲಿ ಎಷ್ಟೋ ಎಣಿಸಲಸಾಧ್ಯವಾದ ಸಂಖ್ಯೆಗಳ ಭಾಗಗಳನ್ನು ಮಾಡಿದರೆ ಅದರಲ್ಲಿ ಒಂದೇ ಒಂದು ಅಂಶಮಾತ್ರದಿಂದ ನಿಂತು ನಡೆಯುತ್ತಿದೆ ಎಂದು ಶ್ರೀಕೃಷ್ಣನು ಅರ್ಜುನನಿಗೆ ವಿಶ್ವರೂಪ, ವಿಭೂತಿ ಯೋಗದಲ್ಲಿ ಹೇಳಿದ್ದಾನೆ. ಎಂದಮೇಲೆ ಇವನು ಧುರಂಧರ. ಇಷ್ಟು ಭಾರವನ್ನು ಹೊತ್ತರೂ ಇನ್ನೂ ಇಷ್ಟರ ಎಷ್ಟೋ ಪ್ರಮಾಣದಲ್ಲಿ ಏಕಕಾಲದಲ್ಲಿ ಹೊರುವ ಸಾಮರ್ಥ್ಯವಿದೆ ಎಂದು ಊಹಿಸಿದರೆ ನಮ್ಮ ಊಹೆ ಗುರಿ ಮುಟ್ಟುತ್ತದೆಯೋ ಏನೋ! ತಿಳಿದವರ್ಯಾರು! ಭಾರವೆಂದರೆ ಗಾತ್ರ, ಘನದ ಪ್ರಮಾಣವೊಂದೇ ಅಲ್ಲ! ನಿರಂತರ ಸಂಕಲ್ಪ ರೀತಿಯಲ್ಲಿ ಚಾಚೂ ತಪ್ಪದೇ ಸಕಲ ಜೀವಕೋಟಿ, ಚರಾಚರ ವಸ್ತುಗಳ ಆಗು ಹೋಗುಗಳು ತಪ್ಪದೆ ಏಕ ಕಾಲದಲ್ಲಿ ಏಕಮೇವಾದ್ವಿತೀಯ ಎಂಬಂತೆ ಆಗಿ ನಡೆಸುವವನು ಅವನಲ್ಲದೇ ಮತ್ಯಾರಿಂದ ಸಾಧ್ಯ. ಅಥವಾ ಅವನನ್ನು ಮೀರಿ ಮತ್ಯಾರಿರುವರು? ಇಲ್ಲ - ಅವನೆ, ಅವನೊಬ್ಬನೇ - ಆದರಿಂದ ಅವನು ಧುರಂಧರನು - ಧುರುಂಧರಾಯ ನಮಃ ಎಂದರೆ ನಮಸ್ಕಾರವು ಅವನಿಗೇ ಸೇರುತ್ತದೆ!!

824. ಧೂತಾಯ ನಮಃ

ಧೂ - ಅಲ್ಲಾಡಿಸು, ನಾಶಮಾಡು, ಇತ್ಯಾದಿ.

ಸಕಲ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ನಡೆಸುವವನೂ, ನಡೆಸುತ್ತಿರುವವನು. ಈವರೆಗೆ ನಡೆಸಿದವನು, ಸೃಷ್ಟಿಸಿದವನು, ನಾಶಮಾಡುವವನು - ಸಕಲವೂ ಪರಮಾತ್ಮನೇ! ಅವನೇ ಪರಬ್ರಹ್ಮ, ಆದಿ ದೇವ, ಅಂತ್ಯದೇವ, ಸಕಲವೂ ಅವನೇ! ಧೂತನೂ ಅವನೇ! ಅವಧೂತನೂ ಅವನೇ! ಅವತಾರನೂ ಅವನೇ! - ಧೂತನೂ ಅವನೇ!

ಆತ್ಮನೂ ಪರಮಾತ್ಮನಿಂದ ಹೊರಟು ಮತ್ತೆ ಸೇರುವವರೆಗೆ ಕಾಲಚಕ್ರದಲ್ಲಿ

ಸಿಕ್ಕಿ, ಅನೇಕ ಕೋಟಿ ಶರೀರವನ್ನು ಧರಿಸಿ, ತ್ಯಜಿಸಿ, ಆತ್ಮಜ್ಞಾನವನ್ನು ಯಾವಾಗಲೋ, ಯಾರ ಕೃಪೆಯಿಂದಲೋ ಹೊಂದಿರುತ್ತಾನೆ - ಇವನೂ ಧೂತನೇ! ಆದರೆ ಪರಮಾತ್ಮನ ಅಧೀನದಲ್ಲಿ ಎಲ್ಲವನ್ನು ಅನುಭವಿಸುತ್ತಾನೆ. ಇದೊಂದು ರೀತಿಯಲ್ಲಿ ಧೂತನು - ಆತ್ಮ.

825. ಸುಧರ್ಮಾಯ ನಮಃ

ಪರಮಾತ್ಮನೇ ಧರ್ಮಸ್ವರೂಪಿ, ಉತ್ತಮೋತ್ತಮ ಧರ್ಮ ಸ್ವರೂಪ ಹೊಂದಿರುವವನು - ಸುಧರ್ಮನು.

ಅಧರ್ಮ, ಧರ್ಮ, ಸುಧರ್ಮ ಎಂದು ವಿಭಾಗಿಸಿದರೆ ಪರಮಾತ್ಮನು ಸಾಮಾನ್ಯ ಧರ್ಮವನ್ನು ಸುಧರ್ಮವನ್ನೂ ಎತ್ತಿ ಹಿಡಿದು ಸಂಸ್ಥಾಪಿಸಿದ್ದಾನೆ.

ಧರ್ಮದ ಕಡಿಮೆ ಬಳಕೆ, ಬಳಕೆಯೇ ಇಲ್ಲದ ಸಮಯ, ಧರ್ಮಕ್ಕೆ ವಿರುದ್ಧವಾದ ಕಾಲ, ಕಾರ್ಯಗಳು - ಈ ವಿಪರ್ಯಾಸಗಳು ಹುಟ್ಟಿಕೊಂಡಾಗ ಪರಮಾತ್ಮನು ಧರ್ಮ ಸಂಸ್ಥಾಪನೆಗಾಗಿ ಪ್ರಕಟವಾಗುತ್ತಾನೆ.

*ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।*
*ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥*
*(ಶ್ಲೋಕ 8, ಅಧ್ಯಾಯ 4 ಭಗವದ್ಗೀತಾ)*

ಅಧರ್ಮವನ್ನು ಧರ್ಮವನ್ನು ಸುಧರ್ಮವನ್ನಾಗಿ ಪರಿವರ್ತಿಸುತ್ತಾನೆ - ಎಂದರೆ ಧರ್ಮವು ಇದ್ದ ಹಾಗೇ ಇರುತ್ತದೆ. ಆದರೆ ಉಪಯೋಗಿಸುವವರು ಭ್ರಷ್ಟರಾಗಿರುತ್ತಾರೆ. ಭ್ರಷ್ಟರನ್ನು ಉತ್ತಮರನ್ನಾಗಿ ಪರಿವರ್ತಿಸಲು ಪರಮಾತ್ಮನು ಪ್ರಕಟನಾಗುತ್ತಾನೆ. ತಾನಾಗಿಯೇ ಬರಬೇಕೆಂದಿಲ್ಲ. ಸಜ್ಜನರು, ಸಾತ್ವಿಕರು, ಸಂನ್ಯಾಸಿಗಳು, ಧರ್ಮ ಗುರುಗಳು, ಮುಂತಾದವರ ಮೂಲಕ ತನ್ನ ಸಂಕಲ್ಪವನ್ನು ನೇರವೇರಿಸಿಕೊಳ್ಳುತ್ತಾನೆ. - ಸುಧರ್ಮಾಯ ನಮಃ.

826. ಧನಾಯ ನಮಃ

ಧನ - ಎಂದರೆ ಐಶ್ವರ್ಯ, ಸಂಪತ್ತು ಎಂದರೆ ಧರ್ಮಧನ, ಅರ್ಥದನ, ಕಾಮಧನ, ಮೋಕ್ಷಧನಗಳು - ಇವೆಲ್ಲವನ್ನು ''ಶ್ರೀ'' ಎಂದು ಒಂದುಗೂಡಿಸಬಹುದು. ಪರಮಾತ್ಮನಿಗೆ ಶ್ರೀಯ್ಯೇ ಪರಮ ಪವಿತ್ರಳು. ತನ್ನ ವಕ್ಷಸ್ಥಳದಲ್ಲಿಯೇ ಇರಿಸಿಕೊಂಡಿರುವ ಶ್ರೀಮನ್ನಾರಾಯಣನಿಗೆ ''ಧನ''ದ ಕೊರತೆಯೇ! ಅವನು ಧನದ ಗಣಿ - ಕೊಡುತ್ತಿದ್ದಾನೆ, ಕೋರಿದಷ್ಟು ಕೊಡುತ್ತಾನೆ. ಗಣಿಯು ಕಾಮಧೇನು ಈ ಧನಕ್ಕಿಂತ ಉತ್ತಮವಾದ ಸ್ಥಾನವೊಂದಿದೆ - ಅದೇ ಸರ್ವರೂ ಅಪೇಕ್ಷಿಸುವ ಧನ - ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಸಾರೂಪ್ಯ, ಪುನರಾವೃತ್ತಿರಹಿತ ಶಾಶ್ವತ ಸ್ಥಾನಗಳು. ಇದೇ ಅತ್ಯುತ್ತಮ ಧನ

- ಈ ಧನವು ಅವನಲ್ಲಿಯೇ ಇರುವುದರಿಂದ ಅವನು - ಧನಾಯ ನಮಃ ಎಂದು ನಮಸ್ಕರಿಸಲ್ಪಡುತ್ತಾನೆ.

*ದುರ್ಮದಾಯ ದುರಂತಾಯ ದುರ್ಧರಾಯ ನಮೋ ನಮಃ ।*
*ದುರ್ನಿರೀಕ್ಷಾಯ ಪುಷ್ಟಾಯ ದುರ್ಧರ್ಶಾಯ ದ್ರುಮಾಯ ಚ ॥139॥*
*(827-833)*

**827.** ದುರ್ಮದಾಯ ನಮಃ

ಮದ - ಗರ್ವ, ಆಶೆ.

ದುರ್ಮದ - ಭಯಂಕರವಾದವನು, ಉನ್ಮತ್ತವಾದನು.

ನರಸಿಂಹ ಸ್ವಾಮಿಯು ಹಿರಣ್ಯಕಶಿಪುವನ್ನು ಸಂಹರಿಸಿದ ನಂತರ ಬಹಳ ಭಯಂಕರನಾಗಿದ್ದನು, ಕ್ರೋಧೋನ್ಮತ್ತನಾಗಿದ್ದನು - ದುರ್ಮದನಾಗಿದ್ದನು. - ಅದರಿಂದ ದುರ್ಮದಾಯ ನಮಃ. ಸಹಿಸಲು ಅಸಾಧ್ಯವಾದ ರೂಪವುಳ್ಳವನಾಗಿದ್ದನು.

**828.** ದುರಂತಾಯ ನಮಃ

ಧುರಂತ - ಕೆಟ್ಟ ಕೊನೆ - ದುಃಖದಲ್ಲಿ ಪರ್ಯವಸಾನವಾಗುವುದು. ಪರಮಾತ್ಮನು ಈ ಅವತಾರದಲ್ಲಿ ಸಹಿಸಲಸಾಧ್ಯವಾದ ರೂಪದಲ್ಲಿದ್ದದ್ದರಿಂದ ದುರಂತ ಎಂದು ಹೇಳಲಾಗಿದೆ. ಅವತಾರದ ಸಮಯದಿಂದ ಹಿರಣ್ಯಕಶಿಪುವಿನ ಸಂಹಾರದ ರೀತಿಯನ್ನು ಸೇರಿದ ಭಾಗ ಅತ್ಯಂತ ದುಃಖಮಯವಾದ್ದು. ಆದರೆ ಲೋಕಕಲ್ಯಾಣಕ್ಕಾಗಿ ನಡೆದ ಕಾರ್ಯವಾದ್ದರಿಂದ ಪ್ರಶಂಸಿಬೇಕಾಗಿದೆ. ಎಂತಹ ದುರಂತವೇ ಆದರೂ ಅದು ಪರಮಾತ್ಮನ ಸಂಕಲ್ಪದಂತೆ ನಡೆಯುವುದರಿಂದ ಏನೋ ಒಂದು ಉದಾತ್ತ ಗುರಿಯಿದ್ದೇ ಇರುತ್ತದೆ.

**829.** ದುರ್ಧರಾಯ ನಮಃ

ದು - ರ್ಧರ - ಧರಿಸಲು, ಹೊರಲು, ಸಹಿಸಲು ಅಸಾಧ್ಯವಾದ್ದು, ಭಾರವನ್ನು ಹೊರಲು ಕಷ್ಟತರವಾದ್ದು.

ನರಸಿಂಹಸ್ವಾಮಿಯ ಉಗ್ರರೂಪವನ್ನು ಸಹಿಸಲು ಅಸಾಧ್ಯವಾದ್ದು, ಭಯಂಕರವಾದ್ದು. ಅಥವಾ,

ಸಕಲ ಭೂಮಂಡಲ - ಅಖಿಲಾಂಡ ಕೋಟಿ ಬ್ರಹ್ಮಾಂಡಗಳ ಸೃಷ್ಟಿ, ಸ್ಥಿತಿ, ಲಯ, ಆಗು ಹೋಗುಗಳನ್ನು ನಡೆಯಿಸುವ ಪರಮಾತ್ಮನ ಹೊಣೆ ದುರ್ಧರವಾದುದು, ಇತರ ಯಾರಿಂದಲೂ ಸಾಧ್ಯವಾಗದ ಕೆಲಸ - ಅದರಿಂದ ಅವನು ದುರ್ಧರನು. ಅಥವಾ,

ಪರಮಾತ್ಮನ ಕೋಪ, ಗುರುವಿನ ಕೋಪ, ಅವಕೃಪೆಯನ್ನು ಸಹಿಸಲು, ಅನುಭವಿಸಲು ಅಸಾಧ್ಯವಾದುದು - ಅದರಿಂದ ಅವರು ದುರ್ಧರರು.

ಅಥವಾ

ದುರಂತ, ಅಪಘಾತಗಳನ್ನು ಸಹಿಸಲು ಅಸಾಧ್ಯವಾದುದು - ಅದರಿಂದ ದುರ್ಧರಗಳು - ಪರಮಾತ್ಮನೇ.

ಅಥವಾ

ಪರಮಾತ್ಮನ ಅಗಲಿಕೆಯನ್ನು ಸಹಿಸಲು ಅಸಾಧ್ಯವಾದುದು - ಅದನ್ನು ಕಲ್ಪಿಸುವ ಪರಮಾತ್ಮನೇ ದುರ್ಧರನು - ದುರ್ಧರಾಯ ನಮಃ.

**830. ದುರ್ನಿರೀಕ್ಷಾಯ ನಮಃ**

ನಿರೀಕ್ಷೆ - ಎಂದರೆ ಕಾಯುವುದು, ಯಾವುದೋ ಒಂದು ಘಟನೆಯು ಸಂಭವಿಸುವುದೆಂದು ಕಾಯುವುದು - ನಿರೀಕ್ಷೆ.

ದುರ್ನಿರೀಕ್ಷೆ - ಎಂದರೆ ನಿರೀಕ್ಷೆಯೇ ಅಸಮಾಧಾನ ಹುಟ್ಟಿಸುತ್ತದೆ ಅದು ದುರ್ನಿರೀಕ್ಷೆ.

ಪರಮಾತ್ಮನಿಗಾಗಿ ಅವನ ಕೃಪೆಗೆ ಕಾಯುವುದು ಸಹನ ಶಕ್ತಿಯನ್ನು ಮೀರಿಸುತ್ತದೆ.

ಅಥವಾ

ನರಸಿಂಹನ ಅವತಾರವನ್ನು ಯಾರೂ ನಿರೀಕ್ಷಿಸಿರಲಿಲ್ಲ - ಅವನ ರೂಪ, ಕಾರ್ಯ ಎಲ್ಲವೂ ನಿರೀಕ್ಷೆ ಮೀರಿ ಆದದ್ದರಿಂದ ಅದು ದುರ್ನಿರೀಕ್ಷೆ - ಅವನು ದುರ್ನಿರೀಕ್ಷಾಯ ನಮಃ.

ಅಥವಾ

ದುಸ್ಸಹವಾದ ಘಟನೆಗಳನ್ನು ನಿರೀಕ್ಷಿಸಿ ಆಶ್ವಾಸನೆ ಕೊಡುವವನು - ದುರ್ನಿರೀಕ್ಷನು.

**831. ಪುಷ್ಟಾಯ ನಮಃ**

ಪುಷ್ಟಿ - ಪೋಷಣೆ, ವೃದ್ಧಿ, ಸಂವೃದ್ಧಿ, ಸಂವರ್ಧನೆ.

ಪುಷ್ಟಿಯಾಗಿ ಬೆಳೆದವನು, ಪರಮಾತ್ಮನು ಸಂವೃದ್ಧನು. ಸಕಲ ಗುಣಗಳಲ್ಲಿಯೂ, ದಯೆ, ಕರುಣೆಗಳಲ್ಲಿಯೂ ಸಾಗರಸ್ವರೂಪನು. ಹೇರಳವಾಗಿ ಇರುವವನು. ದಯೆ, ಕರುಣೆಗಳನ್ನು ಉದಾರವಾಗಿ ಹಂಚುವವನು - ಪುಷ್ಟನು - ಹಿಂದು ಮುಂದು ನೋಡದೆ ಭಕ್ತರಿಗೆ ವರವನ್ನು ಕೊಡುವವನು, ಕಾಪಾಡುವವನು - ಪುಷ್ಟನು - ಪುಷ್ಟಾಯ ನಮಃ.

**832. ದುರ್ಧರ್ಶಾಯ ನಮಃ**

ಧರ್ಶ - ಧರ್ಷ - ಧೈರ್ಯ, ಉದ್ಧಟತನ.

ಉತ್ಕಟ ಕೆಟ್ಟ ಧೈರ್ಯ, ಪರಾಕ್ರಮಗಳನ್ನು ನಾಶಮಾಡುವವನು - ದುಷ್ಟಶಕ್ತಿಗಳನ್ನು ದಮನ ಮಾಡುವವನು. ದುಷ್ಟ ಶಕ್ತಿಗಳು ತಲೆ ಎತ್ತದಂತೆ ಮೊಳಕೆಯಲ್ಲಿಯೇ ನಾಶಮಾಡುವವನು - ದುರ್ಧರ್ಶ - ಪರಮಾತ್ಮನು ಕೆಟ್ಟ ಶಕ್ತಿಗಳನ್ನು ನಾಶಮಾಡಿ ಕಾಪಾಡುವವನು - ಪರಮಾತ್ಮ, ಅವನಿಗೆ ನಮಸ್ಕಾರಗಳು. - ದುರ್ಧರ್ಶಾಯ ನಮಃ.

833. ದೃಮಾಯ ನಮಃ / ದ್ರುಮಾಯ ನಮಃ

ದ್ರುಮ - ಎಂದರೆ ಮರ / ಗಿಡ, ವೃಕ್ಷ.

ಪರಮಾತ್ಮನು ಕಲ್ಪವೃಕ್ಷ, ಕಲ್ಪದ್ರುಮ. ಕೇಳಿದ್ದನ್ನು ಕೊಡುವವನು - ಕಾಮಿತ ಫಲಗಳನ್ನು ಕೊಡುವವನು - ಅತ್ಯಂತ ಉನ್ನತವಾದ ವಸ್ತುಗಳನ್ನು ಸಹ ಕೊಡುವವನು - ಸಾಲೋಕ್ಯ, ಸಾಮಿಪ್ಯ, ಸಾಯುಜ್ಯ, ಸಾರೂಪ್ಯ ಪದವಿಯನ್ನು ಸಹ ದಯಪಾಲಿಸುವವನು - ಕೊಡುವುದರಲ್ಲಿ ಕಾಪಾಡುವವರಲ್ಲಿ ಇವನ ಸಮರು ಯಾರೂ ಇಲ್ಲ - ಅಸಮನು - ದ್ರುಮಾಯ ನಮಃ.

*ದುರ್ಭೇದ್ಯಾಯ ದುರೂಹಾಯ ದುರ್ಲಭಾಯ ನಮೋ ನಮಃ ।*
*ದೃಪ್ತಾಯ ದೀಪ್ತವಕ್ತ್ರಾಯ ದುರ್ದೃಪ್ತನಯನಾಯ ಚ ॥140॥*
*(834-839)*

834. ದುರ್ಭೇದ್ಯಾಯ ನಮಃ

ಪರಮಾತ್ಮನ ನಿಜತ್ವವನ್ನು ತಿಳಿಯಲು ಅಸಾಧ್ಯ - ಅದನ್ನು ಭೇದಿಸಿ (ಒಳಗುಟ್ಟನ್ನು ಕಂಡುಹಿಡಿಯುವುದು) ತಿಳಿಯಲು ಸಾಧ್ಯವಿಲ್ಲ. ಅದರಿಂದ ಅವನು ದುರ್ಭೇದ್ಯನು.

ಮತ್ತು

ಪರಮಾತ್ಮನ ಸಂಕಲ್ಪವನ್ನು ತಿಳಿಯಲು ಸಾಧ್ಯವಿಲ್ಲ. ಅದರಿಂದ ಅವನೂ, ಅವನ ಸಂಕಲ್ಪವೂ ದುರ್ಭೇದ್ಯ.

ಆತ್ಮನ ನಿಜತ್ವವನ್ನು ತಿಳಿಯಲು ಸಾಧ್ಯವಿಲ್ಲ. ಅದೂ ಸಹ ದುರ್ಭೇದ್ಯವೇ! ನಾವು ಏನೆಂದು ತಿಳಿಯುತ್ತೇವೆಯೋ ಅವೆಲ್ಲ ಕೇವಲ ನೆಪಮಾತ್ರ - ಮಾತ್ರ. ನಿಜತ್ವವು ತಿಳಿಯುವುದೇ ಇಲ್ಲ - ಆತ್ಮಜ್ಞಾನ, ಆತ್ಮಾನುಸಂಧಾನ, ಎಲ್ಲಾ ಸ್ವಾನುಭವದಲ್ಲಿ ಮತ್ತು ಆನಂದದಲ್ಲಿ ಪರ್ಯವಸಾನವಾಗುತ್ತದೆ - ಯಾವುದು ಆನಂದವನ್ನು ಕೊಡುವುದೋ ಅಂತಹ ಜ್ಞಾನವೇ ಆತ್ಮಜ್ಞಾನ - ಪರಮಾತ್ಮಜ್ಞಾನವೆಂದು ಕೊಂಡಾಡುತ್ತೇವೆ. ಆದರೆ ಆತ್ಮ, ಪರಮಾತ್ಮ ಎಲ್ಲವೂ ದುರ್ಭೇದ್ಯವೇ!

ಅಥವಾ

ಪರಮಾತ್ಮನ ಅಥವಾ ಆತ್ಮನ ಒಳಹೊಕ್ಕು ಎಲ್ಲವನ್ನು ತಿಳಿದು ಬರಲು ಸಾಧ್ಯವಿಲ್ಲ - ಅದರಿಂದ ಅವನು ದುರ್ಭೇದ್ಯನು - ದುರ್ಭೇದ್ಯಾಯ ನಮಃ.

835. ದುರೂಹಾಯ ನಮಃ

ಪರಮಾತ್ಮನು ಹೀಗೆಯೇ ಅಥವಾ ಹೀಗೂ ಅಥವಾ ಹಾಗೆಯೇ / ಹಾಗೂ ಇರುವನೆಂದು ಭಾವಿಸುವುದು ಊಹೆ - ಈ ಊಹೆಗಳೆಲ್ಲ ತಪ್ಪಾಗುತ್ತದೆ. ಏಕೆಂದರೆ ಅವನು ಯಾವುಕ್ಕೂ ನಿಲುಕದವನು - ಎಲ್ಲಕ್ಕೂ ಅತೀತನು, ಊಹಾತೀತ, ಗುಣಾತೀತ, ಮಾಯಾತೀತ, ರೂಪಾತೀತ, ಭಾವಾತೀತ - ಎಂದರೆ ಏನೇನೆಂದು ನಾವು ಅಂದರೆ ನಮ್ಮ ಬುದ್ಧಿ ಮನಸ್ಸಿನ / ಇಂದ್ರಿಯಗಳ ಶಕ್ತಿಯಿಂದ ಅಂದುಕೊಳ್ಳುವೆವೋ ಅದೆಲ್ಲ ನಿಜವಲ್ಲ. ಎಲ್ಲಕ್ಕೂ ಮೀರಿದವನು. ಅದರಿಂದ ಅವನು ಊಹಾತೀತನು - ದುರೂಹಾಯ ನಮಃ.

ಆತ್ಮನೂ ಇದೇ ರೀತಿ, ಆದರೆ ಆತ್ಮನು ಪರಮಾತ್ಮನ ಸ್ವ ಇಚ್ಛೆಯಂತೆ ನಡೆಯುತ್ತದೆ. ಅವನು ಇದರ ಅವ್ಯಕ್ತ ಸೂತ್ರಧಾರ.

836. ದುರ್ಲಭಾಯ ನಮಃ

ಲಭ್ಯ - ಎಂದರೆ ಪಡೆಯುವುದು.

ದುರ್ಲಭ - ಎಂದರೆ ಸಿಕ್ಕುವುದು ಬಹಳ ಕಷ್ಟ.

ಪರಮಾತ್ಮನು ಅತ್ಯಂತ ದುರ್ಲಭನು, ಅವನನ್ನು ಪಡೆಯಬೇಕಾದರೆ ಬಹಳ ಸಾಧನೆ, ಸಂಸ್ಕಾರ ಮತ್ತೆ ಅವನ ಕೃಪೆ ಬೇಕು. ಅದರಿಂದ ಅವನು ಸಿಕ್ಕುವುದೇ ಕಷ್ಟ, ಸಾಮಾನ್ಯವಲ್ಲ.

ಭಕ್ತರಾದವರಿಗೆ ಅವನು ಬಹಳ ಹತ್ತಿರದಲ್ಲಿಯೇ ಇರುತ್ತಾನೆ. ಅನನ್ಯ ಶ್ರದ್ಧೆ, ಭಕ್ತಿಗಳಿಂದ ಅವನನ್ನು ಹೃದಯದಲ್ಲಿ ಕಟ್ಟಿ ಹಾಕಬಹುದು. ಅವನು ಇಲ್ಲಿಯೇ ನಮ್ಮ ಹೃದಯಕಮಲದಲ್ಲಿಯೇ ಇದ್ದಾನೆ. ಆದರೆ ಈ ಜ್ಞಾನ ಬಂದು ತಿಳಿಯಬೇಕಾದರೆ ಸಾಕಷ್ಟು ಶ್ರದ್ಧೆ, ಭಕ್ತಿ, ಸಂಸ್ಕಾರ, ಅವನ ಸೇರುವಿಕೆಗಾಗಿ ಅಳಲು ಬೇಕು. ಆದ್ದರಿಂದಲೇ ಅವನು - ದುರ್ಲಭನು.

ಅಥವಾ

ಆತ್ಮಜ್ಞಾನ, ಆತ್ಮಾನುಸಂಧಾನ, ನಾನು ಎಂಬ ಮಮತ್ವದ ನಿವಾರಣೆ - ಆಗಬೇಕಾದರೆ ಕಷ್ಟ. ಅದೂ ಸಹ ದುರ್ಲಭವೇ - ಆತ್ಮನೂ ದುರ್ಲಭಾಯ ನಮಃ.

837. ದೃಪ್ತಾಯ ನಮಃ

ದೃಪ್ತ - ಬೆಳಕಿನಿಂದ ಹೊಳೆಯುವವನು -

ಪರಂಜ್ಯೋತಿಯಿಂದ, ತೇಜಸ್ಸಿನಿಂದ ಹೊಳೆಯುವವನು - ತನ್ನದೇ ಆದ ಬೆಳಕಿನಿಂದ ಬೆಳಗುವವನು - ದೃಪ್ತನು - ಪರಮಾತ್ಮ.

ಪರಮಾತ್ಮನ ಅಂಶದಿಂದ, ಅಂಶಮಾತ್ರ ತೇಜಸ್ಸಿನಿಂದ ಪ್ರಕಾಶವಾಗುವವನು - ಆತ್ಮ - ಆತ್ಮಜ್ಯೋತಿ - ಈ ಜ್ಯೋತಿ ಆ ಪರಂಜ್ಯೋತಿಯಲ್ಲಿ ಲೀನವಾಗುವುದೇ ಆತ್ಮದ ಪರಮೋಚ್ಚವಾದ ಗುರಿ - ಆತ್ಮ, ಪರಮಾತ್ಮನು ದೃಪ್ತನು - ದೃಪ್ತಾಯ ನಮಃ.

838. ದೀಪ್ತವಕ್ತ್ರಾಯ ನಮಃ

ದೀಪ್ತ - ಎಂದರೆ ತೇಜಸ್ಸಿನಿಂದ, ಪ್ರಭೆಯಿಂದ ಹೊಳೆಯುತ್ತಿರುವ, ವಕ್ತ್ರ - ಮುಖವುಳ್ಳವನು - ಬಾಯಿಯುಳ್ಳವನು, ಪರಮಾತ್ಮನ ಯಾವ ಭಾಗವನ್ನು ಊಹಿಸಿದರೂ ಅದು ವಿಶಿಷ್ಟ ರೀತಿಯಲ್ಲಿ ತೇಜೋಮಯ, ಕರುಣಾಮಯ, ಭಕ್ತರ ಮನಮೋಹಕವಾದ್ದು, ಮನಸ್ಸನ್ನು ಸೂರೆಗೊಳ್ಳುವಂತಹದು - ಎಂದ ಮೇಲೆ ಬಾಯಿಯನ್ನು ಕೇಳಬೇಕೇ? ಇದರಿಂದ ಅವನ ಮನಮೋಹಕವಾದ ಹಸುನಗೆ, ಮುಗುಳುನಗೆ, ದಯೆಯಿಂದ ಕೂಡಿದ ಮಾತುಗಳು, ಉದ್ಭವಿಸುವ ಸ್ಥಾನ, ಸಾಂತ್ವನಗೊಳಿಸುವ ಮುಖಮುದ್ರೆ, ಇವೇ ಮುಂತಾದವು ಉದ್ಭವವಾಗುವ ಸ್ಥಳ - ಮುಖ - ಬಾಯಿ - ಇದು ದೀಪ್ತ, ಎಂದರೆ ಪ್ರಕಾಶವಾದ ಬಾಯಿ - ದೀಪ್ತವಕ್ತ್ರ - ಸಿಂಹದ ಮುಖದಿಂದ, ತೇಜೋಮಯವಾದ ಬಾಯಿಯಿಂದ ಸಾಂತ್ವನ, ಸಂತೋಷ ಬರಬೇಕೆಂದರೆ ಬಹಳ ಆಶ್ಚರ್ಯ. ನರಸಿಂಹನ ಮುಖವೇ ದೀಪ್ತವಕ್ತ್ರ - ಸಂತೋಷದಾಯಕವಾದ್ದು - ಭಕ್ತಗಣಕ್ಕೆ ಆಹ್ಲಾದಕರವಾದ್ದು - ದೀಪ್ತವಕ್ತ್ರಾಯ ನಮಃ.

839. ದುರ್ದೃಪ್ತನಯನಾಯ ನಮಃ

ಭಯಂಕರವಾದ, ಬಹಳ ಹೊಳೆಯುವ ಕಣ್ಣುಗಳುಳ್ಳವನು - ಪ್ರಜ್ವಲಜ್ಯೋತಿ ಸ್ವರೂಪದ ಕಣ್ಣುಗಳು - ನೋಡಲು ಅಸಾಧ್ಯವಾದ ಕಣ್ಣುಗಳುಳ್ಳವನು - ಸೂರ್ಯಚಂದ್ರರೇ ಕಣ್ಣುಗಳೆಂದರೆ ಸಾಮಾನ್ಯ ಕಣ್ಣಿನ ದೃಷ್ಟಿಗೆ ನೋಡಲು ಸಾಧ್ಯವಿಲ್ಲ. ಅದರಿಂದ ದುರ್ದೃಪ್ತನಯನಾಯ ನಮಃ.

ಪರಮಾತ್ಮನ ಪರಂಜ್ಯೋತಿಯು ಭಯಂಕರವೂ ಹೌದು, ತೀಕ್ಷ್ಣವೂ ಹೌದು, ಸುಮಧುರ, ಶಾಂತವೂ ಹೌದು - ನೋಡುವವರ ಭಾವನೆಗೆ ತಕ್ಕಂತೆ ಇದೆ - ದುರ್ದೃಪ್ತ ನಯನಾಯ ನಮೋನ್ನಮಃ.

*ಉನ್ಮತ್ತಾಯ ಪ್ರಮತ್ತಾಯ ನಮೋ ದೈತ್ಯಾರಯೇಽನಿಶಮ್ ।*
*ರಸಜ್ಞಾಯ ರಸೇಶಾಯ ಆರಕ್ತವಸನಾಯ ಚ ॥141॥ (840-845)*

840. ಉನ್ಮತ್ತಾಯ ನಮಃ

ಉನ್ಮತ್ತ - ಮೈ ಮರೆತಿರುವ ಸ್ಥಿತಿ, ಸಂತೋಷವು ಅತಿಯಾದಾಗ ಮೈಮರೆತಿರುವ ಸ್ಥಿತಿ.

ನರಸಿಂಹಸ್ವಾಮಿಯ ಅವತಾರದ ಪ್ರಪ್ರಥಮ ಉದ್ದೇಶವು ಹಿರಣ್ಯಕಶಿಪುವನ್ನು ಸಂಹರಿಸುವುದಾಗಿದ್ದಿತು. ಬ್ರಹ್ಮನು ಕೊಟ್ಟ ವರದಂತೆ ಮತ್ತು ವಿಷ್ಣುವೇ ಜಯ ವಿಜಯರಿಗೆ ಸನಕಾದಿ ಋಷಿಗಳ ಶಾಪ ಪರಿಹಾರಕ್ಕಾಗಿ ಕೊಟ್ಟ ಮಾತಿನಂತೆ ಜಯ ವಿಜಯರನ್ನು ಮೊದಲ ಜನ್ಮದಿಂದ ಬಿಡಿಸುವುದಾಗಿದ್ದಿತು. ಯಾವಾಗ ಹಿರಣ್ಯಕಶಿಪುವಿನ ಸಂಹಾರವಾಯಿತೋ, ಆಗ ಕಾರ್ಯ ನಡೆದಿದ್ದರಿಂದ ನಾರಾಯಣನು ನರಸಿಂಹರೂಪದಲ್ಲಿ ಉನ್ಮತ್ತನಾದನು. ತಾನು ಸಾಧಿಸಿದ ಕಾರ್ಯಕ್ಕಾಗಿ ಮೈಮರೆತನು ಎಂದು ತಿಳಿಯಬಹುದು.

ಅಥವಾ

ಆತ್ಮನು ಸಜ್ಜನರ ಸಹವಾಸದಿಂದ ಬರುವ ಲಾಭಕ್ಕೆ ಮತ್ತು ಪರಮಾತ್ಮನ ಕೃಪೆಯಿಂದ ಅವನ ಹತ್ತಿರವಾಗುತ್ತಿರುವ ಸನ್ನಿವೇಶದಲ್ಲಿ ದೇಹದಲ್ಲಿರುವ ಬುದ್ಧಿ ಮನಸ್ಸುಗಳು ಉನ್ಮತ್ತ ಸ್ಥಿತಿಗೆ ಬರುತ್ತದೆ - ಆತ್ಮನೊಡನೆ ಅಂಟಿಕೊಂಡಿರುವ ಮನಸ್ಸು ಉನ್ಮತ್ತತೆಯನ್ನು ಅನುಭವಿಸುತ್ತದೆ - ಉನ್ಮತ್ತಾಯ ನಮಃ.

ಅಥವಾ

ಪರಮಾತ್ಮನು ತನ್ನ ಕಾಮನೆಯಿಂದ ಅಖಿಲಾಂಡ ಕೋಟ ಬ್ರಹ್ಮಾಂಡವನ್ನು ಸೃಷ್ಟಿಸಿ, ನಡೆಯಿಸಿ, ಲಯಮಾಡಿ ತನ್ನಲ್ಲಿಯೇ ಅಡಗಿಸಿಕೊಳ್ಳುವುದರಿಂದ ಸಂಕಲ್ಪವು ಪರಿಪೂರ್ಣವಾಯಿತೆಂದು ಆದಾಗ ಅದೆಷ್ಟು ಉನ್ಮತ್ತವಾಗಬಹುದು!! ಇದು ಉನ್ಮತ್ತತೆಯ ಮೇರು ಮಟ್ಟದ ಶಿಖರ.

841. ಪ್ರಮತ್ತಾಯ ನಮಃ

ಪ್ರಮತ್ತ - ಆನಂದದ ಅನುಭವದ ಮೇರು ಸ್ಥಿತಿಯಲ್ಲಿರುವವನು ಯಾರೋ ಅವನು - ಪರಮಾತ್ಮ - ಉನ್ಮತ್ತತೆಯ ಭಾವವೇ ಇದು.

ಅಥವಾ

ಉನ್ಮತ್ತತೆಯ ಸಮಾನಭಾವ ಅಥವಾ ಉತ್ಕೃಷ್ಟ ಭಾವ, ಭಾವ ಪರಿಪೂರ್ಣನಾದವನು ಪರಮಾತ್ಮನೊಬ್ಬನೇ!

ಅಥವಾ

ಆತ್ಮನಿಗೆ ಭಾವವಿಲ್ಲ. ಅವನಿಗೆ ಸೇರಿರುವ ಮನಸ್ಸು, ಬುದ್ಧಿ,

ಅಹಂಕಾರಗಳು ಈ ಪ್ರಮತ್ತತೆಯನ್ನು ಅನುಭವಿಸುತ್ತವೆ. - ಪ್ರಮತ್ತತೆ, ಉನ್ಮತ್ತತೆ ಬರುವುದು ಮನಸ್ಸಿಗೆ ಮಾತ್ರ - ಬುದ್ಧಿಯು ವಿವೇಕಯುತವಾಗಿ ವಿಭಾಗಿಸುತ್ತದೆ.

**842. ದೈತ್ಯಾರಯೇ ನಮಃ (ಅನಿಶಮ್)**

ಅನಿಶಂ - ಸದಾ, ಎಡೆಬಿಡದೆ, ಯಾವಾಗಲೂ, ನಿರಂತರ.

ದೈತ್ಯ - ರಾಕ್ಷಸರಿಗೆ, ದಿತಿ ದೇವಿಯ ಮಕ್ಕಳಾದ ರಾಕ್ಷಸರಿಗೆ, ಅರಿ - ಶತ್ರುವಾಗಿರುವವನು ಯಾರೋ ಅವನು - ಮಹಾವಿಷ್ಣು.

ಅಥವಾ

ದುಷ್ಟಶಕ್ತಿಗಳಿಗೆ ನಿರಂತರ ಶತ್ರುವಾಗಿರುವವನು - ಪರಮಾತ್ಮ - ವಿವೇಕಯುತವಾದ ಬುದ್ಧಿ.

ಅಥವಾ ಹಿಂದುಮುಂದು ನೋಡದೆ ದೈತ್ಯರನ್ನು, ದೈತ್ಯ ಸ್ವಭಾವವನ್ನು ಮತ್ತು ಅದನ್ನು ಹೊಂದಿರುವವನ್ನು ನಾಶಮಾಡುವವನು - ಶ್ರೀಹರಿ.

**843. ರಸಜ್ಞಾಯ ನಮಃ**

ರಸ - ರಸಗಳು - ಮಧುರ, ಆಮ್ಲ, ಒಗರು, ಖಾರ, ವಿಷ, ಉಪ್ಪು - ಷಡ್ರಸಗಳು.

ಜ್ಞ - ಎಂದರೆ ತಿಳಿದವನು - ಪರಮಾತ್ಮ.

ರಸಜ್ಞ - ಷಡ್ರಸಗಳನ್ನು ತಿಳಿದವನು - ಆಹಾರದಲ್ಲಿ ಒಳಗಿರುವ ಆರು ವಿಧವಾದ ರಸಗಳನ್ನು ಮತ್ತು ಅವುಗಳ ಉತ್ಪನ್ನವನ್ನು ತಿಳಿದವನು;

ಷಡ್ರಸಗಳನ್ನು ವಸ್ತುಗಳಲ್ಲಿ / ಪ್ರಕೃತಿಯ ವಸ್ತುಗಳಲ್ಲಿ ಇಡುವ ರೀತಿಯನ್ನು / ಪ್ರಮಾಣವನ್ನು ತಿಳಿದವನು;

ಷಡ್ರಸಗಳ ಮೂಲವನ್ನು ಮತ್ತು ಮಿಶ್ರಣಗಳನ್ನು ತಿಳಿದವನು,

ಅಥವಾ

ರಸ - ನವರಸಗಳು - ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ರೌದ್ರ, ಭಯಾನಕ, ಬೀಭತ್ಸ ಮತ್ತು ಶಾಂತ.

ಜ್ಞ - ಎಂದರೆ ತಿಳಿದವನು.

ನವರಸಗಳು - ಇವನ್ನು ತಿಳಿದು ಮೂಲದಲ್ಲಿ ಸೃಷ್ಟಿಸಿದವನು.

ಇವುಗಳ ಸೂಕ್ತ ಪ್ರಮಾಣದಲ್ಲಿ ಮಿಶ್ರಣಮಾಡುವವನು, ಸನ್ನಿವೇಶಗಳನ್ನರಿತು ಸೂಕ್ತ ರೀತಿ ಇವುಗಳನ್ನು ಸಂಕಲ್ಪ ಮಾತ್ರದಿಂದ ಪ್ರಕಟಿಸುವವನು.

ನವರಸಗಳಿಂದ ಸಂಸಾರ ಸಾಗರದಲ್ಲಿ ಜೀವಿಗಳು ಮುಳುಗಿ, ತೇಲಿ, ಜಿಗುಪ್ಸೆಯಿಂದಲೋ ಅಥವಾ ಆಸೆಯಿಂದಲೋ ಪರಮಾತ್ಮನ ಕಡೆಗೆ ತಿರುಗಿದಾಗ ಅವುಗಳನ್ನು ಅಂತರ್ಯಾಮಿಯ ಕಡೆಗೆ ತಿರುಗಿಸಿ ಆತ್ಮನನ್ನು

ಪರಮಾತ್ಮನ ಸಹಾಯದಿಂದ ಬಿಡುಗಡೆ ಮಾಡುವವನು - ಅವನೇ ರಸಜ್ಞ.

ರಸಜ್ಞನಾದ್ದರಿಂದ ಸಕಲ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ಮತ್ತು ಜೀವಕೋಟಿ, ಸಚರಾಚರ ವಸ್ತುಗಳನ್ನು ತನ್ನ ಅಂಕುಶದಲ್ಲಿರಿಸಿಕೊಂಡು, ಸಂಕಲ್ಪ ಮಾತ್ರದಿಂದ ನಡೆಯಿಸುವವನು - ಪರಮಾತ್ಮ - ರಸಜ್ಞಾಯ ನಮಃ.

ರಸ - ಎಂದರೆ ಪ್ರೇಮ, ಸೌಂದರ್ಯ, ಭಾವನೆ, ದ್ರವಪದಾರ್ಥ, ರುಚಿ.

ಇವುಗಳ ಮೂಲ ಪ್ರೇರಕ - ಪರಮಾತ್ಮನೇ ಮತ್ತು ಮೂಲದ ಸೃಷ್ಟಿಕರ್ತ - ಪರಮಾತ್ಮನೇ!

ಅಥವಾ -

ರಸಗಳನ್ನು ಜ್ಞ ತಿಳಿದವನು - ಆತ್ಮವು ಪರಮಾತ್ಮನ ಅಂಶವಾದ ಕಾರಣ ಇವೆಲ್ಲವನ್ನು ತಿಳಿಯುತ್ತದೆ. ಆತ್ಮನಿರುವ ದೇಹದಲ್ಲಿ ಸಂಸ್ಕಾರದ ಮೂಲಕ, ಬುದ್ಧಿ, ಮನಸ್ಸುಗಳು ಈ ರಸಗಳನ್ನು ಹೊರಪಡಿಸುತ್ತವೆ. ಧೀಶಕ್ತಿಯಿಂದ ನಿರ್ಧರಿಸಿ ಮನಸ್ಸು ಇವುಗಳನ್ನು ಅನುಭವಿಸುತ್ತದೆ. ದೇಹಿಯು ''ನಾನು'' ಎಂಬ ''ಅಹಂ''ಭಾವದಿಂದ ಅನುಭವಿಸುತ್ತದೆ. ಇಂದ್ರಿಯಗಳಿಂದ ಅನುಭವ ವ್ಯಕ್ತವಾಗುತ್ತದೆ. ಆ ಅನುಭವದ ಭಾವ ಮನಸ್ಸಿನ ಮೂಲಕ ಸಂಸ್ಕಾರವಾಗಿ ಪರಿಣಮಿಸುತ್ತದೆ.

**844. ರಸೇಶಾಯ ನಮಃ**

ರಸ - ಎಂದರೆ ರಸಗಳಿಗೆ, ಈಶ - ಎಂದರೆ ಒಡೆಯನು.

ಷಡ್ರಸ, ನವರಸಗಳಿಗೆ ಈಶ್ವರನು - ಅವುಗಳನ್ನು ತನ್ನ ಸಂಕಲ್ಪದಂತೆ ರೂಪಿಸುವವನು - ಪರಮಾತ್ಮ - ರಸೇಶನು.

ಅಥವಾ

ರಸಗಳನ್ನು ಉತ್ಪನ್ನ ಮಾಡುವುದರಿಂದ ಮತ್ತು ವಿಭಾಗ ಮಾಡುವುದರಿಂದ ಮತ್ತು ಮಿಶ್ರಮಾಡುವುದರಿಂದ ಇವನು ರಸೇಶನು - ರಸೇಶಾಯ ನಮಃ.

**845. ಆರಕ್ತವಸನಾಯ ನಮಃ**

ರಕ್ತ - ಕೆಂಪು ಬಣ್ಣ, ನೆತ್ತರು, ಪ್ರೇಮಾಸಕ್ತ,

ವಸನ - ಎಂದರೆ ಬಟ್ಟೆ, ಉಡುಪು, ಧರಿಸುವ ವಸ್ತ್ರಗಳು, ಮನೆ.

ಆರಕ್ತವಸನ - ಪರಮಾತ್ಮನು ಮೊದಲಿನಿಂದ ಕೊನೆಯವರೆಗೂ ಧರಿಸುವ ವಸ್ತುಗಳು ಪ್ರೇಮವನ್ನು ಉತ್ಪನ್ನಮಾಡುತ್ತವೆ. ಪರಮಾತ್ಮನಿಗೆ ಯಾವ ವಸ್ತ್ರದಿಂದ ಅಲಂಕಾರಮಾಡಿದರೂ ಅವನು ಮನಮೋಹಕನೇ. ಅನೇಕ ರೀತಿಯಲ್ಲಿ ರಂಜಿಸುವ ವಸ್ತ್ರಗಳಿಂದ ಅವನ ಭಾವಗಳು ಹಿರಿಮೆಯಾಗುತ್ತವೆ. ಆಮೂಲಾಗ್ರವಾಗಿ ಏನೇ ಧರಿಸಿದರೂ, ಏನನ್ನೇ ವಸ್ತ್ರವನ್ನಾಗಿ ಮಾಡಿದರೂ ಅದು ಪರಮಾತ್ಮನಿಗೆ ಶೋಭೆಯೇ! - ಅವನು ಆರಕ್ತವಸನನು.

*ಪಥ್ಯಾಯ ಪರಿತೋಷಾಯ ರಥ್ಯಾಯ ರಸಿತಾಯ ಚ ।*
*ಊರ್ಧ್ವಕೇಶೋರ್ಧ್ವರೂಪಾಯ ನಮಸ್ತೇ ಚೋರ್ಧ್ವರೇತಸೇ ॥142॥*
*(846-851)*

**846. ಪಥ್ಯಾಯ ನಮಃ**

ಪಥಿ - ಎಂದರೆ ದಾರಿಯಲ್ಲಿ ನಡೆಯುವವನು.

ಪಥ್ಯ - ಆರೋಗ್ಯ, ಹಿತಕರ, ಯೋಗ್ಯ, ಕಲ್ಯಾಣ.

ಪಥ್ಯಾಯ ನಮಃ - ದಾರಿ ಕಲ್ಪಾದಿಯಿಂದ ಕಲ್ಪಾಂತದವರೆಗೆ ಕಾಲಯಾನದಲ್ಲಿ ನಡೆಯುವವನು - ಆತ್ಮ. ಅವನ ಜೊತೆ ಪರಮಾತ್ಮ ಅಂತರ್ಯಾಮಿಯಾಗಿ ಅಂತಸ್ಸಾಕ್ಷಿಯಾಗಿ ಬೆನ್ನಲ್ಲಿಯೆ ಇದ್ದು ನಡೆಯುತ್ತಾನೆ. - ಅದರಿಂದ ಆತ್ಮನೂ, ಪರಮಾತ್ಮನೂ ಪಥ್ಯಾಯ ನಮಃ ಎಂಧು ನಮಸ್ಕರಿಸಲ್ಪಡಬಹುದು.

ಅಥವಾ

ಪಥ್ಯಾಯ ನಮಃ ಎಂದರೆ ಸದಾ ಸಕಲವೂ ಹಿತಕರವಾದದ್ದನ್ನೇ ಮಾಡುವ ಪರಮಾತ್ಮನಿಗೆ ನಮಸ್ಕಾರಗಳು.

**847. ಪರಿತೋಷಾಯ ನಮಃ**

ಪರಿತೋಷ - ಎಂದರೆ ಸಮಾಧಾನ, ಸಂತೋಷ, ಆನಂದ, ಸುಖ, ಸದಾ ಸಮಾಧಾನ, ಸಂತೋಷ, ಆನಂದ, ಸುಖದಲ್ಲಿ ಎಂದರೆ ಸಚ್ಚಿದಾನಂದನಾಗಿರುವವನು ಯಾರೋ ಅವನು - ಪರಮಾತ್ಮನು.

ಆತ್ಮನು ಪರಮಾತ್ಮನ ಅಂಶ - ಪರಿಪೂರ್ಣನು. ಪರಮಾತ್ಮನ ಈ ಸಂಯಕ್ ಜ್ಞಾನದಿಂದ ಪರಿತೋಷನಾಗಬಹುದು.

**848. ರಥ್ಯಾಯ ನಮಃ**

ರಥಿ - ಎಂದರೆ ರಥದಲ್ಲಿರುವವನು.

ಈ ದೇಹವೇ ರಥ. ಅದರಲ್ಲಿರುವ ಜೀವನು / ಆತ್ಮನು ರಥಿ. ಆತ್ಮನು ಕಲ್ಪಾದಿಯಿಂದ ಕಲ್ಪಾಂತದವರೆಗೆ ಅನೇಕ ಕೋಟಿ ರಥಗಳಲ್ಲಿ ಕ್ರಮಿಸುತ್ತಾನೆ. ಅದರಿಂದ ಅವನು ಸದಾ ರಥಿಯೇ.

ಅಥವಾ

ಸಂಸಾರ ಸಾಗರವನ್ನು ಸಕಲ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ಸೂಕ್ತ ರೀತಿಯಲ್ಲಿ ಚಾಚೂ ತಪ್ಪದೆ ಸಂಕಲ್ಪಮಾತ್ರದಿಂದ ಒಳಗೂ ಹೊರಗೂ ಇದ್ದರೂ ಹೊರಗೇ ನಿಂತು ನಡೆಸುವವನು - ರಥಿ - ಅಂತಹ ವಿಶೇಷನಿಗೆ ರಥ್ಯಾಯ ನಮಃ ಎಂದು ನಮಸ್ಕರಿಸಬೇಕು.

ಕೋಟಿ ಕೋಟಿ ರಥಗಳನ್ನು ನಡೆಸುವವನು - ಮಹಾನ್ ರಥಿ.

849. ರಸಿತಾಯ ನಮಃ

ರಸಿತ - ರಸವನ್ನು ಆಸ್ವಾದಿಸಿದವನು - ರಸವನ್ನು ಅನುಭವಿಸಿದವನು - ಪರಮಾತ್ಮ.

ಅಥವಾ

ಆಸ್ವಾದಿಸಿ ರಸವನ್ನು ಉತ್ತಮಗೊಳಿಸಿದವನು - ರಸಿತ.

850. ಊರ್ಧ್ವಕೇಶೋರ್ಧ್ವರೂಪಾಯ ನಮಃ

ಊರ್ಧ್ವಕೇಶಾಯ ನಮಃ / ಊಧ್ವರೂಪಾಯ ನಮಃ

ಊರ್ಧ್ವಕೇಶ - ಮೇಲಕ್ಕೆ ಕೂದಲನ್ನು ಎತ್ತಿ ಕಟ್ಟಿದ ಜಟೆಯುಳ್ಳವನು - ಶಿವನು.

ಮೇಲಿನ ದಿಕ್ಕಿಗೆ ತಿರುಗಿಸಿ ಕೂದಲುಗಳನ್ನು ಬೆಳೆಯಿಸಿದವನು - ಊರ್ಧ್ವಕೇಶನು.

ಕೇಶ - ಎಂದರೆ ಕಿರಣಗಳು.

ಮೇಲಿನ ಲೋಕಗಳಿಗೆ ಕಿರಣಗಳನ್ನು ತಿರುಗಿಸಿದವನು - ಶಿವ.

ಊರ್ಧ್ವಕೇಶ - ಆತ್ಮಗಳು ತಾವು ಬಂದ ಮೂಲಸ್ಥಾನದ ಕಡೆಗೆ / ಸತ್ಯಲೋಕದ ಕಡೆಗೆ ತಮ್ಮ ತೇಜಸ್ಸನ್ನು ತಿರುಗಿಸಿರುತ್ತವೆ. - ಇಂತಹ ಆತ್ಮಗಳು - ಊರ್ಧ್ವಕೇಶಗಳು.

ಊರ್ಧ್ವರೂಪ -

ಆತ್ಮಗಳು ಪರಮಾತ್ಮನ ರೂಪವನ್ನೇ ಹೊಂದಿರುವುದರಿಂದ ಅವು ಊರ್ಧ್ವರೂಪಗಳು.

ಅಥವಾ

ಯಾವಾಗಲೂ, ಏನೇ ಅವತಾರವೆತ್ತಿದರೂ, ತನ್ನ ಮೂಲ ಸ್ಥಾನದಿಂದ ಬಂದು ಅಲ್ಲಿಗೆ ಹೋಗುವುದರಿಂದ ಊರ್ಧ್ವರೂಪನು - ಮಹಾವಿಷ್ಣು.

ಅಥವಾ

ಆತ್ಮಗಳು ಎಲ್ಲೆಲ್ಲಿ ಬಂದರೂ ಪರಮಾತ್ಮನನ್ನೇ ಸೇರುವ ಗುರಿಯಾದ್ದರಿಂದ ಊರ್ಧ್ವರೂಪಗಳು.

851. ಊರ್ಧ್ವರೇತಸೇ ನಮಃ

ಮೇಲಿನ ದಿಕ್ಕಿಗೆ ತನ್ನ ರೇತಸ್ಸು (ವೀರ್ಯ)ವನ್ನು ತಿರುಗಿಸಿರುವುದರಿಂದ ಊರ್ಧ್ವರೇತಸ್ - ಇದು ಇರುವವನು - ಊರ್ಧ್ವರೇತಸೇ - ಶಿವ - ತಪಸ್ವಿಯಾದ ಶಿವನು.

ಅಥವಾ

ಬ್ರಹ್ಮಚಾರಿಗಳು, ಬ್ರಹ್ಮಚರ್ಯದಿಂದ ಆದ ಸಂನ್ಯಾಸಿಗಳು, ಸನ್ಯಾಸಿಗಳು - ಇವರು ರೇತಸ್ಸನ್ನು ಸ್ಖಲನ ಮಾಡದೆ ದಿವ್ಯ ಶಕ್ತಿಯನ್ನಾಗಿ ಪರಿವರ್ತಿಸುವುದರಿಂದ ಇವರುಗಳು - ಊರ್ಧ್ವರೇತಸ್ಕರು - ಆಜನ್ಮ ಬ್ರಹ್ಮಚಾರಿಗಳು, ಭೀಷ್ಮ.

*ಊರ್ಧ್ವಜಿಹ್ವಾಯ ಸಿಂಹಾಯ ನಮಸ್ತೇ ಚೋರ್ಧ್ವಬಾಹವೇ ।*
*ಪರಪ್ರಧ್ವಂಸಕಾಯೈವ ಶಂಖಚಕ್ರಧರಾಯ ಚ ॥143॥*

*(852-856)*

**852.** ಊರ್ಧ್ವಜಿಹ್ವಾಯ ನಮಃ

ಊರ್ಧ್ವ - ಮೇಲಿನ ದಿಕ್ಕಿಗೆ,

ಜಿಹ್ವ - ಎಂದರೆ ನಾಲಿಗೆಯನ್ನು ಚಾಚಿರುವವನು - ಅಗ್ನಿದೇವನು, ಜ್ಯೋತಿಗಳು.

ಅಗ್ನಿಯು ಯಾವಾಗಲೂ ಮೇಲ್ಮುಖವಾಗಿಯೇ ಪ್ರಜ್ವಲಿಸುತ್ತಾ ಉರಿಯುತ್ತಾನೆ. ಜ್ವಾಲೆಗಳು ಊರ್ಧ್ವಲೋಕದ ಕಡೆಗೆ ತಿರುಗಿರುತ್ತವೆ. ಸಪ್ತಜಿಹ್ವನು, ಹವ್ಯವಾಹನನು. ದೇವತೆಗಳಿಗೆ ಯಜ್ಞಗಳಲ್ಲಿ ಕೊಟ್ಟ ಹವ್ಯವನ್ನು ತಲಪಿಸುವವನು - ಅದರಿಂದ ಭೂಲೋಕದಲ್ಲಿ ಮಾಡಿದ ಯಜ್ಞಗಳಲ್ಲಿ ಅರ್ಪಿಸಿದ ಹವಿಸ್ಸನ್ನು ಅಗ್ನಿಯೇ ತಗೆದುಕೊಂಡು ಹೋಗಿ ಅಯಾ ದೇವತೆಗಳಿಗೆ ತಲಪಿಸುತ್ತಾನೆ. ಅದರಿಂದ - ಊರ್ಧ್ವಜಿಹ್ವನು. ಸ್ವಾಹಾ ಎಂದು ಹೇಳಿ ಅರ್ಪಿಸಿದ ಹವಿಸ್ಸು ಮಾತ್ರ ಅಗ್ನಿಯಿಂದ ತೆಗೆದುಕೊಂಡು ಹೋಗಲ್ಪಡುತ್ತದೆ, ಉಳಿದಿದ್ದನ್ನು ತೆಗೆದುಕೊಂಡು ಹೋಗುವುದಿಲ್ಲ. ಏಕೆಂದರೆ ''ಸ್ವಾಹಾ'' ದೇವಿಯು ಅಗ್ನಿಯ ಭಾರ್ಯೆ. ಅವಳ ಮೂಲಕ ಅರ್ಪಿಸಿದ್ದನ್ನು ಮಾತ್ರ ತೆಗೆದುಕೊಳ್ಳುತ್ತೇನೆ ಎಂದು ಅಗ್ನಿಯು ಸ್ವಾಹಾದೇವಿಗೆ ವರವನ್ನು ಕೊಟ್ಟಿರುತ್ತಾನೆ. ಮಂತ್ರವಿಲ್ಲದೆ ಅಗ್ನಿಗೆ ಹಾಕಿದ ಸಮಿತ್ತು, ದ್ರವ್ಯಗಳು ವ್ಯರ್ಥ. ಅದು ರಾಕ್ಷಸರಿಗೆ ಸೇರುತ್ತದೆ. ಅಂತಹ ಅಗ್ನಿಕಾರ್ಯ ವ್ಯರ್ಥವಾದುದು.

ಅಥವಾ

ಜ್ಯೋತಿಗಳೆಲ್ಲವೂ ಪ್ರಕಾಶಮಾನವಾಗಿ ಮೇಲಿನ ದಿಕ್ಕಿಗೆ ತೋರಿಸುತ್ತವೆ. ಬೆಳಕಿನ ದಾರಿ - ಊರ್ಧ್ವಲೋಕಗಳಿಗೆ ದಾರಿ. ಜೀವಿಯನ್ನು ಊರ್ಧ್ವಲೋಕಗಳಿಗೆ ನಡೆಯಿಸುತ್ತವೆ. ಅಗ್ನಿಯು ಪ್ರಜ್ವಲಿಸಿ ಸಂತೋಷದಿಂದ ಊರ್ಧ್ವಾಭಿಮುಖವಾಗಿಯೇ ಯಜ್ಞಕುಂಡದಿಂದ ಉರಿಯುತ್ತಾನೆ - ಅಗ್ನಿಯೇ ಪರಮಾತ್ಮ. ಅವನಿಗೆ ಊರ್ಧ್ವಜಿಹ್ವಾಯ ನಮಃ ಎನ್ನುತ್ತೇವೆ.

ಅಥವಾ

ಪರಮಾತ್ಮನು ಸತ್ಯಲೋಕದಲ್ಲಿಯೇ ಇರುವುದರಿಂದ ಸರ್ವರೂ ತಲೆಯನ್ನು ಮೇಲೆ ಎತ್ತಿ ಊರ್ಧ್ವಜಿಹ್ವರಾಗಿ ಪ್ರಾರ್ಥಿಸುತ್ತಾರೆ.

853. ಸಿಂಹಾಯ ನಮಃ

ಪರಮಾತ್ಮನು ಸಿಂಹಸದೃಶನು, ಸಿಂಹರೂಪ, ಸಿಂಹನೇ. ತನ್ನ ಪ್ರತಿಕ್ರಿಯೆಯನ್ನು ಸಿಂಹಸ್ವಭಾವದಿಂದ ರಾಜಠೀವಿಯಿಂದ ನಿರ್ವಹಿಸುತ್ತಾನೆ. ಪ್ರಾಣಿವರ್ಗದಲ್ಲೆಲ್ಲ ಸಿಂಹವೇ ರಾಜಸ್ವರೂಪ - ರಾಜನು ಪರಮಾತ್ಮನ ಸ್ವರೂಪ.

ಮೇಲಾಗಿ ನರಸಿಂಹ ಅವತಾರದಲ್ಲಿ ವಿಷ್ಣುವು ಸಿಂಹರಾಜನ ಶಿರಸ್ಸನ್ನು ತನ್ನ ದೇಹಕ್ಕಾಗಿ ಆರಿಸಿ ಆದರಿಸಿದ್ದಾನೆ. ದೇವತೆಗಳಿಗೆಲ್ಲ ದೇವ ಸಿಂಹನಾಗಿ ಕಾಪಾಡುತ್ತಾನೆ. ಲೋಕಗಳಿಗೆಲ್ಲ ಸಿಂಹನಾಗಿ ಅಖಂಡ ಬ್ರಹ್ಮಾಂಡಗಳನ್ನು ನಡೆಸುತ್ತಾನೆ - ಅದರಿಂದ ಸಿಂಹನೆಂದರೆ ಪರಮಾತ್ಮನೇ. ಸಿಂಹಾಯ ನಮಃ.

854. ಊರ್ಧ್ವಬಾಹುವೇ ನಮಃ

ಮೇಲೆ ಎತ್ತಿದ ಬಾಹುಗಳುಳ್ಳವನು,

ಪರಮಾತ್ಮನ ವಾಸಸ್ಥಾನ - ದೇವಲೋಕ, ಸತ್ಯಲೋಕ, ವೈಕುಂಠ, ಕೈಲಾಸ - ಸಪ್ತಸಾಗರಗಳ ಆಚೆ, ಸಪ್ತದ್ವೀಪಗಳ ಆಚೆ ಇರುವ ಲೋಕಾಲೋಕ ಪರ್ವತ, ಧ್ರುವನಕ್ಷತ್ರವು ಲೋಕಾಲೋಕ ಪರ್ವತದ ಸಮೀಪವಿರುತ್ತದೆ. ಈ ಪರ್ವತವು ಅತಿ ಎತ್ತರವಿರುವುದರಿಂದ ಅದರ ಹಿಂಭಾಗದಲ್ಲಿ ಅಲೋಕ - ಲೋಕಗಳಿಲ್ಲ - ಕತ್ತಲು - ಜೀವಿಗಳು ಇಲ್ಲ. ಅದು ಅತಿ ಎತ್ತರವಿದೆ ಅದರಲ್ಲಿ ಪರಮಾತ್ಮನು ವಾಸಿಸುತ್ತಾನೆ ಅವನನ್ನು ಕೈ ಎತ್ತಿ ಆಧಾರರಹಿತವಾಗಿ ಜೀವಿಗಳು ಪ್ರಾರ್ಥಿಸಬೇಕಾದರೆ ಬಾಹುಗಳನ್ನು ಮೇಲೆ ಎತ್ತಿ ನಮಸ್ಕರಿಸಬೇಕು. ದೇವ ದೇವತೆಗಳು ಭೂಲೋಕದಲ್ಲಿರುವವರು ಊರ್ಧ್ವಬಾಹುಗಳಾಗಿ ನಮಸ್ಕರಿಸಬೇಕು.! ಅಥವಾ,

ಪರಮಾತ್ಮನು ಕೈ ಎತ್ತಿ, ಕೈ ನೀಡಿ, ಕೈ ಹಿಡಿಯದೆ ಹೃದಯದಿಂದ ಕರುಣೆ, ದಯೆ, ವರಗಳನ್ನು ನೀಡುತ್ತಾನೆ ಎಂದರೆ ಯಾರ ರೀತಿಯ ಸಂಕುಚಿತತೆ ಇಲ್ಲ. ನಿರಂತರವಾಗಿ ನಿರಾಳವಾಗಿ ಮುಚ್ಚುಮರೆಯಿಲ್ಲದೆ ನೀಡುತ್ತಾನೆ. ಬೇಡುವವರು ಬೇಕಾದ್ದನ್ನು ಸಂಕೋಚವಿಲ್ಲದೆ ಬೇಡಬಹುದು.

855. ಪರಪ್ರಧ್ವಂಸಾಯ ನಮಃ

ಪರ - ಬೇರೆಯದು, ತನಗಿಂತ ಬೇರೆಯದು ಇಲ್ಲದ ಹಾಗೆ ಮಾಡುವವನು.

ಪರ - ಎಲ್ಲವನ್ನು ನಾಶಮಾಡಿ, ನಿರ್ಮೂಲವಾಗಿ ನಾಶಮಾಡಿ, ತನ್ನನ್ನೇ ಉತ್ತಮನೆಂದು ಸಾಧಿಸುವವನು.

ಅಜ್ಞಾನವನ್ನು ನಾಶಮಾಡಿ ಮೋಕ್ಷ ಸಾಧನೆಗೆ ದಾರಿಯನ್ನು ತೋರುವವನು.

ಪರ - ಪ್ರ - ಧ್ವಂಸನು. ಸರ್ವ ಅವಿದ್ಯೆಯನ್ನು, ಮಾಯೆಯನ್ನು ಕಳೆದು ಆತ್ಮವನ್ನು ಪ್ರಕೃತಿ, ಪುರುಷ, ಮಾಯೆ, ಸಂಸಾರಗಳ ಬಂಧನದಿಂದ ಬಿಡಿಸುವವನು.

**856. ಶಂಖಚಕ್ರಧರಾಯ ನಮಃ**

ಶಂಖವನ್ನು ಚಕ್ರವನ್ನು ಹಸ್ತದಲ್ಲಿ ಹಿಡಿದುಕೊಂಡಿರುವವನು - ಮಹಾವಿಷ್ಣು.

ಪಾಂಚಜನ್ಯವೆಂಬ ಶಂಖವನ್ನೂ ಸುದರ್ಶನ ಚಕ್ರವನ್ನು ಹಿಡಿದುಕೊಂಡಿರುವವನು - ಶ್ರೀಮನ್ಮಹಾವಿಷ್ಣು - ನರಸಿಂಹಸ್ವಾಮಿ - ವಿಷ್ಣುವಿನ ಅಲಂಕಾರ ವಸ್ತುಗಳು. ಶಂಖದಿಂದ ತಾನು ಇರುವೆನೆಂದು ಶತ್ರುಗಳಿಗೆ ಮುಂಚೆ ತಿಳಿಸುತ್ತಾನೆ ಮತ್ತು ಚಕ್ರದಿಂದ ಶತ್ರುಗಳನ್ನು ಸಂಹರಿಸುತ್ತಾನೆ. ಚಕ್ರದಿಂದ ಸಂಸಾರ ಬಂಧನವನ್ನು ಕತ್ತರಿಸಿ ಆತ್ಮಗಳಿಗೆ ಬಿಡುಗಡೆ ಕೊಡುತ್ತಾನೆ. ಶಂಖದಿಂದ ಜಾಗ್ರತೆಯಾಗಿರುವಂತೆ ತಿಳಿಸುತ್ತಾನೆ.

*ಗದಾಪದ್ಮಧರಾಯೈವ ಪಂಚಬಾಣಧರಾಯ ಚ |*
*ಕಾಮೇಶ್ವರಾಯ ಕಾಮಾಯ ಕಾಮಪಾಲಾಯ ಕಾಮಿನೇ ||144||*
*(857-862)*

**857. ಗದಾಪದ್ಮಧರಾಯ ನಮಃ**

ಗದೆಯನ್ನೂ ಪದ್ಮವನ್ನೂ ಧರಿಸಿರುವವನು - ಕೈಯಲ್ಲಿ ಹಿಡಿದಿರುವವನು. ಕೌಮೋದಕೀ ಎಂಬ ಗದೆಯನ್ನು ಮಹಾವಿಷ್ಣುವು ಹಿಡಿದಿರುತ್ತಾನೆ. ಸುಂದರವಾದ ಕಮಲವನ್ನು ಶುಭಸೂಚಕವಾಗಿ ಹಿಡಿದಿರುತ್ತಾನೆ.

ಶಂಖದ ಸ್ತೋತ್ರ / ಚಕ್ರ ಸ್ತೋತ್ರ

*ಸ್ಫುರತಸಹಸ್ರಾರ ಶಿಖಾತಿ ತೀವ್ರಂ*
*ಸುದರ್ಶನ ಭಾಸ್ಕರಕೋಟಿತುಲ್ಯಂ*
*ಸುರದ್ವಿಷಾಂ ಪ್ರಾಣವಿನಾಶಿ ವಿಷ್ಣೋಃ*
*ಚಕ್ರಂ ಸದಾಹಂ ಶರಣಂ ಪ್ರಪದ್ಯೇ ||1||*

*ವಿಷ್ಣೋರ್ಮುಖೋತ್ಥಾನಿಲಪೂರಿತಸ್ಯ*
*ಯಸ್ಯಧ್ವನಿರ್ದಾನವ ದರ್ಪಹಂತಾ |*
*ತಂ ಪಾಂಚಜನ್ಯಂ ಶಶಿಕೋಟಿ ಶುಭ್ರಂ*
*ಶಂಖಂ ಸದಾಹಂ ಶರಣಂ ಪ್ರಪದ್ಯೇ ||2||*

*ಹಿರಣ್ಮಯೀಂ ಮೇರು ಸಮಾನ ಸಾರಾಂ*
*ಕೌಮೋದಕೀಂ ದೈತ್ಯಕುಲೈಕಹಂತ್ರೀಂ ।*
*ವೈಕುಂಠ ವಾಮಾಗ್ರಕರಾಭಿಮೃಷ್ಟಾಂ*
*ಗದಾಂ ಸದಾಹಂ ಶರಣಂ ಪ್ರಪದ್ಯೇ ॥3॥*

*ರಕ್ಷೋ ಸುರಾಣಾಂ ಕಠಿನೋಗ್ರ ಕಂಠಃ*
*ಚ್ಛೇದಕ್ಷರಚ್ಛೋಣಿತ ದಿಗ್ಧಧಾರಾಂ ।*
*ತಂ ನಂದಕಂ ನಾಮಹರೇ ಪ್ರದೀಪ್ತಂ*
*ಖಡ್ಗಂ ಸದಾಹಂ ಶರಣಂ ಪ್ರಪದ್ಯೇ ॥4॥*

*ಯಜ್ಞ್ಯಾನಿನಾದ ಶ್ರವಣಾತ್ಸುರಾಣಾಂ*
*ಚೇತಾಂಸಿ ನಿರ್ಮುಕ್ತ ಭಯಾನಿ ಸದ್ಯಃ ।*
*ಭವಂತಿ ದೈತ್ಯಾಶನಿ ಬಾಣವರ್ಷೀ*
*ಶಾಂರ್ಙ್ಗಂ ಸದಾಹಂ ಶರಣಂ ಪ್ರಪದ್ಯೇ ॥5॥*

*ಇಮಂ ಹರೇಃ ಪಂಚ ಮಹಾಯುಧಾನಾಂ*
*ಸ್ತವಂ ಪಠೇದ್ಯೋಽನುದಿನಂ ಪ್ರಭಾತೇ ।*
*ಸಮಸ್ತ ದುಃಖಾನಿ ಭಯಾನಿ ಸದ್ಯಃ*
*ಪಾಪಾನಿ ನಶ್ಯಂತಿ ಸುಖಾನಿ ಸಂತಿ ॥6॥*

*ವನೇ ರಣೇ ಶತ್ರು ಜಲಾಗ್ನಿಮಧ್ಯೇ*
*ಯದೃಚ್ಛಯಾಪತ್ಸು ಮಹಾಭಯೇಷು ।*
*ಇದಂ ಪಠನ್ ಸ್ತೋತ್ರಮನಾಕುಲಾತ್ಮಾ*
*ಸುಖೀ ಭವೇತ್ತತ್ ಕೃತ ಸರ್ವರಕ್ಷಾ ॥7॥*
*॥ ಇತಿ ಹರೇಃ ಪಂಚಾಯುಧ ಸ್ತೋತ್ರಃ ॥*

858. ಪಂಚಬಾಣಧರಾಯ ನಮಃ

ಪಂಚಬಾಣಧರನು - ಎಂದರೆ ಐದು ಬಾಣಗಳನ್ನು ಧರಿಸಿರುವವನು, ಪರಮಾತ್ಮನು ಮನ್ಮಥ ಸ್ವರೂಪನು, ಕಾಮದೇವನು - ಕಾಮದೇವನ 5 ಬಾಣಗಳು -

*ಅರವಿಂದಮಶೋಕಂ ಚ ಚೂತಂ ಚ ನವ ಮಲ್ಲಿಕಾ ॥28॥*
*ನೀಲೋತ್ಪಲಂ ಚ ಪಂಚೈತೇ ಪಂಚ ಬಾಣಸ್ಯ ಸಾಯಕಾ ॥*
(ಅಮರಕೋಶ ಪ್ರಥಮಕಾಂಡ, ಸ್ವರ್ಗವರ್ಗ ಶ್ಲೋಕ 27-28)

ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ ಎಂಬುವೇ ಐದು ಬಾಣಗಳು - ಕಾಮದೇವನ ಪಂಚ ಬಾಣಗಳು.

ಪ್ರಪಂಚದಲ್ಲಿ, ಏಕೆ, ಸೃಷ್ಟಿಯಲ್ಲಿ ಕಾಮದೇವನಿಂದ ವಶರಾಗದವರು, ಅವನ ಬಾಣಗಳಿಂದ ಪೀಡಿತರಾಗದವರು ಯಾರೂ ಇಲ್ಲ - ಯಾವ ಜೀವಿಯೂ ಇಲ್ಲ - ಯಾವ ದೇವ ದೇವತೆಯರೂ ಇಲ್ಲ. ಸರ್ವರೂ ಇದಕ್ಕೆ ಮನಸೋಲಲೇ ಬೇಕು. ಇದು ಸೃಷ್ಟಿ ನಿಯಮ. ಪರಮಾತ್ಮನ ಸಂಕಲ್ಪ. ಇದು ಉದ್ಧಾರಕ್ಕೂ ದಾರಿ, ನಾಶಕ್ಕೂ ದಾರಿ. ಇದಕ್ಕಾಗಿಯೇ ಪರಮಾತ್ಮನು ವಿವೇಕ ಬುದ್ಧಿ, ಮನಸ್ಸನ್ನು ನ್ಯಯಪಾಲಿಸಿದ್ದಾನೆ. ಮಾಯೆಯನ್ನು ಸೃಷ್ಟಿಸಿದ್ದಾನೆ. ಮಾಯೆಗೆ ಒಳಗಾಗದವರು ಯಾರೂ ಇಲ್ಲ - ಪಂಚಬಾಣಧರಾಯ ನಮಃ.

**859. ಕಾಮೇಶ್ವರಾಯ ನಮಃ**

ಕಾಮ - ಎಂದರೆ ಇಚ್ಛೆಗಳು, ಪ್ರೇಮ, ಮದನನು, ಪ್ರೀತಿ, ಪ್ರೇಮದ ದೇವರು, ಕಾಮದೇವ, ಪ್ರದ್ಯುಮ್ನ (ಶ್ರೀಕೃಷ್ಣನ ಮಗ).

ಸಕಲ ಕಾಮನೆಗಳಿಗೂ ಒಡೆಯನು - ಕಾಮೇಶ್ವರ.

ಪ್ರೀತಿ, ಪ್ರೇಮಗಳಿಗೆ ಒಡೆಯನು - ಕಾಮೇಶ್ವರ.

ಪ್ರೀತಿ, ಪ್ರೇಮ, ಇಚ್ಛೆಗಳ ಗಣಿ - ಕಾಮೇಶ್ವರ.

ಕಾಮದೇವ, ಪ್ರದ್ಯುಮ್ನರ ತಂದೆ - ಈಶ್ವರನು, ಕಾಮೇಶ್ವರನು.

ಮದನ, ಮನ್ಮಥನ ಪಿತನು - ಮಹಾವಿಷ್ಣು, ನಾರಾಯಣ, ಶ್ರೀಕೃಷ್ಣ.

ಕಾಮನೇ ಅವನು, ಎಲ್ಲ ಭಾಗದಲ್ಲಿಯೂ, ಎಲ್ಲೆಲ್ಲಿಯೂ ಹರಡಿಕೊಂಡಿರುವವನು - ಕಾಮನು, ಮಹಾವಿಷ್ಣು. ವಿಷ್ಣುವು ಇರುವ ಹಾಗೆ ಅವನೊಡನೆ ಕಾಮವೂ ಸಕಲರಲ್ಲಿಯೂ, ಸದಾಕಾಲ ನಿರಂತರ, ಇರುತ್ತದೆ. ಇದು ಪರಮಾತ್ಮನ ಸಂಕಲ್ಪದಂತೆ ಪ್ರಭಾವ ಬೀರುತ್ತದೆ. - ಕಾಮೇಶ್ವರಾಯ ನಮಃ.

**860. ಕಾಮಾಯ ನಮಃ**

ಕಾಮ - ಎಂದರೆ ಆಸೆ, ಇಚ್ಛೆ, ಪಡೆಯಬೇಕೆಂಬುವ ಆಕಾಂಕ್ಷೆ. ಇದೇ ಅವನು. ಇದರ ಪ್ರೇರಕನೂ ಅವನೇ! ಪರಮಾತ್ಮನೇ ಕಾಮ - ಅವನನ್ನು ನೋಡುವುದೇ, ಕಾಮ!

ಕಾಮವಿಲ್ಲದೆ ಪರಮಾತ್ಮನಿಲ್ಲ! ಪರಮಾತ್ಮನಿಲ್ಲದೆ ಕಾಮವಿಲ್ಲ!! ಅವನೇ ಸೃಷ್ಟಿಸುವ ಮೊದಲು ''ಸೋಽಕಾಮಯತ! ಪ್ರಜಾಃ ಸೃಜೇಯೇತಿ'' - ಕಾಮಾಯ ನಮಃ.

861. ಕಾಮಪಾಲಾಯ ನಮಃ

ಕಾಮಪಾಲ - ಕಾಮವನ್ನು ಪಾಲಿಸುವವನು, ಕಾಪಾಡುವವನು. ಕಾಮವನ್ನು ಪ್ರೋತ್ಸಾಹಿಸುವವನು, ವೃದ್ಧಿಪಡಿಸುವವನು - ಪರಮಾತ್ಮನು ಕಾಮವನ್ನು ಸೃಷ್ಟಿಸಿ ವೃದ್ಧಿಪಡಿಸುತ್ತಾನೆ. ಅದರಿಂದ ಕಾಮಪಾಲನು.

ಕಾಮಪಾಲ - ಆತ್ಮನು ತನ್ನೊಡನೆ ಅಂಟಿಕೊಂಡಿರುವ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಇಂದ್ರಿಯಗಳಿಂದ ಕಾಮದೇವನನ್ನು ಆರಾಧಿಸಿ, ಪೂಜಿಸಿ ತನ್ನಲ್ಲಿಯೇ ತನ್ನ ಕಾಲಯಾತ್ರೆಯಲ್ಲಿ ಕಾಪಾಡುತ್ತಾನೆ. ಎಷ್ಟರ ಮಟ್ಟಿಗೆ ಎಂದರೆ "ನಾನು" ಎಂಬ "ಅಹಂ"ಯೇನೆ ವೃದ್ಧಿಯಾಗಿ ಆತ್ಮನನ್ನು ಮುಚ್ಚಿ ಹಾಕಿ ಅಹಂಕಾರವೇ ಮಾಯೆಯಿಂದ ಕವಿದು ಹೋಗುತ್ತದೆ. ಆ ಮಟ್ಟಕ್ಕೆ ಅಲ್ಲಿಯವರೆಗೆ ಕಾಮಪಾಲನಾಗುತ್ತಾನೆ. ಮತ್ತು ಕಾಮದ ಪಾಲಾಗುತ್ತಾನೆ. ನಂತರ ಸಂಸಾರಸಾಗರದಿಂದ ಬಿಡುಗಡೆ ಹೊಂದಬೇಕೆಂಬ ಕಾಮನೆಯೂ ಮಸುಕಾಗುತ್ತದೆ. ಅದರಿಂದ ಸಂಸಾರ ಸಾಗರದಲ್ಲಿ ಮುಳುಗಿ ಹೋಗಿ ಯಾತನೆಯನ್ನು ಬಹಳ ಕಷ್ಟದಿಂದ ಅನುಭವಿಸಬೇಕಾಗುತ್ತದೆ. ಇದು ವಿವೇಕ ಬುದ್ಧಿಯನ್ನು ಕಾಮನ ಕೈಗೆ ಒಪ್ಪಿಸಿದ ಫಲ - ಆಗ ಕಾಮನೇ ಆತ್ಮನನ್ನು ಆಳುತ್ತದೆ.

862. ಕಾಮಪಾಲ - ಕಾಮಿನೇ ನಮಃ

ಕಾಮಿ - ಕಾಮನನ್ನು ಇಚ್ಛಿಸುವವನು ಕಾಮಿ.

ಅಥವಾ ಕಾಮನ ಬಲದಲ್ಲಿ ತನ್ನನ್ನು ತಾನೇ ಒಪ್ಪಿಸುವವನು ಕಾಮಿ. ನಂತರ ಬಿಡಿಸಿಕೊಂಡು ಬರಲು ಜೀವಿಗಳಿಗೆ ಅಸಾಧ್ಯ. ಕಾಮನನ್ನೇ ಪರಮಾತ್ಮನ ಮತ್ತು ಅಂತರ್ಯಾಮಿಯ ಕಡೆಗೆ ತಿರುಗಿಸಿದರೆ ಇದು ಉತ್ತಮ ಕಾಮನೆಯಾಗುತ್ತದೆ ಮತ್ತು ಸರ್ವರೂ ಇಚ್ಛಿಸುವ ಕಾಮನೆಯಾಗುತ್ತದೆ ಮತ್ತು ಅವನು ಉತ್ತಮ ಕಾಮಿಯಾಗುತ್ತಾನೆ.

ಅಥವಾ

ಕಾಮವನ್ನು ಕಾಮಿಸುವುದರಿಂದ ಪರಮಾತ್ಮನು ಕಾಮಿ. ಭಕ್ತರನ್ನು ಪ್ರೀತಿಸುವುದರಿಂದ ಪರಮಾತ್ಮನು ಕಾಮಿ. ಅಂತಹ ಪರಮಾತ್ಮನಿಗೆ ನಮಸ್ಕಾರಗಳು - ಕಾಮಿನೇ ನಮಃ.

*ನಮಃ ಕಾಮವಿಹಾರಾಯ ಕಾಮರೂಪಧರಾಯ ಚ ।*
*ಸೋಮಸೂರ್ಯಾಗ್ನಿನೇತ್ರಾಯ ಸೋಮಪಾಯ ನಮೋ ನಮಃ ॥145॥*

*(863-866)*

**863. ಕಾಮವಿಹಾರಾಯ ನಮಃ**

ಕಾಮವಿಹಾರನು - ಕಾಮದಲ್ಲಿ, ಕಾಮಸಾಗರದಲ್ಲಿ ವಿಹರಿಸುವವನು ಯಾರೋ ಅವನು - ಅವರಲ್ಲಿ ಸರ್ವೋತ್ತಮನು ಪರಮಾತ್ಮ.

ಅಥವಾ

ಕಾಮದೊಡನೆ ಸಂಗಡಿಗನಾಗಿ ವಿಹರಿಸುವವನು, ನಿರಂತರ ಎಡಬಿಡದೆ ವಿಹರಿಸುವವನು - ಪರಮಾತ್ಮ.

ಅಥವಾ

ಅಖಿಲಾಂಡ ಕೋಟಿ ಬ್ರಹ್ಮಾಂಡಗಳಲ್ಲಿರುವ ಸಕಲ ಜೀವ / ನಿರ್ಜೀವ ವಸ್ತುಗಳೂ ಸಹ ಕಾಮವೆಂಬ ಸಮುದ್ರದಲ್ಲಿ ಅಥವಾ ಕಾಮವೆಂಬ ನಂದನ ವನದಲ್ಲಿ ನಿರಂತರ ವಿಹರಿಸುತ್ತವೆ. ಇದು ಇಲ್ಲದ ಸಮಯವೇ ಇಲ್ಲ. ಇದು ಸೃಷ್ಟಿಯ ನಿಯಮ. ಪರಮಾತ್ಮನ ಸಂಕಲ್ಪದ ಕಾಮನೆ - ಕಾಮವಿಹಾರಾಯ ನಮಃ.

ಪರಮಾತ್ಮನು ಈ ಕಾಮದೊಡನೆ ವಿಹರಿಸುತ್ತಿದ್ದರೂ ಅವನು ಬಿಡಿಸಿಕೊಳ್ಳಬಲ್ಲನು - ಏಕೆಂದರೆ ಅವನು ಅದರ ಒಳಗಾಗುವುದಿಲ್ಲ. ಆದರೆ ಆತ್ಮನು ಬಿಡಿಸಿಕೊಳ್ಳಲಾಗುವುದಿಲ್ಲ - ಏಕೆಂದರೆ ಅವನನ್ನು ಅಂಟಿಕೊಂಡಿರುವ ಸಂಸ್ಕಾರ, ಮನೋಬುದ್ಧಿ, ಅಹಂಕಾರ, ಚಿತ್ತ, ಇಂದ್ರಿಯಗಳು ಸಂಸಾರದಿಂದ / ಮಾಯೆಯಿಂದ ಬಿಡಿಸಿಕೊಳ್ಳಲು ಸಾಧ್ಯವಿಲ್ಲ. ಅದಕ್ಕೆ ಪರಮಾತ್ಮನ ಅಪಾರ ಕರುಣೆಯೇ ಬೇಕು!!

**864. ಕಾಮರೂಪಧರಾಯ ನಮಃ**

ಕಾಮರೂಪಧರನು - ಪರಮಾತ್ಮನು ಕಾಮನ ರೂಪವನ್ನು ಧರಿಸಿದವನು - ಮನ್ಮಥನು - ಕಾಮನೇ ಪರಮಾತ್ಮನ ಒಂದು ರೂಪ - ಅಥವಾ ಅವನೇ - ಪರಮಾತ್ಮನೇ ಕಾಮನು.

ಆದರೆ, ಆತ್ಮನು ಕಾಮವನ್ನು ಮಾಯೆಯ ದೆಸೆಯಿಂದ ಸಂಸ್ಕಾರ, ಮನಸ್ಸು, ಬುದ್ಧಿಗಳ ರೂಪದಲ್ಲಿ ಅಂಟಿಸಿಕೊಳ್ಳುತ್ತಾನೆ. ಅವುಗಳಿಂದ ಬಿಡಿಸಿಕೊಳ್ಳಬೇಕಾದರೆ ಪರಮಾತ್ಮನ ಕೃಪೆ ಬೇಕು. ಪರಮಾತ್ಮನನ್ನು ಹೊಂದುವುದಕ್ಕೆ ಕಾಮವನ್ನು ತಿರುಗಿಸಲೂ ಸಹ ಅವನ ಕೃಪೆಯೇ ಬೇಕು. ಬೇರೆ ದಾರಿ ಇಲ್ಲ.

**865. ಸೋಮಸೂರ್ಯಾಗ್ನಿನೇತ್ರಾಯ ನಮಃ**

ಸೋಮ - ಸೂರ್ಯ - ಅಗ್ನಿ - ನೇತ್ರಾಯ ನಮಃ.

ಪರಮಾತ್ಮನಿಗೆ ಚಂದ್ರ, ಸೂರ್ಯ, ಅಗ್ನಿಗಳು ಕಣ್ಣುಗಳು. ಪುರುಷ ಸೂಕ್ತದಲ್ಲಿ ಹೀಗೆ ಹೇಳಿದೆ - "ಚಕ್ಷೋಃ ಸೂರ್ಯೋಽಜಾಯತ ಮುಖಾದಿಂದ್ರಶ್ಚಾಗ್ನಿಶ್ಚ, ಚಂದ್ರಮಾ ಮನಸೋಜಾತಃ".

ಮೂರು ಕಣ್ಣುಗಳುಳ್ಳವನು - ಶಿವ, ತ್ರಿನೇತ್ರ - ಪರಬ್ರಹ್ಮದ ನಿರ್ದೇಶದಂತೆ, ತಾನೇ ವಿಭಾಗಿಸಿಕೊಂಡಂತೆ ಲಯಕಾರ್ಯವನ್ನು ಶಿವನು ಮಾಡುತ್ತಾನೆ. ತನ್ನ ಹಣೆಯಲ್ಲಿನ ಮೂರನೆಯ ಕಣ್ಣಿನಿಂದ ಮನ್ಮಥನನ್ನು ಭಸ್ಮ ಮಾಡಿದನು.

ಉಳಿದ ಎರಡು ಕಣ್ಣುಗಳಿಂದ ಜಗತ್ತನ್ನು ಮಧುರವಾಗಿ ನೋಡುತ್ತಾನೆ. ಇದರಿಂದ ಶಿವನು - ಸೋಮಸೂರ್ಯಾಗ್ನಿನೇತ್ರನು.

**866. ಸೋಮಪಾಯ ನಮಃ**

ಸೋಮ - ಚಂದ್ರನನ್ನು, ಪ - ಪಾಲಿಸುವವನು.

ಚಂದ್ರನಿಗೆ ಬೆಳಕನ್ನು ನೀಡುವವನು ಸೂರ್ಯನಾರಾಯಣ, ಪರಮಾತ್ಮನು ಚಂದ್ರನನ್ನು ಕಾಪಾಡುತ್ತಾನೆ.

ಸೋಮ - ಅಮೃತವನ್ನು, ಪ ಕಾಪಾಡಿ ದೇವತೆಗಳಿಗೆ ಹಂಚಿದವನು, - ಮಹಾವಿಷ್ಣು.

ಸೋಮರಸವನ್ನು ದೇವತೆಗಳು ವರ್ಧಿಸಿ ತೆಗೆದುಕೊಳ್ಳುತ್ತಾರೆ, ಅದನ್ನು ಪರಮಾತ್ಮನು ಕಾಪಾಡುತ್ತಾನೆ. ಅಥವಾ,

ಸೋಮ - ಎಂದರೆ ಚಂದ್ರನನ್ನು, ಪ - ಪಾಲಿಸುವವನು - ಪರಮಾತ್ಮ - ಶಿವ (ತಲೆಯಲ್ಲಿ ಚಂದ್ರಕಲೆಯನ್ನಿಟ್ಟು ಶಿವನು ಕಾಪಾಡುತ್ತಾನೆ).

*ನಮಃ ಸೋಮಾಯ ವಾಮಾಯ ವಾಮದೇವಾಯ ತೇ ನಮಃ ।*
*ಸೋಮೇಶ್ವರಾಯ ಸೌಮ್ಯಾಯ ಭಕ್ತಿಗಮ್ಯಾಯ ತೇ ನಮಃ ।।146।।*
*(867-872)*

**867. ಸೋಮಾಯ ನಮಃ**

ಸೋಮ - ಚಂದ್ರ, ಚಂದ್ರನಿಗೆ ನಮಸ್ಕಾರಗಳು.

ಚಂದ್ರನು ಪರಮಾತ್ಮನ ಒಂದು ರೂಪ. ಜಗತ್ತಿಗೆ ಬೇಕಾಗುವ ಸೂರ್ಯ, ಚಂದ್ರರನ್ನು ಪಂಚಮಹಾಭೂತಗಳನ್ನು, ಗ್ರಹಗಳನ್ನೂ ಪರಮಾತ್ಮನು ಸೃಷ್ಟಿಸಿದನು. ಸಕಲ ಜೀವಿಗಳ ಜೀವನದಲ್ಲಿ ಈ ಗ್ರಹಗಳು ಪರಿಣಾಮವನ್ನು ಬೀರುತ್ತವೆ.

ಪರಮಾತ್ಮನ ಮನಸ್ಸಿನಿಂದ ಚಂದ್ರನು ಜನಿಸಿದನು - ''ಚಂದ್ರಮಾ ಮನಸೋ ಜಾತ'' ಎಂದು ಪುರುಷ ಸೂಕ್ತದಲ್ಲಿ ಹೇಳಿದೆ. (ಚಂದ್ರಮಾ ಮನಸೋ ಜಾತಃ ಚಕ್ಷೋಃ ಸೂರ್ಯೋಽಜಾಯತ.)

ಅಥವಾ

ಶಿವನ ತಲೆಯ ಮೇಲೆ ಇರುವ ಚಂದ್ರನಿಗೆ ನಮಸ್ಕಾರಗಳು. ಈ ಕಾರಣದಿಂದ ಶಿವನನ್ನು ಚಂದ್ರಚೂಡ, ಚಂದ್ರಶೇಖರ, ಚಂದ್ರಧರ, ಚಂದ್ರಮೌಳಿ

ಎಂದು ಕರೆಯುತ್ತಾರೆ - ಇಂತಹ ಸೋಮನಿಗೆ ನಮಸ್ಕಾರಗಳು - ಸೋಮಶೇಖರನೇ ಶಿವ.

ಅಥವಾ

ರಾತ್ರಿಯಲ್ಲಿ ತಂಪಾದ ಬೆಳಕನ್ನು ಕೊಡುವ ಚಂದ್ರ / ಸೋಮನಿಗೆ ನಮಸ್ಕಾರಗಳು.

ಸೋಮನನ್ನು ಸೌಂದರ್ಯಕ್ಕೆ ಉಪಮಾನವಾಗಿ ಹೋಲಿಸುತ್ತಾರೆ.

**868. ವಾಮಾಯ ನಮಃ**

ವಾಮ - ಎಡ, ಸುಂದರ - ವಾಮದೇವ - ಶಿವ.

ಪರಮಾತ್ಮನನ್ನು ವಾಮದೇವನೆಂದು ಹೇಳುತ್ತೇವೆ. ವಾಮದೇವನು ಶಿವನೇ!

ವಾಮ - ಎಂದರೆ ಎಡಭಾಗ.

ಅಥವಾ ವಾಮನನ್ನು ವಾಮ ಎಂದೂ ಕರೆದಿರಬಹುದು.

ವಾಮ - ಎಂದರೆ ವಿರುದ್ಧ, ಪ್ರತಿಕೂಲ ಎಂದು ಅರ್ಥ. ಎಂದರೆ ಪರಮಾತ್ಮನು ಅಸಾತ್ವಿಕ ಗುಣಗಳಿಗೆ ವಿರೋಧಿ. ಶತ್ರುಗಳಿಗೆ ಪ್ರತಿಕೂಲನು - ಆದರಿಂದ ವಾಮಾಯ ನಮಃ.

**869. ವಾಮದೇವಾಯ ನಮಃ**

ವಾಮದೇವನೆಂದರೆ ಶಿವನು - ಶಿವನಿಗೆ ನಮಸ್ಕಾರಗಳು.

**870. ಸೋಮೇಶ್ವರಾಯ ನಮಃ**

ಸೋಮ - ಎಂದರೆ ಚಂದ್ರನಿಗೆ, ಈಶ್ವರ - ಎಂದರೆ ಒಡೆಯನು.

ಸೋಮೇಶ್ವರನು - ಶಿವನು - ಸೋಮೇಶ್ವರಾಯ ನಮಃ ಎಂದರೆ ಈಶ್ವರನಿಗೆ ನಮಸ್ಕಾರಗಳು. (ಶಿವನು ಚಂದ್ರನನ್ನು ಪ್ರೀತಿಯಿಂದ ಗೆದ್ದು ತನ್ನ ಜಟೆಯಲ್ಲಿ ಸೇರಿಸಿಕೊಂಡಿದ್ದಾನೆ.)

**871. ಸೌಮ್ಯಾಯ ನಮಃ**

ಸೌಮ್ಯ - ಎಂದರೆ ಶಾಂತಭಾವವುಳ್ಳವನು, ಆಕರ್ಷಕ ಭಾವ, ಆಹ್ಲಾದಕರ ಸ್ವಭಾವದವನು - ಸಾತ್ವಿಕ ಭಾವದವನು.

ಸೃಷ್ಟಿಯಲ್ಲೆಲ್ಲ ಸೌಮ್ಯಭಾವದವನು ಪರಮಾತ್ಮನೊಬ್ಬನೇ. ಈ ಗುಣದಲ್ಲಿ ಪರಮಾತ್ಮನು ಅದ್ವಿತೀಯನು - ಈ ಗುಣದಿಂದಲೇ ಅವನ ನಾಮವಿದೆ.

ಸೌಮ್ಯ ಚೆನ್ನಕೇಶವ ಸ್ವಾಮಿ.

ಸೌಮ್ಯ - ಪ್ರಿಯವಾದವನು, ಮೃದುವಾದವನು, ಒಳ್ಳೆಯವನು.

ಸಕಲರಿಗೂ ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾಗಿ ಯಾವ

ತಾರತಮ್ಯವೂ ಇಲ್ಲದೆ, ಪಕ್ಷಪಾತವಿಲ್ಲದೆ ಶತ್ರು ಮಿತ್ರರಿಗೆ ಸಮಾನವಾಗಿ ಪ್ರಿಯನಾದವನು ಪರಮಾತ್ಮನಲ್ಲದೆ ಬೇರೆ ಇಲ್ಲ - ಆದರಿಂದ ಅವನೇ ಸೌಮ್ಯನು - ಸೌಮ್ಯಯ ನಮಃ.

**872. ಭಕ್ತಿಗಮ್ಯಾಯ ನಮಃ**

ಭಕ್ತಿಗಮ್ಯ - ಎಂದರೆ ಭಕ್ತಿಯು ಎಲ್ಲೆಲ್ಲಿ ಯಾವುದೇ ಪ್ರಮಾಣದಲ್ಲಿದ್ದರೂ (ಲವಲೇಶವಿರಲೀ, ಮಹತ್ತಾಗಿರಲೀ) ಯಾವ ಸಮಯದಲ್ಲೀ ಆಗಲೀ, ಕಾಲದೇಶವನ್ನು ಸಹ ಗಮನಿಸದೇ ಗಮಿಸುವವನು - ಎಂದರೆ ಹೋಗುವವನು / ಬರುವವನು - ಪರಮಾತ್ಮ. ಭಕ್ತಿ ಎಂದರೆ ಪರಮಾತ್ಮನಿಗೆ ಪರಮ ಪ್ರೀತಿಯ ವಸ್ತು. ಭಕ್ತಿಯಿಂದ ಅದರಲ್ಲೂ ಅವ್ಯಭಿಚಾರಿಣಿ ಭಕ್ತಿ, ಅನನ್ಯ ಶ್ರದ್ಧೆಯಿಂದ ಪರಮಾತ್ಮನು ಕಟ್ಟಲ್ಪಡುತ್ತಾನೆ. ಅದಕ್ಕೆ ಅವನು ನಯವಾಗಿಯೂ, ನಮ್ರನಾಗಿಯೂ ಬಿಡುತ್ತಾನೆ. ಭಕ್ತನ ಸೇವೆಗಾಗಿ ಕಾದು ನಿಂತಿರುತ್ತಾನೆ. ಭಕ್ತಿಯೆಂಬುದು ಪರಮಾತ್ಮನಿಗೆ ಭಕ್ತನು ಉಪಯೋಗಿಸುವ ವಶೀಕರಣ ಮಂತ್ರ. ಭಕ್ತಿಯ ಕರೆಯನ್ನು ಪರಮಾತ್ಮನು ನಿರಾಕರಿಸಲು ಇಷ್ಟಪಡುವುದಿಲ್ಲ. ಅವನು ಕಾಮಿಸುವುದು ಭಕ್ತಿಯನ್ನೇ. ಆದರಿಂದ ಅದಕ್ಕೆ ವಶವಾಗುವುದು ತತ್‌ಕ್ಷಣದಲ್ಲಿಯೇ!! ಆದರಿಂದಲೇ ಅವನು ಭಕ್ತಿಗಮ್ಯಾಯ ನಮಃ ನೂ ಹೌದು, ಭಕ್ತಗಮ್ಯಾಯ ನಮಃನೂ ಹೌದು!! ಭಕ್ತಿಗಾಗಿ ಪರಮಾತ್ಮನು ತನ್ನ ಲಕ್ಷ್ಮಿಯನ್ನು ಬಿಡಲೂ ಸಿದ್ಧ, ಆ ವಿರಹವು ಭಕ್ತನ ವಿರಹಕ್ಕಿಂತ ಕಡಿಮೆ.

*ಕೂಷ್ಮಾಂಡಗಣನಾಥಾಯ ಸರ್ವಶ್ರೇಯಸ್ಕರಾಯ ಚ ।*
*ಭೀಷ್ಮಾಯ ಭೀಕರಾಯೈವ ಭೀಮವಿಕ್ರಮಣಾಯ ಚ ॥147॥*

*(873-877)*

**873. ಕೂಷ್ಮಾಂಡಗಣನಾಥಾಯ ನಮಃ**

ಕೂಷ್ಮಾಂಡ - ಕುಂಬಳಕಾಯಿ (ಬೂದು, ಸೀ)

ಬೂದುಕುಂಬಳಕಾಯಿಯನ್ನು ದುಷ್ಟಶಕ್ತಿಗಳು ಆಕ್ರಮಿಸದಂತೆ ಮಾಡುವ ತಂತ್ರರೀತಿ.

ದುಷ್ಟಶಕ್ತಿಗಳನ್ನು - ಅವುಗಳ ಗುಂಪುಗಳನ್ನು ಅಧೀನದಲ್ಲಿಟ್ಟುಕೊಂಡು ಯಾರಿಗೂ ತೊಂದರೆ ಕೊಡದ ರೀತಿಯಲ್ಲಿ ಮಾಡುವವನು. ಸಕಲ ಅಖಿಲಾಂಡ ಕೋಟಿ ಬ್ರಹ್ಮಾಂಡದಲ್ಲಿ ಎಲ್ಲ ರೀತಿಯ ಶಕ್ತಿಗಳು ಇದ್ದೇ ಇರುತ್ತವೆ. ಅವುಗಳೆಲ್ಲವನ್ನು ತನ್ನ ಅಧೀನದಲ್ಲಿ ಪರಮಾತ್ಮನು ಇಟ್ಟುಕೊಳ್ಳುತ್ತಾನೆ. ಅವುಗಳು ಕೊಡುವ ಫಲಗಳನ್ನೂ ಸಹ ನಿಯಂತ್ರಿಸುತ್ತಾನೆ. ಸಾತ್ವಿಕ ಸ್ವಭಾವದ ಮನೋಭಾವವಿರುವ ಆತ್ಮಗಳ ದೇಹಕ್ಕೆ ಪರಮಾತ್ಮನು ಈ ದುಷ್ಟಶಕ್ತಿಗಳಿಂದ

ಕಾಪಾಡುತ್ತಾನೆ. ಆದರಿಂದ ಕೂಷ್ಮಾಂಡವನ್ನು ದೃಷ್ಟಿ ಪರಿಹಾರಕ್ಕಾಗಿ ಜೀವಿಗಳು ಉಪಯೋಗಿಸುತ್ತಾರೆ - ಪರಮಾತ್ಮನನ್ನೇ ಈ ಪರಿಹಾರಕೊಡಲು ಮೊರೆ ಹೋಗುತ್ತಾರೆ - ಆದರಿಂದ ಅವನನ್ನು ಕೂಷ್ಮಾಂಡ ಗಣನಾಥಾಯ ನಮಃ ಎಂದು ನಮಸ್ಕರಿಸುತ್ತೇವೆ.

ಮಕರ ಸಂಕ್ರಾಂತಿ - ಸಂಕ್ರಾಂತಿಗಳಲ್ಲೆಲ್ಲ ಕಿರೀಟಪ್ರಾಯವಾದುದು ತಿಲ ಸಂಕ್ರಾಂತಿ. ದಕ್ಷಿಣಾಯನ ಉತ್ತರಾಯಣಗಳ ಸಂಧಿಕಾಲ. ದುಷ್ಟಶಕ್ತಿಗಳಿಂದ ಬಿಡುಗಡೆಹೊಂದಲು ಕೂಷ್ಮಾಂಡ ದಾನಕೊಡುವ ಸಂಪ್ರದಾಯವಿದೆ.

ಗೃಹಪ್ರವೇಶ, ಮಹಾನವಮಿ ದಿನಗಳಲ್ಲಿ ಬೂದುಕುಂಬಳಕಾಯಿಯನ್ನು ರಕ್ತವರ್ಣಮಾಡಿ ದೃಷ್ಟಿ ಪರಿಹಾರ ಪಡೆಯುವ ಸಂಪ್ರದಾಯವೂ ಸಹ ಪರಿಪಾಠದಲ್ಲಿದೆ.

**874. ಸರ್ವಶ್ರೇಯಸ್ಕರಾಯ ನಮಃ**

ಸರ್ವ - ಎಲ್ಲ ರೀತಿಯ, ಶ್ರೇಯಸ್ - ಶ್ರೇಯಸ್ಸನ್ನು, ಯಶಸ್ಸನ್ನು, ಕರ - ಮಾಡುವವನು, ಯಾರೋ ಅವನು - ಪರಮಾತ್ಮ.

ಸಕಲ ರೀತಿಯ ಜೀವಿಗಳಿಗೆ ಸರ್ವೋತ್ತಮವಾದ ರೀತಿಯ ಯಶಸ್ಸನ್ನು ಪರಮಾತ್ಮನು ಕೊಡುತ್ತಾನೆ. ಶ್ರೇಯಸ್ಸನ್ನು ಕೊಡುವವರಲ್ಲಿ ಪರಮಾತ್ಮನೇ ಉತ್ತಮನು.

ಜೀವಿಗಳಲ್ಲಿ ಒಬ್ಬರಿಂದ ಒಬ್ಬರು ಪರಸ್ಪರ ಶ್ರೇಯಸ್ಸನ್ನು ಕೋರುತ್ತಾರೆ, ಕೊಡುತ್ತಾರೆ. ಇವೆಲ್ಲ ತಾತ್ಕಾಲಿಕ. ಪರಮಾತ್ಮನೊಬ್ಬನೇ ಸದಾ ನಿರಂತರ ಒಳ್ಳೆಯದನ್ನೇ ಮಾಡುವವನು - ಆದರಿಂದ ಸಕಲ ಜೀವಿಗಳೂ, ಚರಾಚರ ವಸ್ತುಗಳೂ ಪರಮಾತ್ಮನನ್ನೇ ಬೇಡಿ ಕಾಮಿತ ಫಲಗಳನ್ನು ಅವರವರ ಇಚ್ಛಾನುಸಾರ ಪಡೆಯುತ್ತಾರೆ. ಆದರೆ ಆಧ್ಯಾತ್ಮ ಸಾಧನೆಯಲ್ಲಿ ಮುಂದುವರಿದ ಜೀವಿಗಳು ಸರ್ವೋತ್ತಮ ಸಾರೂಪ್ಯ, ಸಾಲೋಕ್ಯ, ಸಾಯುಜ್ಯ, ಸಾಮೀಪ್ಯ ಪದವಿಯನ್ನು ಪಡೆಯಲು ಪರಮಾತ್ಮನನ್ನು ಭಕ್ತಿಯ ಮೂಲಕ ಆಶ್ರಯಿಸುತ್ತಾರೆ. ಇವರೇ ಧನ್ಯರು, ಬುದ್ಧಿ ಜೀವಿಗಳು - ಸರ್ವ ಶ್ರೇಯಸ್ಕರಾಯ ನಮಃ.

**875. ಭೀಷ್ಮಾಯ ನಮಃ**

ಭೀಷ್ಮ - ಭಯಂಕರನು. ನರಸಿಂಹ ಸ್ವಾಮಿಯು ಉಗ್ರರೂಪದಲ್ಲಿ ಅತಿ ಭಯಂಕರನು, ಭೀಷಣನು, ರೌದ್ರ ರಸದಲ್ಲಿ ಮುಳುಗಿದವನು.

ಭೀಷಣದಿಂದ ಭೀಷ್ಮ - ರೌದ್ರರಸೋಪೇತನು - (ನವ ರಸಗಳಲ್ಲಿ ಒಂದು)

ಭೀಷ್ಮ - ಮಹಾಭಾರತದಲ್ಲಿ ಬರುವ ಶಂತನು ಮಹಾರಾಜ ಮಗ ಸತ್ಯವ್ರತ.

ಈತನು ಗಂಗಾ ಪುತ್ರನು, ತಂದೆಯ ಕಾರಣಕ್ಕಾಗಿ ಸಕಲ ರಾಜ್ಯವನ್ನು ತ್ಯಜಿಸಿ ಆಜನ್ಮ ಬ್ರಹ್ಮಚಾರಿಯಾಗಿಯೇ ಉಳಿದವನು - ಈ ಘೋರ ಪ್ರತಿಜ್ಞೆಯನ್ನು ಮಾಡಿದ್ದರಿಂದ ''ಭೀಷ್ಮ'' ಎಂದು ಹೆಸರು ಪಡೆದನು. ಶಾಂತಿಪರ್ವದಲ್ಲಿ ಅನೇಕ ಗೂಢ, ಉದಾತ್ತ ವಿಚಾರಗಳನ್ನು ಧರ್ಮರಾಜನಿಗೆ ಉಪದೇಶಿಸಿದನು. ರಾಜಧರ್ಮ, ಧರ್ಮಗಳು, ಸ್ತೋತ್ರಗಳು, ಸಹಸ್ರನಾಮಗಳು, ಭೀಷ್ಮ ಸ್ತವರಾಜಗಳು ಮುಂತಾದ ಗುಹ್ಯಾದ್ಗುಹ್ಯತರವಾದ ವಿಚಾರಗಳನ್ನು ಬೋಧಿಸಿದನು.

ಭೀಷ್ಮ - ಎಂದರೆ ಕಠೋರವಾದ ರೂಪ, ಭಯಂಕರವಾದ ಆಕಾರ, ಸನ್ನಿವೇಶ, ಮುಂತಾದವು.

**876. ಭೀಕರಾಯ ನಮಃ**

ಭೀಕರ - ಹೆದರಿಸುವವನು, ಗಡಗಡ ನಡುಗಿಸುವವನು, ಅತ್ಯಂತ ಭಯಂಕರನು. ನರಸಿಂಹಸ್ವಾಮಿಯ ರೂಪ ಭೀಕರವಾದುದು. ಅವನ ಕೃತಿಗಳು ಭಯಂಕರವಾದವುಗಳು. ಹಿರಣ್ಯಕಶಿಪುವಿನ ಸಂಹಾರಕಾರ್ಯವು ಅತ್ಯಂತ ಭೀಕರವಾದುದು. ಲೋಕಭಯಂಕರವಾದುದು. ಸಾಮಾನ್ಯವಾಗಿ ನರಸಿಂಹಸ್ವಾಮಿ ಎಂದರೆ ಭಯ ಹುಟ್ಟುತ್ತದೆ ಆದರೆ ಅವನಷ್ಟು ಶಾಂತನು ಯಾರೂ ಇಲ್ಲ. ಲಕ್ಷ್ಮೀನರಸಿಂಹಮೂರ್ತಿಯು ಶಾಂತನು, ಭೋಗ ಸ್ವಭಾವದವನು ಮತ್ತು ಯೋಗಿಯು. ಆದರೂ ಭೀಕರ ಗುಣವೇ ಎದ್ದು ಕಾಣುತ್ತದೆ.

**877. ಭೀಮವಿಕ್ರಮಣಾಯ ನಮಃ**

ಭೀಮ - ಎಂದರೆ ನವರಸಗಳಲ್ಲಿ ಒಂದು ರಸ - ಭೀಮರಸ.

ಭೀಮ - ಎಂದರೆ ಶಿವ, ಭೀಮಸೇನ (ಪಾಂಡವರಲ್ಲಿ ಎರಡನೆಯವನು) - ಭಯಂಕರವಾದ್ದು, ಹೆದರಿಕೆಯುಂಟುಮಾಡುವ ಭಾವ.

ವಿಕ್ರಮಣ - ಭೀಮರಸವನ್ನು ವಿಶೇಷ ರೀತಿಯಲ್ಲಿ 'ಕ್ರಮಣ' ಮಾಡುವವನು - ವಿಶಾಲವಾಗಿ ಹರಡುವವನು.

ಭೀಮವಿಕ್ರಮಣಾಯ - ಭೀಮರಸವನ್ನು ವಿಚಿತ್ರವಾಗಿ ಪ್ರಸರಿಸುವವನು - ಪರಮಾತ್ಮ.

ಅಥವಾ

ವಿಕ್ರಮ - ಎಂದರೆ ಶಕ್ತಿಶಾಲಿ, ಭೀಮ - ಎಂದರೆ ಊಹಿಸಲಸಾಧ್ಯವಾದದ್ದು.

ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ಸೃಷ್ಟಿಮಾಡಿ, ಅವುಗಳನ್ನು ನಡೆಸುತ್ತಾ, ಲಯಮಾಡುತ್ತಲೂ ಮತ್ತು ಸಕಲವನ್ನೂ ತನ್ನ ಉದರದಲ್ಲಿ

ಇಟ್ಟುಕೊಳ್ಳುವುದರಿಂದಲೂ, ಇಂತಹ ಭೀಮ - ಶಕ್ತಿಶಾಲಿಯಾದ ಅಪಾರ ಪ್ರಮಾಣದ ಕಾರ್ಯವನ್ನು ತನ್ನ ಸಂಕಲ್ಪಮಾತ್ರದಿಂದ ಮಾಡುವ ಮಹಾವಿಷ್ಣುವು ನಿಜವಾಗಿಯೂ ಮತ್ತು ವಾಸ್ತವವಾಗಿಯೂ ಭೀಮವಿಕ್ರಮಣನು.

*ಮೃಗಗ್ರೀವಾಯ ಜೀವಾಯ ಜಿತಾಯ ಜಿತಕಾಶಿನೇ ।*
*ಜಟಿನೇ ಜಾಮದಗ್ನ್ಯಾಯ ನಮಸ್ತೇ ಜಾತವೇದಸೇ ।।148।।*

*(878-884)*

**878. ಮೃಗಗ್ರೀವಾಯ ನಮಃ**

ಗ್ರೀವ - ಎಂದರೆ ಕುತ್ತಿಗೆ, ಕಂಠ, ಮೃಗ - ಪ್ರಾಣಿ.

ಮೃಗಗ್ರೀವ - ಪ್ರಾಣಿಯ ಕುತ್ತಿಗೆಯಿರುವವನು - ಸಿಂಹದ ತಲೆ / ಕುತ್ತಿಗೆ ನರನ ದೇಹವಿರುವವನು - ನರಸಿಂಹಸ್ವಾಮಿ.

ಕುದುರೆ - ಹಯದ ಕುತ್ತಿಗೆ ಮನುಷ್ಯನ ದೇಹವಿರುವವನು - ಹಯಗ್ರೀವ ದೇವರು - ಅದರಿಂದ ಮೃಗಗ್ರೀವಾಯ ನಮಃ.

ಹಾಗೆಯೇ ತುಂಬುರರು - ಗಾನಕಾರರು (ದೇವಲೋಕದಲ್ಲಿ)

ಅಥವಾ

ಕತ್ತು, ತಲೆ ಯಾವುದೇ ಇರಲೀ, ಮೃಗದ ಸ್ವಭಾವವುಳ್ಳವರು ಮೃಗಗ್ರೀವರು. ಮನುಷ್ಯರಾದರೂ ಪ್ರಾಣಿಯ ಲಕ್ಷಣ, ಸ್ವಭಾವ, ರೂಪವಿರುವವರು ಮೃಗಗ್ರೀವರು. ಮೃಗದ ಸ್ವಭಾವ, ಲಕ್ಷಣ, ಮನುಷ್ಯನ ಸ್ವಭಾವ, ಬುದ್ಧಿ ಶಕ್ತಿಗಿಂತ ಕಡಿಮೆ.

**879. ಜೀವಾಯ ನಮಃ**

ಆತ್ಮವು ಶರೀರದೊಳಗೆ ಸೇರಿದಾಗ, ಅದರಲ್ಲಿ ವಾಸಿಸುವಾಗ, ಅದರಲ್ಲಿರುವಷ್ಟು ಕಾಲ ಜೀವ ಎಂದು ಹೇಳಲ್ಪಡುತ್ತದೆ. ದೇಹಧಾರಿಗೆ ''ಜೀವಿ'' ಎಂದು ಅದರ ಕಾಯಾಪನೆಯು '' ಜೀವನ'' ಎಂದಾಗುತ್ತದೆ. ಸಂಸಾರ ಸಾಗರದಲ್ಲಿ ತೇಲುವಷ್ಟು ಮುಳುಗುವಷ್ಟು ಕಾಲ ಅಂದರೆ ಬಿಡುಗಡೆ ಹೊಂದುವವರೆಗೆ ಆತ್ಮವು ಆತ್ಮನೆಂದೂ (ದೇಹದಲ್ಲಿರದಾಗ ಆತ್ಮ), ಜೀವಿಯೆಂದೂ (ದೇಹದಲ್ಲಿರುಷ್ಟು ಕಾಲ) ಕರೆಯಲ್ಪಡುತ್ತದೆ. ಅಥವಾ,

ಜೀವ ಎಂದರೆ ಪ್ರಾಣಗಳು - ಪಂಚಪ್ರಾಣಗಳಿಗೆ ಜೀವ ಎಂದೂ ಹೇಳುತ್ತೇವೆ. ಪಂಚಪ್ರಾಣಗಳು - ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳು. ವಾಯುವಿನ ಸೂಕ್ಷ್ಮರೂಪ - ಪರಮಾತ್ಮನೇ ವಾಯು. ಪರಮಾತ್ಮನೇ ಆತ್ಮನು, ಜೀವನು. ಅದರಿಂದ ಅವನನ್ನು ಜೀವಾಯ ನಮಃ ಎಂದು ನಮಸ್ಕರಿಸುತ್ತೇವೆ.

880. ಜಿತಾಯ ನಮಃ

ಜಿತಾಯ - ಸಕಲವನ್ನೂ ಗೆದ್ದವನು - ಸೋಲಿಲ್ಲದವನು, ಅಥವಾ ಯಾರಿಂದಲೂ ಸೋಲಿಸಲ್ಪಡದಿರುವವನು - ಪರಮಾತ್ಮ - ಜಿತಾಯ ನಮಃ ಎಂದು ಅವನೇ!

ಜಿತಾಯ - ಆತ್ಮನಿಗೂ ಹೀಗೆ ಹೇಳಬಹುದು. ಆದರೆ ಆತ್ಮನು ಸ್ವತಂತ್ರನಲ್ಲ, ಅದರಿಂದ ಒಂದು ರೀತಿ ಇದು ಅನ್ವಯಿಸುವುದಿಲ್ಲ.

881. ಜಿತಕಾಶಿನೇ ನಮಃ

ಕಾಶ್ - ಎಂದರೆ ಪ್ರಕಾಶಿಸು, ಹೊಳೆಯುವುದು, ವಿಜೃಂಭಿಸುವುದು.

ಜಿತಕಾಶಿನೇ - ಸಕಲರನ್ನು ಸೋಲಿಸಿ, ಏಕೈಕ ವೀರ, ಧೀರನೆಂದು ವಿಜೃಂಭಿಸುವವನು - ಪರಮಾತ್ಮ. ಪ್ರಸ್ತುತ ಹಿರಣ್ಯಕಶಿಪುವನ್ನು ಸಂಹರಿಸಿ ವಿಜೃಂಭಿಸುವವನು - ಜಿತಕಾಶಿನೇ ನಮಃ.

ಆತ್ಮವು ಸಂಸಾರಸಾಗರದಿಂದ ಬಿಡುಗಡೆ ಹೊಂದಿದಾಗ ಜಿತಕಾಶಿನ್ ಆಗುತ್ತದೆ. ಸಂಸಾರದಲ್ಲಿರುವಾಗ ಸಂಸಾರಸಾಗರದ ಕಡೆಗೆ ಎಳೆಯುವ ಮಾಯೆಯಿಂದ ಬಿಡುಗಡೆ ಹೊಂದಿದಾಗಲೂ ಜಿತಕಾಶಿನ್ ಆಗಿದೆ ಎಂದು ಹೇಳಬಹುದು.

882. ಜಟಿನೇ ನಮಃ

ಜಟೆಯನ್ನು ಹೊಂದಿರುವವನು - ಋಷಿ, ಶಿವ, ನರನಾರಾಯಣ, ತಪಸ್ವಿಗಳು, ಜಟೆಯನ್ನು ಬಿಟ್ಟಿರುತ್ತಾರೆ.

ಜಟಿನೇ ನಮಃ - ತಪಸ್ವಿ - ಜಡೆಗಟ್ಟಿದ ಕೂದಲಿಗೆ ಜಟಾ ಎಂದು ಹೆಸರು. ಜಟೆಗಳನ್ನು ಉಳ್ಳವನು - ಜಟಿ. ಅಥವಾ ಜಟೆಯು ತಪಸ್ವಿಯ ಲಕ್ಷಣ.

883. ಜಾಮದಗ್ನ್ಯಾಯ ನಮಃ

ಜಾಮದಗ್ನ್ಯ - ಎಂದರೆ ಜಮದಗ್ನಿಯ ಮಗ ಪರಶುರಾಮನು. ಶ್ರೀ ಮಹಾವಿಷ್ಣುವಿನ ಆರನೆಯ ಅವತಾರ. ಮೊದಲಿನವುಗಳು - ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ನಂತರದ್ದು ಪರಶುರಾಮಾವತಾರ. ತಂದೆಯ ಆಜ್ಞೆಯಂತೆ ತಾಯಿಯ ಶಿರಚ್ಛೇದನ ಮಾಡಿದನು. ತನ್ನ ಸಹೋದರರನ್ನು ಕೊಂದನು. ಅದರಿಂದ ಪ್ರೀತನಾದ ತಂದೆಯು ವರವನ್ನು ಕೇಳೆಂದು ಹೇಳಿದಾಗ ತಾಯಿ ಮತ್ತು ಅಣ್ಣಂದಿರನ್ನು ಬದುಕಿಸಿ ಎಂದು ಬೇಡಿದನು. ಜಮದಗ್ನಿಯು ತಥಾಸ್ತು ಎಂದು ಹೇಳಿ ಎಲ್ಲರನ್ನು ಬದುಕಿಸಿದನು.

ಕಾರ್ತ್ಯವೀರ್ಯನ ಮಕ್ಕಳು ಜಮದಗ್ನಿಯನ್ನು ಕೊಂದರು. ಈ ಸೇಡಿಗಾಗಿ

21 ಸಲ ಭೂ ಪ್ರದಕ್ಷಿಣೆಯನ್ನು ಮಾಡಿ ರಾಜರನ್ನು ಸಂಹಾರ ಮಾಡಿದನು. ಪರಶು ಎಂದರೆ ಕೊಡಲಿ. ಕೊಡಲಿಯೇ ಇವನ ಆಯುಧ. ಅದರಿಂದ ಪರಶುರಾಮ ಎಂದು ಹೆಸರು - ಜಾಮದಗ್ನ್ಯಾಯ ನಮಃ ಎಂದರೆ ಈತನೇ!

ನಂತರ ದಶರಥರಾಮನಿಂದ ಇವನ ವೈಷ್ಣವ ಶಕ್ತಿಯು ಅಪಹೃತವಾಯಿತು.

ಕರ್ಣನಿಗೆ ಪರಶುರಾಮರೇ ಗುರು. ಆದರೆ ಗುರುದ್ರೋಹಿಯಾದ ಕರ್ಣನಿಗೆ ಶಾಪವನ್ನು ಕೊಟ್ಟರು. ಸಕಾಲದಲ್ಲಿ ಕಲಿತಿದ್ದೆಲ್ಲ ಮರೆತು ಹೋಗಲಿ ಎಂದು ಶಾಪವನ್ನು ಕೊಟ್ಟರು.

ಪರಶುರಾಮರು ಚಿರಂಜೀವಿಯೆಂದೂ ಮಹೇಂದ್ರಪರ್ವತದಲ್ಲಿ ತಪಸ್ಸು ಮಾಡುತ್ತಿರುವರೆಂದೂ ನಂಬಿಕೆಯಿದೆ. ಈ ಅವತಾರದಲ್ಲಿ ಉಪಸಂಹಾರವಿಲ್ಲ.

**884. ಜಾತವೇದಸೇ ನಮಃ**

ಜಾತವೇದಸ್ - ಎಂದರೆ ಅಗ್ನಿ, ಒಬ್ಬ ಋಷಿಯ ಹೆಸರು.

ಅಗ್ನಿಗೆ ಜಾತವೇದಸೇ ಎಂದು ಹೆಸರು. ಪರಮಾತ್ಮನು ಅಗ್ನಿರೂಪನು. ಪಂಚಮಹಾಭೂತಗಳಲ್ಲಿ ಅಗ್ನಿಯು ಒಂದು - ಪೃಥಿವೀ, ಆಪಃ, ತೇಜಸ್ಸು, ವಾಯು, ಆಕಾಶಗಳು ಐದು ಮಹಾಭೂತಗಳು.

ತೇಜೋಮಯನಾದ ಅಗ್ನಿಯೇ ಯಜ್ಞಕುಂಡದಿಂದ ಹವಿಸ್ಸನ್ನು ತೆಗೆದುಕೊಂಡು ಹೋಗಿ ದೇವತೆಗಳಿಗೆ ತಲಪಿಸುತ್ತಾನೆ. ಹವ್ಯವಾಹನ ಎಂದು ಕರೆಯುತ್ತೇವೆ.

ಜಾತವೇದಸೇ ನಮಃ ಎಂದರೆ ಅಗ್ನಿಯೇ ನಮಃ ಎಂದು ಅರ್ಥ.

*ಜಪಾಕುಸುಮವರ್ಣಾಯ ಜಪ್ಯಾಯಾಪಿ ಚ ಜಾಪಿನೇ ।*
*ಜರಾಯುಜಾಯಾಂಡಜಾಯ ಸ್ವೇದಜಾಯೋದ್ಭಿದೇ ನಮಃ ।।149।।*
*(885-891)*

**885. ಜಪಾಕುಸುಮವರ್ಣಾಯ ನಮಃ**

ಜಪಾ - ಜಪವನ್ನು ಮಾಡುವುದು - ಕುಸುಮ - ಎಂದರೆ ಹೂವುಗಳು, ಪುಷ್ಪಗಳು, ಹಣ್ಣು, ಫಲ.

ಜಪಾ - ದಾಳವಾಳದ ಹೂ. ಅದರ ಕುಸುಮ ಎಂದರೆ ಭಾಗ. ಅದರ ಬಣ್ಣ ಕೆಂಪು ಅಥವಾ ಬಿಳಿ. ಬಿಳಿ ಹಳದಿ - ಯ ಬಟ್ಟೆ ಧರಿಸಿರುವವನು - ಮಹಾವಿಷ್ಣು / ಯಾವ ದೇವರ ರೂಪವೇ ಆದರೂ ಸರಿ - ಅವನಿಗೆ ನಮಸ್ಕಾರಗಳು.

ವರ್ಣ - ಎಂದರೆ ವಿಭಾಗಗಳು, ಬಣ್ಣ, ವೈಭವ, ಅಕ್ಷರಗಳು, ಕುಲ, ವಂಶ, ಜಾತಿ, ಗುಣಗಳು, ಮುಂತಾದವುಗಳು.

ಯಜ್ಞಗಳಲ್ಲೆಲ್ಲ ಜಪಯಜ್ಞವೇ ಶ್ರೇಷ್ಠವಾದುದು, ಅದರಲ್ಲಿಯೇ ಪರಮಾತ್ಮನು ವಿಶೇಷವಾಗಿರುತ್ತಾನೆ.

"ಯಜ್ಞಾನಾಂ ಜಪಯಜ್ಞೋಽಸ್ಮಿ" ಎಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ. ಎಂದರೆ "ಜಪಯಜ್ಞವೇ ನಾನು" ಎಂದಿದ್ದಾನೆ. (ಶ್ಲೋಕ 25, ಅಧ್ಯಾಯ 10)

ಜಪದ ಮಂತ್ರವನ್ನು ಒಂದೇ ಸಮನೇ ಪುನರುಚ್ಚಾರಣೆ ಮಾಡುವುದೇ ಜಪ. ಗಟ್ಟಿಯಾಗಿ ಹೇಳುವ ಜಪ, ಸಾಮೂಹಿಕವಾಗಿ ಹೇಳುವ ಜಪ, ಉಪಾಂಶು - ತಮಗೆ ಮಾತ್ರ ಕೇಳಿಸುವಂತೆ ತುಟಿಗಳಿಂದ ಮಾತ್ರ ಹೇಳುವ ಮಂತ್ರ, ಮಾನಸಿಕವಾಗಿ ಹೇಳುವ ಮಂತ್ರ ಎಂದು ಮೂರು ವಿಧದ ಜಪ. ಇದರಲ್ಲಿ ಮಾನಸಿಕವಾಗಿ ಹೇಳುವ ಜಪವೇ ಅತ್ಯಂತ ಶ್ರೇಷ್ಠ.

ಜಪದ ಮಂತ್ರವನ್ನು ಗುರುವಿನಿಂದ ಉಪದೇಶ ಪಡೆದು ಮಾಡಬೇಕು. ಕೋಟಿಗಟ್ಟಲೆ ಸಂಖ್ಯೆಯಲ್ಲಿ ವರ್ಷಗಳಲ್ಲಿ ಹೇಳಿ ಸಾಧಿಸಬೇಕು. ಸಂಖ್ಯೆ ಹೆಚ್ಚಿದಷ್ಟೂ ಸ್ಫೂರ್ತಿ ಹುಟ್ಟುತ್ತದೆ ಮತ್ತು ಸಾಧಕನು ಅಂತರ್ಮುಖನಾಗುತ್ತಾನೆ. ಪ್ರತಿಯೊಂದು ಸಲ ಉಚ್ಚರಿಸಿದರೂ ಅದು ಒಂದು ಪುಷ್ಪದಂತೆ ಮತ್ತು ಪುಷ್ಪಗಳನ್ನು ಪರಮಾತ್ಮನಿಗೆ ನಿವೇದಿಸಿದೆವೆಂದು ತಿಳಿಯಬೇಕು. ಹಾಗಾದರೆ ಜಪವು ಸಿದ್ಧಿಯ ದಾರಿಯಲ್ಲಿರುತ್ತದೆ.

ಜಪದ ಪ್ರತಿವರ್ಣವನ್ನು - ಪ್ರತಿಯೊಂದು ಅಕ್ಷರವನ್ನು ಸ್ವಚ್ಛವಾಗಿ ಮಾನಸಿಕವಾಗಿ ಜಪಿಸಬೇಕು. ಲೋಪ ದೋಷಗಳು ಆಗುವುದು ಸಹಜ, ಸಾಮಾನ್ಯ. ತೆಗೆದುಕೊಳ್ಳುವ ಸಮಯವೂ ಸಹ ಹೆಚ್ಚು. ಅಭ್ಯಾಸದಿಂದ ವೇಗವಾಗಿ ಜಪಿಸಲು ಸಾಧ್ಯ. ಪರಮಾತ್ಮನೇ ಎದುರಿಗಿದ್ದಾನೆಂದೂ ಅವನಿಗೆ ಪ್ರತಿಸಲದ ನಾಮವೂ ಒಂದು ಪುಷ್ಪವೆಂದೂ, ಅವನ ಪಾದದಲ್ಲಿ ಅರ್ಪಿಸುತ್ತಿದ್ದೇನೆಂದು ಮಾನಸಿಕವಾಗಿ ತಿಳಿದು ಜಪಿಸಿದರೆ ಶ್ರೇಷ್ಠತೆ ಹೆಚ್ಚು.

ನಾಮ ಜಪವೇ ಶ್ರೇಷ್ಠ. ಸದಾಕಾಲ ನಿರಂತರ ಹೇಳಿದರೆ ಉತ್ತಮ ಸಮಾಧಾನವನ್ನು ಕೊಡುತ್ತದೆ. - ಜಪಾಕುಸುಮವರ್ಣಾಯ ನಮಃವು ಉತ್ತಮ ನಾಮವು. ಪರಮಾತ್ಮನಿಗೆ ಅನ್ವಯಿಸುತ್ತದೆ.

**886. ಜಪ್ಯಾಯ ನಮಃ**

ಜಪ್ಯಾಯ - ನಾಮದಿಂದ ಜಪಿಸಲ್ಪಡುವವನು, ಪರಮಾತ್ಮ. ಪರಮಾತ್ಮನು ಜಪಕ್ಕೆ ಪ್ರಧಾನನು - ಪರಮಾತ್ಮನನ್ನು ಕುರಿತು ಜಪಿಸಿದರೆ ಅವನು ಜಪ್ಯನು.

**887. ಜಾಪಿನೇ ನಮಃ**

ಜಾಪಿನೇ - ಯಾರು ಜಪ ಮಾಡುತ್ತಾರೋ ಅವರು "ಜಾಪಿ".

ಜಪಮಾಡುವವನಲ್ಲಿ ಅಂತರಾತ್ಮದಲ್ಲಿ ಪರಮಾತ್ಮನೇ ನಿರಂತರ ಕುಳಿತು ಜಪಮಾಡುವುದರಿಂದ ''ಜಾಪಿ''. ಜಪಮಂತ್ರವೂ ಅವನೇ. ಜಪ ಮಾಡುವವನೂ ಅವನೇ. ಜಪಮಾಡಿಸಿಕೊಳ್ಳುವವನೂ ಅವನೇ.

ಸಕಲವೂ ಅವನೇ!! ಆತ್ಮವೂ ಅವನೇ! ಉದ್ಧಾರಕರ್ತ್ಮ ಸ್ವಾಮಿಯೂ ಅವನೇ. ಮುಸುಕು ಹಾಕಿರುವ ಮಾಯೆಯೂ ಅವನೇ! ಮುಸುಕಿನೊಳಗಿರುವ ಆತ್ಮವೂ ಅವನೇ! ಮುಸುಕನ್ನು ತೆಗೆಯುವವನೂ ಅವನೇ! ಕಾರ್ಯ, ಕಾರಣ, ಕರ್ತೃವೂ ಅವನೇ! ಎಲ್ಲಾ ಪರಮಾತ್ಮಮಯ!! - ಜಾಪಿನೇ ನಮಃ.

**888. ಜರಾಯುಜಾಯ ನಮಃ**

ಜರಾಯು - ಎಂದರೆ ಗರ್ಭಾಶಯ, ಅದರಲ್ಲಿ ಜ - ಎಂದರೆ ಹುಟ್ಟುವವನು.

ಆತ್ಮನು ಪಿತೃವಿನ ಶರೀರದಲ್ಲಿ ವೀರ್ಯದಲ್ಲಿ ಸೂಕ್ಷ್ಮರೂಪದಲ್ಲಿ ಪ್ರವೇಶಮಾಡುತ್ತದೆ. ಆತ್ಮವು ತನ್ನ ಸಂಸ್ಕಾರದೊಡನೆ ಈ ರೀತಿ ವೀರ್ಯದಲ್ಲಿ ಪ್ರವೇಶಮಾಡುತ್ತದೆ. ನಂತರ ವೀರ್ಯದ ಮೂಲಕ ತಾನು ತಾಯಿಯ ಯೋನಿಯ ಮೂಲಕ ಸಂಭೋಗವಾದಾಗ ಗರ್ಭವನ್ನು ಪ್ರವೇಶಮಾಡುತ್ತದೆ. ಅದರಲ್ಲಿ ವೀರ್ಯವು ಸ್ತ್ರೀಯ ಶಕ್ತಿಯನ್ನು ಸೇರಿ ಪಿಂಡರೂಪದಲ್ಲಿ ಆಗುತ್ತದೆ. ನಂತರ ಕ್ರಮೇಣ ಭ್ರೂಣವು ಬೆಳೆದು ಶರೀರದ ಅವಯವಗಳನ್ನು ಹೊಂದಿ, ಬೆಳೆದು ಪೂರ್ಣಗರ್ಭವಾಗಿ ನಂತರ ಸ್ತ್ರೀ ಯೋನಿಯ ಮೂಲಕ, ಪರಮಾತ್ಮನ ಸಂಕಲ್ಪದಂತೆ ತನ್ನ ಸಂಸ್ಕಾರದೊಡನೆ ಭೂಸ್ಪರ್ಶವಾಗುತ್ತದೆ. ಈ ಸಮಯ, ಘಳಿಗೆಯೇ ಜನ್ಮತಾಳಿದ ಕ್ಷಣವೆಂದು ಗಣಿಸಿ ವಯಸ್ಸನ್ನು ಲೆಕ್ಕಮಾಡುತ್ತೇವೆ.

ವಾಸ್ತವವಾಗಿ ಪಿತೃವೀರ್ಯದಲ್ಲಿ ಸೇರಿದ ಕ್ಷಣದಿಂದ ದೇಹೋತ್ಪತ್ತಿಯಾಗುವುದರಿಂದ ಆ ಕ್ಷಣವೇ ಗಣನೆಗೆ ಯೋಗ್ಯವಾದುದು. ಇದನ್ನು ನಿರ್ಧರಿಸಲು ಸಾಧ್ಯವಿಲ್ಲದ್ದರಿಂದ ಮತ್ತು ಈ ವಿಚಾರ ಸಂಪೂರ್ಣ ಆಧ್ಯಾತ್ಮಿಕವಾದ್ದರಿಂದ ಯಾರೂ ಯೋಚಿಸಲು ಹೋಗುವುದಿಲ್ಲ.

ಈ ರೀತಿ ಆತ್ಮವು ದೇಹಧಾರಣೆ ಮಾಡುವುದಕ್ಕೆ, ಜರಾಯುಜ ಎಂದು ನಾಮವಿದೆ. ಇದು ಆತ್ಮನಿಗೆ ಅನ್ವಯಿಸುತ್ತದೆ - ಆತ್ಮನು ಪರಮಾತ್ಮನ ಅಂಶವಾಗಿ ದೇಹದಿಂದ ದೇಹಕ್ಕೆ ನಡೆಯುತ್ತಿರುವುದರಿಂದ ಜರಾಯುಜ - ಎಂದರೆ ಪರಮಾತ್ಮನೇ ಎಂದು ಹೇಳಬಹುದು!

ಜರಾಯು - ಜ ಎಂದರೆ ಹುಟ್ಟುವುದು ಎನ್ನುವುದಕ್ಕಿಂತ ದೇಹಧಾರಣೆ ಮಾಡುವುದು ಎಂದು ಹೇಳುವುದು ಸಮಂಜಸ.

**889. ಅಂಡಜಾಯ ನಮಃ**

ಅಂಡ ಎಂದರೆ ಮೊಟ್ಟೆಗಳು, ಜ - ಎಂದರೆ ಹುಟ್ಟುವುದು, ದೇಹ

ಧರಿಸುವುದು.

ಅಂಡಜ - ಮೊಟ್ಟೆಗಳಿಂದ ಉತ್ಪನ್ನವಾದ ದೇಹದಲ್ಲಿರುವ ಆತ್ಮನು - ಅಂಡಜನು.

ಅಂಡಜ - ಎಂದರೆ ಪಕ್ಷಿಗಳು, ಮೀನು, ಹಾವು, ಹರಿದಾಡುವ ಪ್ರಾಣಿಗಳು, ಬ್ರಹ್ಮ.

ಅಂಡಜ - ಎಂದರೆ ಬ್ರಹ್ಮನು. ಬ್ರಹ್ಮಾಂಡ - ಎಂದರೆ ಬೃಹತ್ ಅಂಡ - ಪರಬ್ರಹ್ಮನ ರೂಪ.

ಅಂಡ - ಎಂದರೆ ತತ್ತಿಗಳು, ಕಸ್ತೂರಿಯುಳ್ಳ ಹೊಕ್ಕಳು, ವೀರ್ಯ, ಶಿವನ ಹೆಸರು, ನಾಭಿ.

ಅಂಡ - ನಾಭಿಯಿಂದ, ಜ - ಹುಟ್ಟಿದವನು - ಬ್ರಹ್ಮ. ಅಂಡಜಾಯ ನಮಃ.

890. ಸ್ವೇದಜಾಯ ನಮಃ

ಸ್ವೇದ - ಎಂದರೆ ಬೆವರು, ಉಷ್ಣತೆ, ಬೆವರಿನಿಂದ, ಜ - ಹುಟ್ಟಿದವುಗಳು.

ಸ್ವೇದಜ - ಕ್ರಿಮಿಕೀಟಗಳು - ಇವುಗಳಲ್ಲಿಯೂ ಅದೇ ಪರಮಾತ್ಮನ ಅಂಶದ ತೇಜಸ್ಸೇ ಇರುವುದರಿಂದ ಅವನಿಗೆ ಅಂತಹ ಆತ್ಮನಿಗೆ ನಮಸ್ಕಾರಗಳು. ಪರಮಾತ್ಮನು ಇಲ್ಲದ ಸ್ಥಳವಿಲ್ಲ - ಪರಮಾತ್ಮನಿಗಿಂತ ಭಿನ್ನವಾದ ಆತ್ಮಗಳಾದರೂ, ಅವುಗಳಿಗೆ ಅಂಟಿಕೊಂಡಿರುವ ಸಂಸ್ಕಾರಗಳೇ ವಿಚಿತ್ರ, ವಿಭಿನ್ನ. ಅನೇಕ ದೇಹಗಳ ಧಾರಣೆಗೆ ಕಾರಣ ಅದರಲ್ಲಿರುವ ಆತ್ಮವು ಯಾವ ರೀತಿಯೂ ಕಡಿಮೆಯ ಶ್ರೇಣಿಯದಲ್ಲ - ಆದ್ದರಿಂದ ಸ್ವೇದಜಾಯ ನಮಃ ಎಂಬುದು ಸಮಂಜಸ.

891. ಉದ್ಭಿದೇ ನಮಃ

ಉದ್ಭಿದೇ - ಭೂಮಿಯನ್ನು ಭೇದಿಸಿಕೊಂಡು ಬರುವ ಗಿಡ, ಮರ, ವನಸ್ಪತಿ, ಮೊಳಕೆಯಿಂದ ಬರುವ ಸಸಿ, ಮುಂತಾದವು.

ಸಕಲ ಚರಾಚರ ವಸ್ತುಗಳಲ್ಲಿಯೂ ಪರಮಾತ್ಮನು ಹರಡಿಕೊಂಡಿರುವುದರಿಂದ ಇವುಗಳಲ್ಲಿಯೂ ಪರಮಾತ್ಮನಿದ್ದಾನೆ. ಉದ್ಭಿದೇ ನಮಃ - ಎಂದರೆ ಪರಮಾತ್ಮನಿಗೇ ಸಲ್ಲುತ್ತದೆ.

*ಜನನಾಥಾಯ ರಾಮಾಯ ಜಾಹ್ನವೀಜನಕಾಯ ಚ ।*
*ಜರಾಜನ್ಮವಿದೂರಾಯ ಪ್ರದ್ಯುಮ್ನಾಯ ಪ್ರಬೋಧಿನೇ ॥150॥*

*(892-897)*

892. ಜನನಾಥಾಯ ನಮಃ

ಜನ - ಪ್ರಜೆಗಳ, ನಾಥ - ರಾಜನು, ಪಾಲಿಸುವವನು, ಜನನಾಥ - ರಾಜನು.

ಇಲ್ಲಿ ಸ್ವಾಮಿಯನ್ನು ಸಾಮಾನ್ಯ ರಾಜರುಗಳ ರಾಜನೆಂದು ಮಾತ್ರ ತಿಳಿಯಲಾಗುವುದಿಲ್ಲ. ಜೀವಕೋಟಿಗೂ, ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೆ ನಾಯಕನಾಗಿ ಕಾಪಾಡುತ್ತಾನೆ. ಇವನಷ್ಟು ಕರುಣಾಜನಕನೂ, ದಯಾಶೀಲನೂ, ಗುಣವಂತನೂ ಬೇರೆ ಯಾರೂ ಇಲ್ಲ. ಸಕಲ ಚರಾಚರ ವಸ್ತುಗಳಿಗೂ ಇವನೇ ರಾಜನು. ಪರಮಾತ್ಮನು ಎಷ್ಟು ಕರುಣಾಳುವೆಂದರೆ ನಿತ್ಯಪ್ರಳಯ, ನೈಮಿತ್ತಿಕ ಪ್ರಳಯ, ಬ್ರಹ್ಮ ಪ್ರಳಯದ ಕಾಲದಲ್ಲಿ ಸಕಲ ಜೀವ ಕೋಟಿಯನ್ನು ಮತ್ತು ಚರಾಚರ ವಸ್ತುಗಳನ್ನು ತನ್ನ ಉದರದಲ್ಲಿಯೇ ಅಡಗಿಸಿಕೊಂಡು ಕಾಪಾಡುತ್ತಾನೆ. ನಂತರ ಸೃಷ್ಟಿ - ಕಲ್ಪಾದಿಯಲ್ಲಿ ಸಂಸಾರ ಸಾಗರದಲ್ಲಿ ಬಿಡುತ್ತಾನೆ. ಆತ್ಮಗಳು ಅದರಲ್ಲಿ ಸ್ವೇಚ್ಛೆಯಿಂದ ಸಂಸ್ಕಾರಗಳನ್ನು ಗ್ರಹಿಸುತ್ತ ಕಾಲಯಾನ ಮಾಡುತ್ತಾರೆ. ಇವನೇ ನಿಜವಾದ ಜನನಾಥನು - ಜನನಾಥಯ ನಮಃ - ಎಂದರೆ ಇವನಿಗೇ ಸರಿಯಾಗಿ ಸಲ್ಲುತ್ತದೆ.

893. ರಾಮಾಯ ನಮಃ

ರಾಮಾಯ ನಮಃ - ಎಂದರೆ ಜಮದಗ್ನಿಯ ಮಗ - ಪರಶುರಾಮ, ದಶರಥನ ಮಗ - ಶ್ರೀರಾಮ, ಬಲರಾಮ, ಶಿವ.

ರಾಮ - ಆನಂದದಾಯಕನು, ಸುಂದರನು, ರಮ್ಯನಾದವನು. ಪರಮಾತ್ಮನಷ್ಟು ಆನಂದದಾಯನು ಯಾರೂ ಇಲ್ಲ. ಅವನ ಆನಂದವೇ ಸಚ್ಚಿದಾನಂದ ಸ್ವರೂಪನು - ಪರಮಾನಂದ, ಬ್ರಹ್ಮಾನಂದ.

ರಾಮ - ರಮೆಯಲ್ಲಿ ರಮಿಸುವವನು - ಶ್ರೀರಾಮ - ರಾಮ.

894. ಜಾಹ್ನವೀಜನಕಾಯ ನಮಃ

ಜಾಹ್ನವೀ - ಗಂಗೆಯು, ಜುಹ್ನು ಋಷಿಯ ಮಗಳು - ಜಾಹ್ನವೀ.

ಆಕಾಶದಿಂದ ರಭಸದಿಂದ ಬಂದ ಗಂಗೆಯನ್ನು ಶಿವನು ಜಟೆಯಲ್ಲಿ ಸ್ವೀಕರಿಸಿದನು. ಭಗೀರಥನ ಪ್ರಾರ್ಥನೆಯಂತೆ ಜಟೆಯೊಂದರಿಂದ ಶಿವನು ಗಂಗೆಯನ್ನು ಬಿಟ್ಟನು. ಶಿವನ ಜಟೆಯಿಂದ ಗಂಗಾವತರಣವಾಯಿತು. ಈ ಗಂಗೆಯು ಭಗೀರಥನನ್ನು ಹಿಂಬಾಲಿಸಿ ಬರುವಾಗ ಜುಹ್ನು ಋಷಿಯ ಆಶ್ರಮದಲ್ಲಿ ಪ್ರವಾಹವಾಯಿತು. ಋಷಿಯು ಗಂಗೆಯನ್ನು ಆಪೋಶನ ತೆಗೆದುಕೊಂಡನು. ಮತ್ತೆ ಭಗೀರಥನ ಪ್ರಾರ್ಥನೆಯಂತೆ ಜುಹ್ನು ಋಷಿಯು ಗಂಗೆಯನ್ನು ತನ್ನ ಕಿವಿಯಿಂದ ಕರೆದು ಹೊರಬಿಟ್ಟನು. ಈ ಕಾರಣದಿಂದ

ಗಂಗೆಯು ಜಾಹ್ನವೀ ಎಂದಾದಳು. ಮತ್ತು ಆ ಋಷಿಯು ಜಾಹ್ನವೀ ಜನಕನಾದನು - ಋಷಿಯು ತಪಸ್ಸಿದ್ಧಿಯನ್ನು ಪಡೆದು ಅದ್ಭುತಕಾರ್ಯವನ್ನು ನಿರ್ವಹಿಸಿದ್ದರಿಂದ ಪರಮಾತ್ಮನ ಅಪರಾವತಾರನಾದನು - ಜಾಹ್ನವೀ ಜನಕಾಯ ನಮಃ ಎಂದಾಯಿತು.

895. ಜರಾಜನ್ಮವಿದೂರಾಯ ನಮಃ

ಜರಾ - ಮುಪ್ಪು, ಜನ್ಮ - ಪುನರ್ಜನ್ಮ.

ವಿ - ದೂರಾಯ - ವಿಶೇಷ ದೂರ ಮಾಡುವವನು.

ಮುಪ್ಪು ಮತ್ತು ಮುಂದಿನ ಜನ್ಮವು ಬರದ ಹಾಗೆ ಮಾಡುವವನು - ಪರಮಾತ್ಮನೇ! ಎಂದರೆ ಈ ಜನ್ಮದಲ್ಲಿಯೇ ಕರುಣಿಸಿ ಮುಕ್ತಿಯನ್ನು ಪರಮಾತ್ಮನು ಕೊಡುತ್ತಾನೆ. ಪರಮಾತ್ಮನು ತನ್ನ ಭಕ್ತರನ್ನು ಕೈ ಬಿಡುವುದಿಲ್ಲ. ''ನ ಮೇ ಭಕ್ತಃ ಪ್ರಣಶ್ಯತಿ'', ''ಸಂಶಯಾತ್ಮಾ ವಿನಶ್ಯತಿ'' ಎಂದು ಗೀತೆಯಲ್ಲಿ ಪರಮಾತ್ಮನು ಭರವಸೆಯನ್ನು ಕೊಟ್ಟಿರುತ್ತಾನೆ. ಅವನು ಜರಾಜನ್ಮವಿದೂರಾಯ ನಮಃನಾಗಿದ್ದಾನೆ. (ಶ್ಲೋಕ 31, ಅಧ್ಯಾಯ 9; ಶ್ಲೋಕ 40, ಅಧ್ಯಾಯ 4)

896. ಪ್ರದ್ಯುಮ್ನಾಯ ನಮಃ

ಪ್ರದ್ಯುಮ್ನ - ಶ್ರೀಕೃಷ್ಣನ ಮಗ, ರುಕ್ಮಿಣಿಯ ಮಗ, ಹುಟ್ಟಿದ ಆರನೆಯ ದಿನವೇ ಶಂಬರ ಎಂಬ ರಾಕ್ಷಸನನ್ನು ಓಡಿಸಿಕೊಂಡು ಹೋಗಿದ್ದನು. ಮುಂದೆ ಅವನು ಪಾರಾಗಿ ತನ್ನ ತಂದೆ ತಾಯಿಗಳ ಕಡೆಗೆ ಬಂದನು. ಆದರಿಂದ ಶಂಬರಾರಿ ಎಂದು ಹೆಸರು (ಶಂಬರಾರಿರ್ಮನಸಿಜಃ).

ಪ್ರದ್ಯುಮ್ನ - ಎಂದರೆ ಮನ್ಮಥನ ಅನ್ವರ್ಥನಾಮ, (ಪ್ರದ್ಯುಮ್ನೋ ಮೀನಕೇತನಃ).

897. ಪ್ರಭೋಧಿನೇ ನಮಃ

ಸಕಲವನ್ನೂ ಪ್ರಕಾಶ ಸಮೇತ ಬೋಧಿಸುವವನು - ಉತ್ತಮವಾದ ಗುರು.

ಪರಮಾತ್ಮನೇ ಉತ್ತಮ ಗುರು. ಸಕಲ ವಿದ್ಯೆಯನ್ನು ಸೃಷ್ಟಿಶಕ್ತಿಯನ್ನು, ಸೃಷ್ಟಿ, ಸ್ಥಿತಿ, ಲಯ ವಿದ್ಯೆ ಶಕ್ತಿಯನ್ನು ಬ್ರಹ್ಮ ವಿಷ್ಣು ಮಹೇಶ್ವರರಿಗೆ ಬೋಧಿಸಿದವನು - ಪರಬ್ರಹ್ಮ - ಪರಾಶಕ್ತಿ - ಪ್ರಬೋಧಿನೇ ನಮಃ.

*ಜಿಹ್ವಾರೌದ್ರಾಯ ರುದ್ರಾಯ ವೀರಭದ್ರಾಯ ತೇ ನಮಃ ।*
*ಚಿದ್ರೂಪಾಯ ಸಮುದ್ರಾಯ ಕದ್ರುದ್ರಾಯ ಪ್ರಚೇತಸೇ ।।151।।*
*(898-904)*

## 898. ಜಿಹ್ವಾರೌದ್ರಾಯ ನಮಃ

ಜಿಹ್ವೇ - ಎಂದರೆ ನಾಲಿಗೆ, ರೌದ್ರ - ಭಯಂಕರ, ಘೋರವಾದುದು.

ಪರಮಾತ್ಮನ ಅವತಾರ / ರೂಪಗಳಲ್ಲಿ ನಾಲಿಗೆಯಲ್ಲಿ ಭಯಂಕರವಾದುದೆಂದರೆ - ನರಸಿಂಹನ ಅವತಾರ ಮತ್ತು ಕಾಳಿಕಾ ಮಾತೆಯ ಭದ್ರಕಾಳಿಯ ರೂಪ.

ನರಸಿಂಹನ ಅವತಾರ - ಇದರಲ್ಲಿ ಘೋರವಾಗಿ ಯುದ್ಧಮಾಡಿದ ನಂತರ ಹಿರಣ್ಯಕಶಿಪುವನ್ನು ಉಗುರುಗಳಿಂದ ಸಂಹರಿಸಿದನು. ಹೊಟ್ಟೆಯನ್ನು ಬಗೆದು, ಕರುಳಿನ ಮಾಲೆಗಳನ್ನು ತನ್ನ ಕೊರಳಿಗೆ ಹಾಕಿಕೊಂಡನು. ಬಗೆದ ಹೊಟ್ಟೆಯಿಂದ ಕೈಗಳಿಂದ ಬೊಗಸೆ ಬೊಗಸೆಯಾಗಿ ರಕ್ತಮಾಂಸಗಳನ್ನು ತೆಗೆದುಕೊಂಡು ತನ್ನ ಸಿಂಹದ ಮುಖದ ಬಾಯಿಯಲ್ಲಿ ಹಾಕಿಕೊಂಡು ಕುಡಿದನು - ಇದು ಭಯಂಕರವಾದ ಉಗ್ರರೂಪ - ನಾಲಿಗೆಯು ರೌದ್ರರಸ ಹೊಂದಿದ್ದತು. ಮುಖವೂ ಅತಿ ಉಗ್ರವಾಗಿದ್ದಿತು - ಅದರಿಂದ ಇಂತಹ ನರಸಿಂಹನನ್ನು ಉಗ್ರನರಸಿಂಹನೆಂದೂ, ಜಿಹ್ವಾರೌದ್ರಾಯ ನಮಃ ಎಂದು ಹೇಳಿದರೆ ಅವನಿಗೆ ತನ್ನನ್ನು ಹೊಗಳುತ್ತಿದ್ದಾರಲ್ಲ ಎಂದು ಭಾವನೆ ಉಂಟಾಗುತ್ತದೆ. ನಂತರ ಶಾಂತಸ್ಥಿತಿಯಾದಾಗ, ಮುಖ, ಬಾಯಿ, ಕೈಗಳು ಎಲ್ಲವನ್ನು ಮಹಾಭಿಷೇಕದಿಂದ ಶುದ್ಧಮಾಡಲಿ ಎಂದು ತನ್ನದೇ ಆದ ಇತರ ಆತ್ಮಗಳನ್ನು ಹತ್ತಿರ ಸುಳಿಯಲು ಬಿಡುತ್ತಾನೆ ಮತ್ತು ಮಸ್ತಕಾಭಿಷೇಕವನ್ನು ಮಾಡಿ ಶುದ್ಧಮಾಡಿ, ಕಣ ಕಣದಲ್ಲಿಯೂ ಶುದ್ಧೋದಕದಿಂದ ಶುದ್ಧೀಕರಿಸಿ ಚಂದನ, ಕಸ್ತೂರಿ, ಗೋರೋಜನ ಇತ್ಯಾದಿಗಳಿಂದ ಲೇಪನಮಾಡಲು ಬಿಡುತ್ತಾನೆ ಮತ್ತು ಸಹಕರಿಸುತ್ತಾನೆ. ಈ ರೀತಿ ಲೇಪನದ ನಂತರ ಸಂತೋಷದಿಂದ ತನಗೆ ಬೇಕು ಬೇಕಾದ ವಸ್ತ್ರ, ಒಡವೆಗಳನ್ನು ಭಕ್ತರ ಮನದಲ್ಲಿ ಉದ್ಭವಿಸುವಂತೆ ಮಾಡುತ್ತಾನೆ. ನಂತರ ಭಕ್ತರು ಅವನ ಪ್ರೇರಣೆಯಂತೆ ಅಲಂಕರಿಸುತ್ತಾರೆ. ಜರತಾರಿ, ಪೀತಾಂಬರ, ಸುವರ್ಣ ವಸ್ತ್ರಗಳಿಂದ ಉಡಿಸುತ್ತಾರೆ. ವಜ್ರವೈಡೂರ್ಯ, ಗೋಮೇಧಕ ಮುಂತಾದ ಮಣಿಗಳಿಂದ ಕೂಡಿದ ಕಿರೀಟಹಾರ ಕೇಯೂರ ಕುಂಡಲಗಳನ್ನು ಹಾಕಿ ಅಲಂಕರಿಸುತ್ತಾರೆ. ಸಾಕ್ಷಾತ್ ಲಕ್ಷ್ಮಿಯನ್ನೇ ವಕ್ಷಸ್ಥಳದಲ್ಲಿ ಇರಿಸಿಕೊಳ್ಳುತ್ತಾನೆ. ತೊಡೆಯ ಮೇಲೆ ಕುಳಿತು ಲಕ್ಷ್ಮಿಯು ಸಂತೋಷದಿಂದ ಇರುತ್ತಾಳೆ. ಈಗ ಜಿಹ್ವಾರೌದ್ರಾಯ ನಮಃ ಎನ್ನುವುದು ಪರಿವರ್ತಿತವಾಗಿ ಶಾಂತಮಹಾಲಕ್ಷ್ಮಿ, ಲೋಕಾಂಬಾ ಸಮೇತ ಶ್ರೀ ಶೀಬಿ ನರಸಿಂಹಾಯ ನಮಃ ಎಂದಾಗುತ್ತಾನೆ. ಇವನನ್ನು ರಥದಲ್ಲಿ ಕುಳ್ಳಿರಿಸಿ ಉತ್ಸವ ಮಾಡುತ್ತಾರೆ. ಇಂತಹ ರೀತಿಯಲ್ಲಿ ನರಸಿಂಹನನ್ನು ಉಬ್ಬಿಸಿ ಕುಣಿಸುತ್ತಾರೆ. ಅವನ ರಥೋತ್ಸವವೇ ನೋಡಲು ಚೆನ್ನ, ಭಕ್ತರ

ಉದ್ವೇಗ, ಸಂತೋಷಗಳು ಹೇಳತೀರದು - ಇದನ್ನು ಭಕ್ತನೊಬ್ಬನು ಉದ್ವೇಗ, ಸಂತೋಷ, ಪರಮ ನರಸಿಂಹನ ಸನ್ನಿಧಿಯಲ್ಲಿರುವೆನೆಂದು ತಿಳಿದು ಹಾಡಿ, ಪೊಗಳಿ ಕೊಂಡಾಡುವ ದೃಶ್ಯವೇ ಈಗ ನೋಡಿ - ಆನಂದ ಪಡಿ - ರೌದ್ರತೆ ಹೋಗಿ ಹಬ್ಬವಾಗುತ್ತದೆ - ರಥೋತ್ಸವವಾಗುತ್ತಿದೆ - ಅಹಾ! ಸಂತೋಷವೇ ಸಂತೋಷ.

### ಶ್ರೀ ಶೀಬಿ ನರಸಿಂಹನ ರಥೋತ್ಸವದ ವರ್ಣನೆ

(ರಚನೆ ಶೀಬೀ ನರಸಿಂಹನೇ - ತಾನೆ ಸ್ವಯಂ ಪ್ರೇರಿಸಿದ್ದಾನೆ).

*ಭಕ್ತಜನರು ರಂಗ ನಿನ್ನ ತೇರನ್ನೆಳೆಯುವರೋ*
*ಶೀಬೀರಂಗ ನಿನ್ನ ತೇರನ್ನೆಳೆಯುವರೋ ।।*
*ಮಂಗಳಾಂಗ ರಂಗ ನಿನ್ನ ಅಂದದಿ ಮೆರೆಸುವರೋ ।*
*ಶೀಬೀರಂಗ ನಿನ್ನ ಚೆಂದದಿ ಮೆರೆಸುವರೋ ।।1।।*

"ಶೀಬೀ" ಎನ್ನುವುದು ಸಾಂಕೇತಿಕ. "ಯೋಗ" ಅಥವಾ "ಭೋಗ" ಎಂದರೆ ನರಸಿಂಹನ ಭಾವವನ್ನು ವ್ಯಕ್ತಪಡಿಸುತ್ತದೆ ಮತ್ತು ಹೆಚ್ಚು ಸಮಂಜಸ, ಆದರಣೀಯ, ಸರ್ವರಿಗೂ ಅಪೇಕ್ಷಿತ, ಸರ್ವಸಮ್ಮತ. ಈ ರೀತಿ ಉಪಯೋಗಿಸಬೇಕಾಗಿ ನಮ್ರ ವಿನಂತಿ.

*ಹಾಲು ಮೊಸರು ಜೇನು ತುಪ್ಪ*
*ಕಾಯಿ ನೀರು ಹಣ್ಣಿಲ್ಲೀ ।*
*ಮಂತ್ರ ತಂತ್ರದಿಂದ ನಿನ್ನ*
*ಅಭಿಷೇಕವ ಮಾಡುವರೋ ।।2।।*

*ಬಗೆ ಬಗೆ ರೀತಿಯಲ್ಲಿ*
*ಅಭೀಷೇಕವ ಮಾಡುವರೋ ।*
*ಅಭಿಷೇಕವ ಮಾಡಿ ನಿನಗೆ*
*ದಿವ್ಯಾಲಂಕಾರವ ಮಾಡುವರೋ ।।3।।*

*ಸಿಂಗಾರವ ಮಾಡಿ*
*ಲೋಕಾಂಬೆಯ ಜೊತೆಯಲ್ಲೀ*
*ಮಂಗಳಾಂಗ ನರಸಿಂಗನ*
*ಮೆರೆಸುವರೋ ।।4।।*

*ಬಂಗಾರದ ವಜ್ರಾಂಗಿಯ*
*ಉಡಿಸಿ ನಿನಗೇ*
*ಸಿಂಗಾರಿ ಸಿರಿ ಲೋಕಾಂಬನ*
*ರಥದಲ್ಲಿ ಕುಣಿಸುವರೋ ।।5।।*

*ಹಣ್ಣುಕಾಯಿ ಭಕ್ಷ್ಯಬೋಜ್ಯ*
*ಪಾನಕ ವೀಳ್ಯದಿಂದಲೀ*
*ನೈವೇದ್ಯವ ಮಾಡಿ ನಮ್ಮ*
*ಸಿಂಗನ ಕುಣಿಸುವರೋ ।।6।।*

ಶ್ರೀ ''ಶೀಬೀ'' ಎಂದ ಶಬ್ದದ ಬದಲು ''ಯೋಗಾ'' ಅಥವಾ ''ಭೋಗಾ'' ಎಂದು ಹೇಳಿದರೆ ಎಲ್ಲಾ ಮತ್ತು ''ಯಾವ'' ನರಸಿಂಹನಿಗೂ ಈ ಸ್ತೋತ್ರವೇ ಅನ್ವಯಿಸುತ್ತದೆ.

*ಮಂಗಳವಾದ್ಯ ಸ್ತೋತ್ರದಿಂದ*
*ನಿತ್ಯಮಂಗಳ ಮೂರುತೀ ।*
*ಮಂಗಳಾಂಗ ಸುಂದರಾಂಗ*
*ನರಸಿಂಹನ ತೇರನ್ನೆಳೆಯುವರೋ ।।7।।*

*ಬೇಗ ಬೇಗ ಸಿಂಗರಿಸಿ*
*ಮಾಘ ಬಹುಳ ತದಿಗೆ ದಿನದಲ್ಲೀ ।*
*ಮಂಗಳಾಂಗ ರಂಗ ನಿನ್ನ*
*ಬಂಗಾರದ ತೇರನ್ನೆಳೆಯುವರೋ ।।8।।*

ಇತಿ ನರಸಿಂಹ ರಥೋತ್ಸವ ಸ್ತೋತ್ರ, ಸ್ತುತ, ಸ್ತುತ್ಯ ಸಕಲವೂ ನರಸಿಂಹನೇ!!! ಶೀಬೀ ನರಸಿಂಹ ಸ್ವಾಮಿಯ ಪಾದಾರ್ಪಿತ ಅವನಿಂದಲೇ.

''ಶೀಬೀ'' ಎಂದು ಹೇಳುವುದರಲ್ಲಿ ಯಾವ ಪ್ರತ್ಯೇಕತೆಯೂ ಇಲ್ಲ. ಸಂಕುಚಿತವೂ ಇಲ್ಲ. ಬದಲಾಗಿ ಯೋಗ / ಭೋಗ ಎಂದರೂ ಅವನೇ - ಬೇರೆಯಲ್ಲ, ಇದು ಹೆಚ್ಚು ಸಮಂಜಸ.

ಕಾಳಿಕಾದೇವಿಯ ಜಿಹ್ವೆಯು ಹೊರಗೆ ಚಾಚಿರುತ್ತದೆ. ಏನನ್ನು ಬೇಕಾದರೂ ಸೇವಿಸಲು ಸಿದ್ಧವಾಗಿರುವಂತೆ ತೋರುತ್ತದೆ. ಕತ್ತಿನಲ್ಲಿ ರುಂಡಮಾಲೆ ಉರುಳಾಡುತ್ತಿದೆ. ಕಪ್ಪುದೇಹ, ಕೆಂಪು ಕಣ್ಣುಗಳು, ಚಾಚಿದ ಕೆಂಪಾದ ಉದ್ದನೆಯ ನಾಲಿಗೆ, ನಾಲಿಗೆಯೊಂದೇ ರೌದ್ರವಲ್ಲ, ಸಕಲ ಮುಖವೂ, ಮುಖವೇ ಏಕೆ! ದೇಹವೇ ರೌದ್ರರಸದಿಂದ ಪ್ರಸರವಾಗಿದೆ! ಭಯಂಕರ

ರೂಪ - ಜಿಹ್ವಾರೌದ್ರಾಯ ನಮಃ. ಇಂತಹ ಕಾಳಿಯು ಸೌಮ್ಯವಾಗಬೇಕಾದರೆ ಭಗವಾನ್ ರಾಮಕೃಷ್ಣರೇ ಬರಬೇಕು! ಅವರೊಬ್ಬರೇ ಶಾಂತಮಾಡಲು ಶಕ್ತರು! ಜೈ ಮಹಾಕಾಳಿ! ಜೈ ಶಾಂತೇಭವ, ವರದೇ ಭವ, ಸುಪ್ರಸನ್ನೋ ಭವ! ಪ್ರಸೀದ ದೇವಿ! ದೇವಿ ತುಭ್ಯಂ ನಮೋನ್ನಮಃ! ನಮೋನ್ನಮಃ ಅನ್ಯಥಾ ಶರಣಂ ನಾಸ್ತಿ, ತ್ವಮೇವ ಶರಣಂ ಮಮ! ರಕ್ಷ ರಕ್ಷ ಜಗದೀಶ್ವರಿ! ಮಹಾಮಾತಾ ನಮೋಸ್ತುತೆ!!

899. ರುದ್ರಾಯ ನಮಃ

ರುದ್ರ - ಎಂದರೆ ಶಿವ, ಏಕಾದಶ ರುದ್ರರು - (ಭಯಂಕರ) ಸೃಷ್ಟಿಕರ್ತನಾದ ಬ್ರಹ್ಮನು ತನ್ನ ಸಾತ್ವಿಕ ಮನಸ್ಸಿನಿಂದ ಸೃಷ್ಟಿಸಿದಾಗ ಸನಕ, ಸನಂದನ, ಸುಜಾತ, ಸನತ್ಕುಮಾರ, ಎಂಬ ನಾಲ್ವರು ಬ್ರಹ್ಮನ ಆದೇಶದಂತೆ ಪ್ರಜಾಭಿವೃದ್ಧಿಕಾರ್ಯವನ್ನು ಮಾಡಲಿಲ್ಲ. ತಪಸ್ಸಿಗೆ ಹೊರಟು ಹೋದರು. ಇದರಿಂದ ಕುಪಿತನಾದ ಬ್ರಹ್ಮನು ಹುಬ್ಬುಗಂಟಿಕ್ಕಿಕೊಂಡು ಹಣೆಯಿಂದ ಸೃಷ್ಟಿಸಲುನುವಾದನು. ಕೋಪದಿಂದ ಇದ್ದ ಕಾರಣ ಅವನ ಹಣೆಯಿಂದ ರುದ್ರರು 11 ಜನ ಸೃಷ್ಟಿಯಾದರು. ಇವರು ಹುಟ್ಟಿದಾಕ್ಷಣ ಜೋರಾಗಿ ರೌದ್ರರಾಗಿ ಭಯಂಕರಾಗಿ ಅಳುತ್ತಾ ಹೊರಬಂದು ಬ್ರಹ್ಮನನ್ನು ಇರಲು ಜಾಗ, ಮಾಡಬೇಕಾದ ಕಾರ್ಯವನ್ನು ಕೇಳಿದರು. ಜಗತ್ಸೃಷ್ಟಿ ಮಾಡಲು ಬ್ರಹ್ಮನು ಹೇಳಿದ್ದರಿಂದ ಭಯಂಕರರಾದ ರುದ್ರಗಣಗಳನ್ನು ರುದ್ರನು ಸೃಷ್ಟಿಸಿದನು. ಇದರಿಂದ ಲೋಕ ನಾಶವಾಗಲು ಬ್ರಹ್ಮನು ರುದ್ರನು ಮತ್ತೆ ಸೃಷ್ಟಿಸಬಾರದೆಂದೂ, ಸ್ಮಶಾನದಲ್ಲಿ ಇರಬೇಕೆಂದೂ ಹೇಳಿದನು - ಅವನ ಹೆಸರೇ ರುದ್ರ ಎಂದಾಯಿತು. ಆದರೂ ಶಿವನು ಸರ್ವಶಕ್ತ, ಲೋಕೋಪಕಾರಿ, ಕ್ಷಿಪ್ರ ವರದಾತ, ಆಶುತೋಷ, ಬೇಗನೇ ಸಂತೋಷ ಹೊಂದುವವನು - ಬೇಡಿದ ವರಗಳನ್ನು ನೀಡುವವನು. ಅನೇಕ ರಾಕ್ಷಸರು ವಿಚಿತ್ರವಾದ ವರಗಳನ್ನು ಪಡೆದರು ಅವರ ಸಂಹಾರಕ್ಕಾಗಿ ವಿಷ್ಣುವು ಬಹಳ ಶ್ರಮಿಸಬೇಕಾಯಿತು. ಪ್ರಸ್ತುತ ರಾಕ್ಷಸರು ಹೀಗೆ ಮಾಡಿದರು.

ರುದ್ರಪ್ರಶ್ನ ಎಂದು ಇದೆ. ಇದರಲ್ಲಿ ಶಿವನನ್ನು ಕುರಿತು ಸ್ತೋತ್ರವಿದೆ. ನಮಕ, ಚಮಕಗಳು ರುದ್ರಪ್ರಶ್ನದ 2 ಅಧ್ಯಾಯಗಳು. ನಮಕದಲ್ಲಿ ಶಿವನಿಗೆ ನಮಃ ಎಂದು ಬರುತ್ತದೆ, ಚಮಕದಲ್ಲಿ ''ಚ ಮೇ'' ನನಗೆ ವರ ರೂಪದಲ್ಲಿ ಶಿವನು ಅನುಗ್ರಹಿಸಲಿ ಎಂದು ಪ್ರಾರ್ಥನೆಯಿದೆ. ಈ ರುದ್ರಾಧ್ಯಾಯವನ್ನು ಪ್ರತಿ ದೇವರಿಗೂ ಅಭಿಷೇಕಮಾಡುವಾಗ ಸ್ವರ ಸಹಿತ ರುದ್ರನನ್ನು ಧ್ಯಾನಿಸಿ ತೃಪ್ತಿಪಡಿಸುತ್ತೇವೆ. ಇದರಿಂದ ನಾವು ಅವನೇ ಆಗುತ್ತೇವೆ. ''ಅಯಂ ಮೇ ಹಸ್ತೋ ಭಗವತ್ತರಃ'' - ಈ ಪರಮಾತ್ಮನನ್ನು ಧ್ಯಾನಿಸುವ, ಪೂಜಿಸುವ, ಅರ್ಚಿಸುವ ಹಸ್ತವು ಭಗವಂತನಿಗಿಂತ ಸಿದ್ಧಿಸುವ ಹಸ್ತವಾಗಲೀ ಎಂದು ಹೇಳುವುದು ಇದರಲ್ಲಿ ವಿಶೇಷ.

ಏಕಾದಶ ರುದ್ರರು, ಅವರ ವಾಸಸ್ಥಾನ, ಅವರ ಪತ್ನಿಯರು - ಈ ರೀತಿ ಬ್ರಹ್ಮನು ನಿಯಮಿಸಿದನು.

ಏಕಾದಶ ರುದ್ರರು - ಮನ್ಯು, ಮಹಾಕಾಲ, ಮಹಾಂತ, ಋತುಧ್ವಜ, ಶಿವ, ಉಗ್ರತೀತ, ಭವ, ಕಾಲ, ವಾಮದೇವ, ಧೃತವ್ರತ - (11).

ಅವರ ವಾಸಸ್ಥಾನಗಳು - ಹೃದಯ, ಇಂದ್ರಿಯ, ಪ್ರಾಣ, ಆಕಾಶ, ವಾಯು, ಅಗ್ನಿ, ಜಲ, ಭೂಮಿ, ಸೂರ್ಯ, ಚಂದ್ರ, ತಪಸ್ಸು - (11).

ಅವರ ಪತ್ನಿಯರು - ಧೀ, ವೃತ್ತಿ, ಅಶನಾ, ಉಮಾ, ನಿಯತ್, ಸರ್ಪಿ, ಇಳಾ, ಅಂಬಿಕಾ, ಇರಾವತೀ, ಸುಧಾ, ದೀಕ್ಷಾ - (11).

**900. ವೀರಭದ್ರಾಯ ನಮಃ**

ಭದ್ರ - ಎಂದರೆ ಕಾಪಾಡುವವನು, ವೀರ - ಎಂದರೆ ಶಕ್ತಿಶಾಲಿ.

ವೀರಭದ್ರ - ಭಗವಂತನು ಕಾಪಾಡುವವರಲ್ಲಿ, ಶುಭಕೋರುವವರಲ್ಲಿ ಅಗ್ರಗಣ್ಯನು, ಕಲ್ಯಾಣ ಕರ್ತನು - ಅದರಿಂದ ವೀರಭದ್ರಾಯ ನಮಃ.

ಅಥವಾ

ವೀರಭದ್ರನು ಶಿವನ ಸೇವಕನು - ಶಿವನಷ್ಟೇ ಪ್ರತಾಪಶಾಲಿ, ವರದಾತ, ದುಷ್ಟಶಿಕ್ಷಕನು, ಶಿಷ್ಟರಕ್ಷಕನು.

ಅಥವಾ

ಭದ್ರ - ಶ್ರೇಷ್ಠನು, ವೀರ - ನಾಯಕನು.

ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನು - ಸರ್ವರಿಗೂ, ಕಲ್ಯಾಣಕಾರಕನು. ಇದು ಅವನ ನಿರಂತರ ಧ್ಯೇಯ - ಗುರಿ - ಇದರಲ್ಲಿ ಯಾವ ಜೀವಿಯಲ್ಲಿಯೂ ಯಾವ ರೀತಿಯದೂ ಪಕ್ಷಪಾತವಿಲ್ಲ - ಅದರಿಂದ ಅವನು ಅದ್ವಿತಿಯನಾದ ವೀರಭದ್ರನು - ವೀರಭದ್ರಾಯ ನಮಃ.

**901. ಚಿದ್ರೂಪಾಯ ನಮಃ**

ಚಿತ್ - ಎಂದರೆ ಕೇವಲ ಬ್ರಹ್ಮ, ರೂಪ - ರೂಪನಾದವನು.

ಪರಮಾತ್ಮನು ಪರಬ್ರಹ್ಮಸ್ವರೂಪನು. ಇದೇ ಸಕಲ ದೇವ ದೇವತೆಗಳಿಗೂ ಜೀವ ಕೋಟಿಗೂ ಮೂಲ -

ಪ್ರತಿ ಜೀವಾತ್ಮನಲ್ಲಿಯೂ ಚಿತ್ ಎಂಬುದು ಇರುತ್ತದೆ. ಆತ್ಮನಿಗೆ ಸೇರಿದ ವಸ್ತು ಇದು - ಚಿತ್.

ಇದರ ಸತ್ಯತೆಯನ್ನು ಎಂದರೆ ಬದಲಾಯಿಸದೆ ನಿರಂತರ ಇರುವುದೆಂಬ ನಿಜವನ್ನು ತಿಳಿದ ಮೇಲೆ ಆಗುವ ಆನಂದ ಅಷ್ಟಿಷ್ಟಲ್ಲ. ಸಕಲ ಜಗತ್ತನ್ನು ಮೀರಿದ ಈ ಸ್ಥಿತಿಯೇ ಸತ್ - ಚಿತ್. ಅದರ ಸ್ವರೂಪವೇ ಆನಂದ.

ಅದೇ ಸಚ್ಚಿದಾನಂದ - ಚಿದಾನಂದ - ಚಿತ್ ಸ್ವರೂಪ - ಚಿದ್ರೂಪ - ಪರಮಾತ್ಮ ದೇವನನ್ನು ಚಿದ್ರೂಪ ಎಂದೂ ದೇವಿಯನ್ನು ಚಿದ್ರೂಪಿ ಎಂದೂ ಕರೆಯುತ್ತೇವೆ.

ಅಥವಾ

ಪರಮಾತ್ಮನು ರೂಪಾತೀತನು, ಗುಣಾತೀತನು, ಮಾಯಾತೀತನು ಸಕಲಕ್ಕೂ ಅತೀತನು - ಅದರಿಂದ ಚಿತ್ ಎಂಬುದು ರೂಪವಲ್ಲ - ಆತ್ಮನ ಜೊತೆಗೆ ಅಂಟಿಕೊಂಡಿರುವ ಭಾವವೇ ಚಿತ್. ಈ ಚಿತ್ ಎಂಬುದೇ ಸದಾ ಮನಸ್ಸು, ಬುದ್ಧಿ, ಅಹಂಕಾರ, ಇಂದ್ರಿಯಗಳಿಗೆ ಪ್ರಚೋದನೆಯನ್ನು ಉಂಟುಮಾಡುತ್ತದೆ - ಚಿತ್ ಎಂಬುದು ಪ್ರತಿಯೊಂದು ಆತ್ಮನ ಜೊತೆಯಲ್ಲಿಯೇ ಇರಲೇ ಬೇಕಾದ ವಸ್ತು.

ಅಥವಾ

ಚಿತ್ - ಎಂದರೆ ವಿಚಾರ, ಬುದ್ಧಿ, ಮನಸ್ಸು, ಹೃದಯ, ಆತ್ಮ, ಇವೆಲ್ಲವೂ ಬ್ರಹ್ಮನಲ್ಲಿಯೇ ಅಡಗಿ ಹೋಗುತ್ತದೆ. ಅದೇ ಚಿದ್ರೂಪ.

902. ಸಮುದ್ರಾಯ ನಮಃ

ಸಮುದ್ರ - ಎಂದರೆ ಸಾಗರ - ಪರಮಾತ್ಮನು ದಯಾಸಾಗರನು, ಕೃಪಾಸಾಗರನು. ಆನಂದ ಸಾಗರನು.

ಅವನು ಜೀವಿಗಳಿಗೆ ಇರಲು ಸಂಸಾರ ಸಾಗರವನ್ನು ಮಾಡಿದ್ದಾನೆ. ಈ ಸಂಸಾರ ಸಾಗರದಲ್ಲಿ ಅಗಣಿತ ಆತ್ಮಗಳು ಇರುವುದರಿಂದ ಮತ್ತು ಸಂಸಾರ ಸಾಗರವೆ ಜೀವಿಗಳಿಗೆ ಆಧಾರನಾದ್ದರಿಂದ ಇದನ್ನು - ಪರಮಾತ್ಮನೇ ಎಂದು ಕರೆಯಬಹುದು.

ಅಥವಾ

ಈ ಅಖಿಲಾಂಡ ಕೋಟಿ ಬ್ರಹ್ಮಾಂಡಗಳೇ ಸಮುದ್ರ, ಅವನ ಕಾಮನೆಯಿಂದ ರಚಿಸಲ್ಪಟ್ಟಿದ್ದು - ಇದು ಪರಮಾತ್ಮನ ಒಂದು ರೂಪವೇ - ಅದರಿಂದ ಅವನು ಸಮುದ್ರನು.

ಅಥವಾ

ಅವನು ಕರುಣೆ, ಕೃಪೆ, ದಯೆಯ ಮಹಾಸಾಗರ.

ಮಹಾಸಮುದ್ರ - ಈ ಬತ್ತಿ ಹೋಗದ, ಎಷ್ಟು ಕೃಪಾಸಿಂಧುಗಳನ್ನು ಅನಾದಿಕಾಲದಿಂದ ಅನಂತಕಾಲದವರೆಗೆ ಅವನು ಕೊಡುತ್ತಿದ್ದರೂ ಬತ್ತಿಹೋಗದ, ಕಡಿಮೆಯಾಗದ ಮಹಾಸಮುದ್ರ - ಅದರಿಂದ ಅವನನ್ನು ಸಮುದ್ರ ಎಂದು ಕರೆಯಲಾಗಿದೆ.

ಅಥವಾ

ಮುದ್ರಾಸಹಿತನಾದವನು - ಸಮುದ್ರನು, ಮುದ್ರೆ ಎಂದರೆ ಭಾವಗಳು, ವಿನ್ಯಾಸಗಳು - ಅವನ ದೇಹದ ವಿವಿಧ ಅಂಗದ ಭಂಗಿಗಳು - ನಾಟ್ಯದ ಭಾವಗಳು, ಮುಖದ ಭಾವಗಳು, ಚಿತ್ ಮುದ್ರೆಗಳು ಮುಂತಾದವು - ಮುದ್ರೆಗಳು (ಚಿಹ್ನೆಗಳು - ಗುರುತುಗಳು) ಇದರಿಂದ ಇವುಗಳಿಂದ ಕೂಡಿದವನಾದ್ದರಿಂದ ಸ-ಮುದ್ರನು.

903. ಕದ್ರುದ್ರಾಯ ನಮಃ

ಕದ್ರುವಿನ ಮಕ್ಕಳನ್ನು ಉದ್ಧರಿಸಿದವನು - ಪರಮಾತ್ಮ.

ಕಶ್ಯಪನಿಗೆ ಅದಿತ, ದಿತಿ, ದನು, ಕದ್ರು ಎಂಬ ಹೆಂಡತಿಯರು. ಅದಿತಿಯ ಮಕ್ಕಳು ಆದಿತ್ಯರು, ದಿತಿಯ ಮಕ್ಕಳು ದೈತ್ಯರು, ದನುವಿನ ಮಕ್ಕಳು ದಾನವರು, ಕದ್ರುವಿನ ಮಕ್ಕಳು - ಕದ್ರುದ್ರರು (ಪ್ರಾಣಿ - ಚರ, ಹರಿಯುವ ಪ್ರಾಣಿಗಳು - ಸರ್ಪಗಳು - ಮುಂತಾದವು).

ಸರ್ಪಗಳು ಅಮೃತವನ್ನು ಕುಡಿಯಬೇಕೆಂದು ಕದ್ರುವಿನ ಆಸೆ. ಅದಿತಿಯ ಮಕ್ಕಳಾದ ಆದಿತ್ಯರು, ದೇವತೆಗಳ ಹಾಗೆ ಅಮರರಾಗಬೇಕೆಂದು ಆಸೆ. ಹಾಗೆ ಪರಮಾತ್ಮನನ್ನು ಸೇವಿಸಿ ಗರುಡ - ಸರ್ಪಗಳ ಸ್ನೇಹವಾಗುವಂತೆ ಮಾಡಿದಳು. ಪರಮಾತ್ಮನೇ ವರನೀಡಿದ್ದರಿಂದ ಮೈತ್ರಿಯುಂಟಾಯಿತು. ಇದರಿಂದ ಇವನಿಗೆ ಕದ್ರುದ್ರಾಯ ನಮಃ ಎಂದಾಯಿತು.

904. ಪ್ರಚೇತಸೇ ನಮಃ

ಪ್ರಚೇತಸರು - ಪ್ರಾಚೀನ ಬರ್ಹಿಯ ಪತ್ನಿ ಶತಧೃತಿಯಿಂದ ಹತ್ತು ಮಕ್ಕಳಾದರು. ಇವರೇ ಪ್ರಾಚೀಸರು, ಪ್ರಚೇತಸರು. ಇವರೆಲ್ಲರೂ ವಾರ್ಕ್ಷಿ ಎಂಬುವಳನ್ನು ಮದುವೆಯಾಗಿ ಒಬ್ಬ ಮಗನನ್ನು ಪಡೆದರು. ಅವನು ಹಿಂದಿನ ಜನ್ಮದಲ್ಲಿ ದಕ್ಷ ಪ್ರಜಾಪತಿಯಾಗಿದ್ದನು. ಈಗ ಅವನ ತೇಜಸ್ಸಿನ ಕಾರಣ ಮತ್ತೆ ದಕ್ಷ ಎಂದು ಹೆಸರಾಯಿತು. ಮತ್ತೆ ಪ್ರಚೇತಸರು ತಪಸ್ಸಿಗೆ ಹೋದರು.

ಪ್ರಚೇತಸರೇ ಪರಮಾತ್ಮನ ಅಂಶ - ಮಹಾಭಕ್ತರು - ತಪಸ್ವಿಗಳು.

ಪ್ರಚೇತಸರು ತಾರ್ಕ್ಷ್ಯೆ (ವಾರ್ಕ್ಷೀ)ಯೆಂಬುವಳನ್ನು ಮದುವೆಯಾಗಿ ಆಕೆಯಲ್ಲಿ ಪ್ರಾಚೇತಸನೆಂಬ ಮಗನನ್ನು ಪಡೆದರು. ದಕ್ಷಬ್ರಹ್ಮನೇ ಈ ಪ್ರಾಚೇತಸ - ಇವನೇ ಮೂರು ಲೋಕಗಳಲ್ಲಿಯೂ ಸಂತತಿಯನ್ನು ತುಂಬಿಸಿದನು. ಈತನೇ ನಾರದರಿಂದ ತಪಸ್ಸಿಗೆ ಹೋದ ಮಕ್ಕಳನ್ನು ಕುರಿತು ಯೋಚನೆಮಾಡಿ ನಾರದರಿಗೆ ''ನಿಂತ ಕಡೆ ನಿಲ್ಲದೆ ತಿರುಗುತ್ತಿರು'' ಎಂದು ಶಾಪಕೊಟ್ಟನು.

*ಇಂದ್ರಿಯಾಯೇಂದ್ರಿಯಜ್ಞಾಯ ನಮೋಽಸ್ತ್ವಿಂದ್ರಾನುಜಾಯ ಚ ।*
*ಅತೀಂದ್ರಿಯಾಯ ಸಾಂದ್ರಾಯ ಇಂದಿರಾಪತಯೇ ನಮಃ ॥152॥*
*(905-910)*

**905. ಇಂದ್ರಿಯಾಯ ನಮಃ**

ಇಂದ್ರಿಯಗಳು - ಬಲ, ಶಕ್ತಿ, ಜ್ಞಾನ ಮತ್ತು ಕರ್ತವ್ಯಗಳ ಸಾಧನಗಳು. ಜ್ಞಾನವನ್ನು ಗ್ರಹಿಸುವ ಸಾಧನಗಳು - ಜ್ಞಾನೇಂದ್ರಿಯಗಳು. ಕರ್ಮವನ್ನು ನಡೆಯಿಸುವ ಸಾಧನಗಳು - ಕರ್ಮೇಂದ್ರಿಯಗಳು.

ಇವು ಹತ್ತೂ ಸೇರಿ ಇಂದ್ರಿಯಗಳು ಎಂದು ಹೇಳಲ್ಪಡುತ್ತವೆ. ಇವನ್ನು ಇಂದ್ರಿಯಗ್ರಾಮ - ಅಥವಾ ಇಂದ್ರಿಯಗಳ ಸಮೂಹ ಎಂದು ಹೇಳುತ್ತೇವೆ. ಪ್ರತಿ ಇಂದ್ರಿಯಕ್ಕೂ ಒಂದೊಂದು ಅಧಿದೇವತೆಯು ಇದೆ. ಈ ದೇವತೆಗಳು ಗ್ರಹಣ, ಕ್ರಿಯಾ ಶಕ್ತಿಯನ್ನು ಈ ಇಂದ್ರಿಯಗಳ ಮೂಲಕ ನಡೆಯಿಸುತ್ತಾರೆ.

| ಜ್ಞಾನೇಂದ್ರಿಯಗಳು | ಅಧಿದೇವತೆಗಳು | ಅಧಿಭೂತಗಳು | ಮಹಾಭೂತಗಳು |
|---|---|---|---|
| 1. ಕಿವಿ | ದಿಕ್ | ಶಬ್ದ | ಆಕಾಶ |
| 2. ಚರ್ಮ | ವಾಯು | ಸ್ಪೃಷ್ಟವ್ಯಂ | ವಾಯು |
| 3. ಕಣ್ಣು | ಆದಿತ್ಯ | ರೂಪ | ತೇಜಸ್ಸು |
| 4. ನಾಲಿಗೆ | ವರುಣ | ರಸ | ಆಪಃ |
| 5. ಮೂಗು | ಅಶ್ವಿನೀ ದೇವತೆಗಳು | ಗಂಧ | ಪೃಥಿವೀ |

| ಕರ್ಮೇಂದ್ರಿಯಗಳು | ಅಧಿ ದೇವತೆಗಳು | ನಡೆಯುವ ಕೆಲಸಗಳು (ಕರ್ಮಗಳು) |
|---|---|---|
| 1. ಮಾತು / ವಾಕ್ | ಅಗ್ನಿ | ಹೇಳುವುದು |
| 2. ಕೈಗಳು | ಇಂದ್ರ | ನಡೆಯುವ ಕಾರ್ಯ |
| 3. ಕಾಲುಗಳು | ವಿಷ್ಣು | ಹೋಗಬೇಕಾದ ಸ್ಥಳ |
| 4. ಅಪಾನ / ಗುದ | ಮಿತ್ರ | ಮಲತ್ಯಾಗ |
| 5. ಜನನೇಂದ್ರಿಯ | ಪ್ರಜಾಪತಿ | ವೀರ್ಯ |

ಈ ಇಂದ್ರಿಯಗಳು ಶ್ರೇಷ್ಠವಾದುವೆಂದು ತಿಳಿದಿದ್ದೇವೆ. ಇವುಗಳಿಗೆ ಪರಮಾತ್ಮನೇ ತನ್ನ ಅಂಶ ದೇವತೆಗಳನ್ನು ಇಟ್ಟಿರುತ್ತಾನೆ. ಅದರಿಂದ ಇಂದ್ರಿಯಗಳೇ ಪರಮಾತ್ಮ - ಅದರಿಂದ ಅವನಿಗೆ ಇಂದ್ರಿಯಾಯ ನಮಃ

ಎಂದು ನಮಸ್ಕರಿಸುತ್ತೇವೆ.

**906.** ಇಂದ್ರಿಯಜ್ಞಾಯ ನಮಃ

ಇಂದ್ರಿಯ - ಇಂದ್ರಿಯಗಳನ್ನು, ಜ್ಞ - ತಿಳಿದವನು.

ಇವುಗಳ ಕಾರ್ಯ, ಜ್ಞಾನ ಮತ್ತು ಸೂಕ್ಷ್ಮತೆಯನ್ನು ತಿಳಿದವನು - ಪುರುಷೋತ್ತಮನೇ!

ಇಂದ್ರಿಯಗಳು, ಜಗತ್ತಿನ ವಿಶಯಗಳಿಗೂ, ಪ್ರಕೃತಿ, ಪುರುಷ ಮತ್ತು ಮಾಯೆಗಳಿಗೆ ಹೇಗೆ, ಯಾವಾಗ, ಎಲ್ಲಿ, ಯಾವ ರೀತಿ ಸ್ಪಂದಿಸುತ್ತದೆ ಎಂಬುದನ್ನು ತಿಳಿದವನು - ಅವನೇ ಇಂದ್ರಿಯಜ್ಞ - ಪರಮಾತ್ಮ - ತನ್ನ ಸಂಕಲ್ಪ ಶಕ್ತಿಯಿಂದ ಪ್ರತಿಯೊಂದು ಆತ್ಮದೊಡನೆಯೂ ಈ ಇಂದ್ರಿಯಗಳನ್ನು ನಿರಂತರ ಅಂಟಿಸಿರುತ್ತಾನೆ. ಅವು ಕಲ್ಪಾದಿಯಲ್ಲಿ ಬಂದ ಆತ್ಮದೊಡನೆ ಸೇರಿ, ಪರಮಾತ್ಮನನ್ನು ಆತ್ಮವು ಸೇರುವವರೆಗೆ ಆತ್ಮದೊಡನೆ ಅಂಟಿಕೊಂಡಿರುತ್ತವೆ. ನಿರಂತರವಾಗಿ ಆತ್ಮಕ್ಕೆ ಸಂಸ್ಕಾರಗಳನ್ನು ಅಂಟಿಸುತ್ತಿರುತ್ತದೆ. ಅಂದರೆ ಲೇಪನ ಮಾಡುತ್ತಿರುತ್ತವೆ.

ಇಂದ್ರಿಯಗಳನ್ನು ಸೃಷ್ಟಿಸಿದವನು, ತಿಳಿದವನು, ಸಂಪರ್ಕವನ್ನು ಮಾಡುವವನು, ಆತ್ಮಕ್ಕೆ ಅಂಟಿಸಿದವನು, ಬಿಡಿಸಿದವನು, ಪಕ್ಷಪಾತವಿಲ್ಲದೆ ಪ್ರತಿಯೊಂದು ಆತ್ಮದೊಡನೆ ಇಂದ್ರಿಯಗಳನ್ನು ಇಟ್ಟವನು - ಪರಮಾತ್ಮನೇ! - ಅವನೇ ಇಂದ್ರಿಯಜ್ಞಾಯ ನಮಃ ಎನ್ನಿಸಿಕೊಳ್ಳುತ್ತಾನೆ.

**907.** ಇಂದ್ರಾನುಜಾಯ ನಮಃ

ಇಂದ್ರ - ದೇವೇಂದ್ರನಿಗೆ, ಅನುಜ - ಸಹೋದರನು - ಅವನೇ ಉಪೇಂದ್ರನು.

ದಿತೀದೇವಿಯು ಇಂದ್ರನಿಗೆ ಸಮನಾದ ಮಗನನ್ನು ಪಡೆಯಲು ಕಶ್ಯಪರನ್ನು ಪ್ರಾರ್ಥಿಸಿದಾಗ ಒಂದು ಸಲ ಇಂದ್ರನ ಕ್ರಿಯೆಯಿಂದ ಸಪ್ತ ಸಪ್ತ ಮರುತ್ತು ದೇವತೆಗಳನ್ನು ಪಡೆದು ಅವು 49ನ್ನು ಇಂದ್ರನ ಗಣಗಳಾಗಿ ನಿಯಮಿತವಾದವು.

ಇನ್ನೊಂದು ಸಂದರ್ಭದಲ್ಲಿ ಅವಳು ಇಂದ್ರ ಸಮನಾದ ಪುತ್ರನನ್ನು ಪಡೆಯುವ ಪ್ರಯತ್ನದಲ್ಲಿ ಇಂದ್ರನ ಮತ್ತು ಕಶ್ಯಪರ ಕೃಪೆಯಿಂದ ಇಂದ್ರನ ಸಹೋದರನಾಗಿ ಸೇವಿಸುವ ಉಪೇಂದ್ರನನ್ನು ಪಡೆದಳು. - ಇವನೇ ಇಂದ್ರಾನುಜನು. ಈತನು ವಿಷ್ಣುವಿನ ಅಂಶದವನು - ಅಥವಾ ಮಹಾವಿಷ್ಣುವೇ!

**908.** ಅತೀಂದ್ರಿಯಾಯ ನಮಃ

ಅತೀಂದ್ರಿಯನು - ಎಂದರೆ ಇಂದ್ರಿಯಗಳನ್ನು ಮೀರಿದವನು - ಎಂದರೆ ಇಂದ್ರಿಯಗಳನ್ನು ಗೆದ್ದು ಅವುಗಳನ್ನು ತನ್ನ ಏಕಮಾತ್ರ ಮನಸ್ಸಿನಿಂದ ನಿಗ್ರಹಿಸುವವನು - ಪರಮಾತ್ಮ.

ಅತೀಂದ್ರಿಯ - ಪಂಚಜ್ಞಾನ, ಪಂಚಕರ್ಮ. ಇಂದ್ರಿಯಗಳಿಂದಲೂ ನಡೆಯದೇ ಇರುವ ಅಗೋಚರವಾದ ಆರನೆಯ ಇಂದ್ರಿಯವುಳ್ಳವನು -

ಅಥವಾ

ಇಂದ್ರಿಯಗಳಿಗೆ ಅತೀತನು - ಇಂತಹವನು ಸಾಮಾನ್ಯ ಆತ್ಮಗಳಿಗೆ ನಿಗ್ರಹಶಕ್ತಿಯನ್ನು ಕೊಟ್ಟು ಅತೀಂದ್ರಿಯಗಳನ್ನಾಗಿ ಮಾಡಬಲ್ಲವನು. ಅಥವಾ

ಸ್ವಯಂ ಇಂದ್ರಿಯಗಳನ್ನು ಸಂಕಲ್ಪಮಾತ್ರದಿಂದ ನಡೆಸುವುದರಿಂದ ಅವುಗಳಿಂದ ಮೋಹಿತನಾಗದೆ ಮೇಲೆ ಉಳಿಯುವವನು - ಅತೀಂದ್ರಿಯನು - ಪರಮ ಪವಿತ್ರನಾಗಿರುವ ಪರಮಾತ್ಮನು.

**909. ಸಾಂದ್ರಾಯ ನಮಃ**

ಸಾಂದ್ರ - ವಿಪುಲ ಮೃದುವಾದ, ನಯವಾದ, ಸುಂದರನಾದವನು - ಈ ಗುಣಗಳಲ್ಲಿ ಅವನನ್ನು ಮೀರಿಸುವವರಿಲ್ಲ - ಪರಮ ಪವಿತ್ರನು - ಪರಮ ಸುಂದರನು - ಜಗನ್ಮೋಹನಾಕಾರದವನು - ಸಾಂದ್ರನು - ಸಾಂದ್ರಾಯ ನಮಃ.

**910. ಇಂದಿರಾಪತಯೇ ನಮಃ**

ಇಂದಿರಾದೇವಿ ಎಂದರೆ ರಮ, ಲಕ್ಷ್ಮಿ, ಮಹಾಲಕ್ಷ್ಮಿ, ಶ್ರೀ - ಮಂಗಳದೇವತಾ.

ಇವಳ ಪತಿಯೇ ಶ್ರೀಪತಿ, ಲಕ್ಷ್ಮೀಪತಿ, ರಮಾಪತಿ, ಮಾ-ಧವ, ಇಂದಿರಾಪತಿ - ಮಹಾವಿಷ್ಣು.

ಇಂದಿರೆಯನ್ನು ತನ್ನ ವಕ್ಷಸ್ಥಳದಲ್ಲಿ ಇರಿಸಿಕೊಂಡಿದ್ದಾನೆ. ಅವಳ ಸೌಂದರ್ಯಕ್ಕೆ ಲೋಪಬಾರದೆಂದು ತನ್ನ ನಾಭೀ ಕಮಲದಲ್ಲಿ ಬ್ರಹ್ಮದೇವನನ್ನು ಪಡೆದಿದ್ದಾನೆ. ಬ್ರಹ್ಮದೇವರೇ ಸೃಷ್ಟಿಕರ್ತನು - ಪ್ರಜಾಭಿವೃದ್ಧಿ ಕಾರ್ಯ ಮಾಡಿದವನು.

*ಈಶಾನಾಯ ಚ ಈಡ್ಯಾಯ ಈಪ್ಸಿತಾಯ ಇನಾಯ ಚ ।*
*ವ್ಯೋಮಾತ್ಮಕಾಯ ವ್ಯೋಮ್ನೇ ಚ ವ್ಯೋಮಕೇಶಾಯ ವೈ ನಮಃ ॥153॥*
*(911-917)*

**911. ಈಶಾನಾಯ ನಮಃ**

ಈಶಾನ - ದೇವರು - ಪರಮಾತ್ಮ.

ಈಶಾನ್ಯದಿಕ್ಕಿನ ಅಧಿದೇವತೆ - ದಿಕ್ಪಾಲಕನು.

- ಅಷ್ಟದಿಕ್ಪಾಲಕರಲ್ಲಿ ಒಬ್ಬನು.

ಶಾನ - ಎಂದರೆ ಶಿವ, ಬೆಳಕು, ತೇಜಸ್ಸು, ಒಡೆಯನು, ಸಾಮರ್ಥ್ಯವುಳ್ಳವನು. - ಅದರಿಂದ ಈಶಾನಾಯ ನಮಃ.

912. ಈಡ್ಯಾಯ ನಮಃ

ಈಡ್ಯ - ಈಡ್ - ಸ್ಥುತಿಸು, ಹೊಗಳು, ಎಂದರ್ಥ.

ಈಡ್ಯನು - ಎಂದರೆ ಸ್ತುತ್ತಿಸಲ್ಪಡುವವನು, ಹೊಗಳಿಸಿಕೊಳ್ಳುವನು.

ಅಖಿಲಾಂಡ ಕೋಟಿ ಬ್ರಹ್ಮಾಂಡದಲ್ಲಿ ಸಕಲ ಸಚರಾಚರಗಳಿಂದಲೂ, ಪ್ರತಿಯೊಂದು ಜೀವಿಯಿಂದಲೂ ಹೊಗಳಿಸಿಕೊಳ್ಳುವವನು, ಸ್ತೋತ್ರ ಮಾಡಲ್ಪಡುವವನು ಪರಮಾತ್ಮನೇ! ಯಾವ ಆತ್ಮನಿಂದಲೂ ಆತ್ಮೀಯನಾಗಿ ಉಳಿಯುವವನು ಇವನೊಬ್ಬನೇ! ಸಕಲರಿಂದಲೂ ಗುಟ್ಟಾಗಿ, ಬಯಲಾಗಿ ಪ್ರಾರ್ಥಿಸಲ್ಪಡುವವನು ಇವನೊಬ್ಬನೇ! - ಇವನನ್ನು ಬಿಟ್ಟರೆ ಬೇರೆ ಒಬ್ಬರಿಲ್ಲ - ಇಷ್ಟೊಂದು ಅನುಕೂಲತೆಗಳನ್ನು ಕಲ್ಪಿಸಿ, ಸಂಸಾರ ಸಾಗರದೊಳಗೆ ಆತ್ಮಗಳನ್ನು ಕಳಿಸಿ, ಮತ್ತೆ ಅದೇ ಸಂಸಾರ ಸಾಗರದಿಂದ ಬಿಡಿಸಿ ತನ್ನಲ್ಲಿ ಸೇರಿಸಿಕೊಳ್ಳುವ ದಯಾಮಯನು ಇವನೊಬ್ಬನೇ! ಈಡ್ಯನು - ಪರಮ ಪೂಜ್ಯನು - ಈಡ್ಯಾಯ ನಮಃ ಎಂದರೆ ಇವನಿಗೇ ಸೇರಬೇಕು.

913. ಈಪ್ಸಿತಾಯ ನಮಃ

ಈಪ್ಸಿತ - ಬೇಕಾದ್ದನ್ನು ಕೊಡುವವನು - ಈಪ್ಸಿತ ವರದ. ಯಾರು ಏನು ಬೇಕಾದರೂ ಕೊಡಬಹುದು, ಅವೆಲ್ಲಾ ಕ್ಷಣಿಕ ಸುಖದ್ದು, ಕೊನೆಯಾಗುವ ಸುಖದ್ದು. ಆದರೆ ಕೊನೆಯೇ ಇಲ್ಲದ, ಆದ್ಯಂತವಿಲ್ಲದ ಸುಖವನ್ನು ಮತ್ತು ಆನಂದವನ್ನು ಕೊಡುವವನು ಪರಮಾತ್ಮನೊಬ್ಬನೇ! ಅನನು ಯಾರಿಗೂ ಯಾವ ರೀತಿಯ ಪಕ್ಷಪಾತವಿಲ್ಲದೆ ಕೋರಿದ್ದನ್ನು, ಬೇಡಿದ್ದನ್ನು ಕೊಡುತ್ತಾನೆ. ಅದಕ್ಕೆ ಅವನಿಗೆ ಈಪ್ಸಿತವರದ, ಈಪ್ಸಿತನೆಂದು ಕರೆಯುತ್ತೇವೆ.

ಅಥವಾ

ಈಪ್ಸಿತ ಎಂದರೆ ಪ್ರೀತಿಯನ್ನು, ಇಷ್ಟವಾದುದನ್ನು ಕೊಡುವವನು.

ಅಥವಾ

ಈಪ್ಸಿತ - ಎಂದರೆ ಭಗವಂತನನ್ನು ಕಾಮಿಸದವರು ಯಾರೂ ಇಲ್ಲ, ಅವನು ಎಲ್ಲರಿಗೂ ಬೇಕಾದವನು.

914. ಇನಾಯ ನಮಃ

ಇನ - ಇಷ್ಟವಾದವನು, ಸಕಲರಿಂದಲೂ ಅಪೇಕ್ಷಿಸಲ್ಪಡುವವನು - ಪರಮಾತ್ಮ.

ಇನ - ಸೂರ್ಯ, ಇನಕುಲ ತಿಲಕ - ಸೂರ್ಯವಂಶಕ್ಕೆ ಕಿರೀಟಪ್ರಾಯನು

- ಶ್ರೀರಾಮ, ಇನ - ಸೂರ್ಯನೇ ಮಹಾವಿಷ್ಣು.

915. ವ್ಯೋಮಾತ್ಮಕಾಯ ನಮಃ

ವ್ಯೋಮ - ಆಕಾಶವನ್ನೇ, ಆತ್ಮ - ಆತ್ಮರೂಪವಾಗಿ, ಕ - ಹೊಂದಿರುವವನು.

ಪರಮಾತ್ಮನು ಆತ್ಮರೂಪವಾಗಿ ಆಕಾಶವನ್ನೇ ಹೊಂದಿರುವವನು - ಎಂದರೆ ಆಕಾಶದಷ್ಟು ವಿಶಾಲವಾಗಿರುವವನು. ಆಕಾಶವನ್ನು ಕಾಣಬಹುದೇ ವಿನಹ ಗ್ರಹಿಸಲು ಸಾಧ್ಯವಿಲ್ಲ. ಪಂಚಮಹಾಭೂತಗಳಲ್ಲಿ ಒಂದು. ಪೃಥಿವಿ, ಆಪ, ತೇಜಸ್ಸು, ವಾಯು, ಆಕಾಶಗಳೇ ಪಂಚಮಹಾಭೂತಗಳು. ಆಕಾಶದಿಂದ ವಾಯುವೂ, ವಾಯುವಿನಿಂದ ತೇಜಸ್ಸೂ, ತೇಜಸ್ಸಿನಿಂದ ಆಪವೂ, ಆಪದಿಂದ ಪೃಥಿವಿಯೂ ಉಂಟಾದವು. ಲೀನವಾಗುವಾಗ ಪೃಥವಿ, ಆಪಃ, ತೇಜಸ್ಸು, ವಾಯುಗಳಲ್ಲಿ ಕ್ರಮವಾಗಿ ಒಂದರೊಳಗೊಂದು ಲೀನವಾಗಿ ಕಡೆಗೆ ಆಕಾಶವೇ ನಿಲ್ಲುತ್ತದೆ. ಇದು ಪರಮಾತ್ಮನ ಸೃಷ್ಟಿ ನಿಯಮ, ಆಕಾಶವೇ ಪರಮಾತ್ಮನ ಆತ್ಮಸ್ವರೂಪ, ಅದರಿಂದ ಅವನನ್ನು ವ್ಯೋಮಾತ್ಮಕಾಯ ನಮಃ ಎಂದಿದೆ.

916. ವ್ಯೋಮಾಯ ನಮಃ

ವ್ಯೋಮ - ಅಂತರಿಕ್ಷ, ಆಕಾಶ, ಭೂಲೋಕ, ಭುವರ್ಲೋಕ, ಸುವರ್ಲೋಕಗಳಮೇಲೆ ಅಂತರಿಕ್ಷವಿದೆ.

ಪರಮಾತ್ಮನು ಆಕಾಶವೇ - ಮಹಾಭೂತನು, ಪರಮಾತ್ಮನು ಸೂಕ್ಷ್ಮರೂಪಿಯಾದವನು. ಸ್ವತಃ ತಾನೇ ಮಹಾಕಾಶನಾದನು ಮತ್ತು ಪ್ರತಿ ಶರೀರದ ಒಳಗೂ ಹೊರಗೂ ತಾನೇ ಆಕಾಶನಾದನು. ಈ ಆಕಾಶದಲ್ಲಿ ಇತರ ಮಹಾಭೂತಗಳು ತುಂಬಿಕೊಂಡವು. ಅಥವಾ,

ಪ್ರತಿ ದೇಹವೂ ಪಂಚಮಹಾಭೂತಗಳಿಂದ ಮಾಡಲ್ಪಟ್ಟಿದೆ. ನಂತರ ಅವುಗಳಲ್ಲಿಯೇ ಕ್ರಮವಾಗಿ ಐಕ್ಯವಾಗುತ್ತದೆ. ಜಗತ್ತೆಲ್ಲ ಈ ಪಂಚಭೂತಗಳ ವಿಪರೀತ / ವಿಪರ್ಯಾಸ / ಪ್ರಮಾಣಗಳಿಂದ ಮಾಡಲ್ಪಟ್ಟಿದೆ ಮತ್ತು ಕ್ಷಣ ಕ್ಷಣಕ್ಕೂ ವ್ಯತ್ಯಾಸ ಹೊಂದುತ್ತಿರುತ್ತದೆ ಮತ್ತು ಪರಿವರ್ತನೆಯಾಗುತ್ತಿದೆ.

917. ವ್ಯೋಮಕೇಶಾಯ ನಮಃ

ವ್ಯೋಮಕೇಶಿನ್ - ಎಂದರೆ ಶಿವ.

ಅಥವಾ ಆಕಾಶವನ್ನೇ ಕೇಶ, ಕೂದಲಾಗಿರುವವನು.

ಅಥವಾ

ಆಕಾಶಕ್ಕೆ ಒಡೆಯನಾಗಿರುವವನು - ಶಿಖರ ಪ್ರಾಯನಾಗಿರುವವನು.

ಅಥವಾ

ಆಕಾಶವರ್ಣದ ಕೂದಲುಗಳ ಜಟೆಯುಳ್ಳವನು. ಅಥವಾ, ವ್ಯೋಮ ಎಂದರೆ ನೀರಿನ ಬಣ್ಣದ ಜಟೆಯುಳ್ಳವನು.

*ವ್ಯೋಮಾಧಾರಾಯ ಚ ವ್ಯೋಮವಕ್ತ್ರಾಯಾಸುರಘಾತಿನೇ ।*
*ನಮಸ್ತೇ ವ್ಯೋಮದಂಷ್ಟ್ರಾಯ ವ್ಯೋಮಾವಾಸಾಯ ತೇ ನಮಃ ।।154।।*
*(918-922)*

918. ವ್ಯೋಮಾಧಾರಾಯ ನಮಃ

ವ್ಯೋಮ - ಎಂದರೆ ಆಕಾಶಕ್ಕೆ, ಆಧಾರ - ಆಧಾರಭೂತನಾಗಿರುವವನು, ಆಕಾಶವನ್ನೇ ತನ್ನ ಶಕ್ತಿಯಿಂದ ನಿಲ್ಲಿಸಿರುವವನು - ರಚಿಸಿದವನು - ಅಥವಾ ನಡೆಯಿಸುತ್ತಿರುವವನು.

ಅಥವಾ

ತನ್ನ ಅಸ್ತಿತ್ವವನ್ನು ನಿರೂಪಿಸುವುದಿಕ್ಕೆ ಆಕಾಶವನ್ನೇ ಇಟ್ಟು ಪ್ರಮಾಣೀಕರಿಸುವವನು - ಆಕಾಶವನ್ನೇ ಆಧಾರವಾಗಿಟ್ಟುಕೊಂಡಿರುವವನು.

919. ವ್ಯೋಮವಕ್ತ್ರಾಯ ನಮಃ

ವ್ಯೋಮ - ಎಂದರೆ ಆಕಾಶವನ್ನೇ, ವಕ್ತ್ರ - ಎಂದರೆ ತನ್ನ ಮುಖವನ್ನಾಗಿ ಮಾಡಿಕೊಂಡಿರುವವನು.

ಅಥವಾ

ಆಕಾಶದಂತಹ ಮಹತ್ತಾದ ಬಾಯಿಯುಳ್ಳವನು / ಆಕಾಶದಷ್ಟು ದೊಡ್ಡ ಬಾಯಿಯುಳ್ಳವನು - ಪರಮಾತ್ಮನ ರೂಪವು ಅತಿಮಹತ್ತಾದುದು. ಆಕಾಶವೇ ಅವನ ಮುಖ ಅಥವಾ ಬಾಯಿಯಾದಾಗ ಅವನ ಶರೀರವೆಷ್ಟಿರಬೇಕು!

920. ಅಸುರಘಾತಿನೇ ನಮಃ

ಅಸುರರನ್ನು ಸಂಹರಿಸುವವನು.

ಅಥವಾ ಅಸುರೀಶಕ್ತಿಗಳನ್ನು ನಿಯಂತ್ರಿಸಿ, ನಾಶಮಾಡುವವನು.

921. ವ್ಯೋಮದಂಷ್ಟ್ರಾಯ ನಮಃ

ಆಕಾಶದಷ್ಟು ಮಹದಾದ ಕೋರೆದಾಡೆಯುಳ್ಳವನು - ಅಂದರೆ ಮಹಾಶಕ್ತಿಶಾಲಿ.

922. ವ್ಯೋಮಾವಾಸಾಯ ನಮಃ

ಆಕಾಶದಲ್ಲಿಯೇ ವಾಸಿಸುವವನು - ಪರಮಾತ್ಮ, ಆತ್ಮಗಳು.

ವ್ಯೋಮ ಎಂದರೆ ಆಕಾಶವು, ಆವಾಸ - ಎರುವ ಸ್ಥಾನವಾಗಿರುವವನು - ಪರಮಾತ್ಮ.

*ಸುಕುಮಾರಾಯ ರಾಮಾಯ ಶಿಂಶುಮಾರಾಯ ತೇ ನಮಃ ।*
*ವಿಶ್ವಾಯ ವಿಶ್ವರೂಪಾಯ ನಮೋ ವಿಶ್ವಾತ್ಮಕಾಯ ಚ ॥155॥*
*(923-928)*

**923. ಸುಕುಮಾರಾಯ ನಮಃ**

ಸು - ವಿಪುಲ ಸುಂದರವಾದ, ಮನಮೋಹಕವಾದ,

ಕುಮಾರ - ಬಾಲಸ್ವರೂಪವುಳ್ಳವನು - ಅವನೇ ಶ್ರೀಕೃಷ್ಣ ಪರಮಾತ್ಮ, ಬಾಲಕೃಷ್ಣ, ಸುಂದರವಾದ, ನಯನ ಮನೋಹರನಾದ ಶ್ರೀಮನ್ಮಹಾವಿಷ್ಣು.

ಬಾಲಸ್ವರೂಪದಲ್ಲಿ - ಅನೇಕ ಅಗಣಿತ ಲೀಲೆಗಳನ್ನು ಪ್ರಕಟಿಸಿದ ಕೃಷ್ಣ - ಬಾಲಕೃಷ್ಣ, ಮುದ್ದುಕೃಷ್ಣ, ಗೋಪಾಲಕ, ಗೋವಿಂದ, ಗೋವರ್ಧನೋದ್ಧಾರಕ, ಕಾಳಿಂಗಮರ್ದನ, ಗೋಪಿಕಾಮನೋಹರ, ಮುಂತಾದ ನಾಮಗಳು. - ಸುಕುಮಾರಾಯ ನಮಃ.

ಅಥವಾ

ಮೃದುವಾದ ಸ್ವರೂಪ, ಸ್ವಭಾವವುಳ್ಳವನು.

**924. ರಾಮಾಯ ನಮಃ**

ರಾಮ - ರಮೆಯಲ್ಲಿ ರಮಿಸುವವನು - ರಮಾಪತಿ, ರಾಮ - ದಶರಥನ ಪುತ್ರ ರಾಮ.

- ಜಮದಗ್ನಿಯ ಪುತ್ರ - ರಾಮ - ಮುಂದೆ ಪರಶುರಾಮನಾದವನು.

**925. ಶಿಂಶುಮಾರಾಯ ನಮಃ**

ಶಿಂಶುಮಾರ - ಎಂದರೆ ಶಿಂಶುಮಾರ ಚಕ್ರ. ಧ್ರುವ ನಕ್ಷತ್ರದ ಸುತ್ತಲೂ ಅಖಂಡ ಭೂಮಂಡಲ, ಬ್ರಹ್ಮಾಂಡಗಳು ತಿರುಗುವುದರಿಂದ ಅಥವಾ ಧೃವನಕ್ಷತ್ರವನ್ನೇ ಕೇಂದ್ರವಾಗಿಟ್ಟುಕೊಂಡು ಅಖಿಲಾಂಡ ಕೋಟಿ ಬ್ರಹ್ಮಾಂಡಗಳು ತಿರುಗುವುದರಿಂದ ಆ ನಕ್ಷತ್ರವನ್ನು ಶಿಂಶುಮಾರವೆಂದು, ಆ ತಿರುಗುವಿಕೆಗೆ ಶಿಂಶುಮಾರಚಕ್ರವೆಂದೂ ಕರೆಯುತ್ತೇವೆ. ಆ ಶಿಂಶುಮಾರನೇ ಪರಮಾತ್ಮ. ಆದರಿಂದಲೇ ಶಿಂಶುಮಾರಾಯ ನಮಃ ಎಂದಿದೆ.

**926. ವಿಶ್ವಾಯ ನಮಃ**

ವಿಶ್ವ - ಅಖಂಡ ಭೂಮಂಡಲ, ಬ್ರಹ್ಮಾಂಡಗಳಲ್ಲಿ ಮತ್ತೆಲ್ಲಡೆಯಲ್ಲಿಯೂ ಎಡಬಿಡದೆ ವಿಶ್ - ಹರಡಿರುವುದರಿಂದ ಭಗವಂತನನ್ನು ವಿಶ್ವ - ಎಂದು ಹೇಳಿದೆ.

**927. ವಿಶ್ವರೂಪಾಯ ನಮಃ**

ಭಗವಂತನೇ ವಿಶ್ವನು - ಅಖಿಲಾಂಡ ಕೋಟಿ ಬ್ರಹ್ಮಾಂಡನು ಮತ್ತೂ ಎಂದರೆ ಅದೇ ಅವನು - ವಿಶ್ವರೂಪನು - ಅವನೇ ಈ ಜಗತ್ತು. ಏನೇನನ್ನು ನೋಡುತ್ತೇವೆಯೋ, ಪಂಚ ಇಂದ್ರಿಯಗಳಿಂದ ಗ್ರಹಿಸುತ್ತೇವೆಯೋ ಮತ್ತು ಗ್ರಹಿಸಲು ಸಾಧ್ಯವೋ ಅವೆಲ್ಲವೂ ಪರಮಾತ್ಮನೇ! ಪರಮಾತ್ಮನ ಒಂದು ರೂಪ - ವಿಶ್ವರೂಪಾಯ ನಮಃ.

**928. ವಿಶ್ವಾತ್ಮನೇ ನಮಃ**

ಅಖಂಡ ಅಖಿಲ ವಿಶ್ವವನ್ನೇ ತನ್ನಲ್ಲಿರಿಸಿಕೊಂಡಿರುವವನು.

ಅಥವಾ

ವಿಶ್ವವೇ ಆತ್ಮ - ತಾನಾಗಿರುವವನು, ವಿಶ್ವವನ್ನೇ ಆತ್ಮವಾಗಿರಿಸಿಕೊಂಡು ಮಹತ್ತಾದ ಆಕಾರವುಳ್ಳವನು.

*ಜ್ಞಾನಾತ್ಮಕಾಯ ಜ್ಞಾನಾಯ ವಿಶ್ವೇಶಾಯ ಪರಮಾತ್ಮನೇ /*
*ಏಕಾತ್ಮನೇ ನಮಸ್ತುಭ್ಯಂ ನಮಸ್ತೇ ದ್ವಾದಶಾತ್ಮನೇ //156//*

*(929-934)*

**929. ಜ್ಞಾನಾತ್ಮಕಾಯ ನಮಃ**

ಜ್ಞಾನ - ಎಂದರೆ ಪರಮಾತ್ಮನ ವಿಚಾರವಾಗಿ ತಿಳಿಸುವುದೆಲ್ಲವೂ ಜ್ಞಾನ, ಉಳಿದದ್ದೆಲ್ಲವೂ ಅಜ್ಞಾನ.

ಜ್ಞಾನವೆಂಬುದರಲ್ಲಿ ಅಡಗಿರುವ ಪರಮಾತ್ಮ, ದೇವರೇ ಆತ್ಮ - ಅದೇ ಜ್ಞಾನದ ಜೀವಾಳ.

ಜ್ಞಾನ - ಎಂದರೆ ಸಕಲ ಜೀವ ಕೋಟಿಗಳಲ್ಲಿ ಪ್ರತಿಯೊಂದು ಜೀವಿಯಲ್ಲಿಯೂ, ಶರೀರದಲ್ಲಿಯೂ ತೇಜೋಮಯ ಶಕ್ತಿಯ ವಿಚಾರವನ್ನು ತಿಳಿಸುವ ತಿಳಿವಳಿಕೆಯೇ ಆತ್ಮಜ್ಞಾನ - ಈ ಆತ್ಮವೇ ಪರಮಾತ್ಮನಿಂದಲೇ ಬಂದ ಅಂಶಮಾತ್ರವೇ ಆತ್ಮ.

ಜ್ಞಾನ - ಕಾಲ, ಸಮಯದಲ್ಲಿ ಹಿಂದಿನದು, ಈ ವರ್ತಮಾನದ್ದು, ಮುಂದಿನದನ್ನು ತಿಳಿಸುವ ಆಧಾರವೇ ಕಾಲ ಮತ್ತು ಕಾಲಜ್ಞಾನ.

ಈ ಎಲ್ಲ ಜ್ಞಾನಗಳಲ್ಲಿಯೂ ಯಾರನ್ನು ಕುರಿತು ತಿಳಿವಳಿಕೆಯನ್ನು ಅರಿವು ಮಾಡುವುದೊ, ಅದೇ ಆತ್ಮ, ಪರಮಾತ್ಮ - ಅವನೇ ಜ್ಞಾನಾತ್ಮಕಾಯ ನಮಃ.

**930. ಜ್ಞಾನಾಯ ನಮಃ**

ಜ್ಞಾನ - ಎಂದರೆ ಭಗವಂತನನ್ನು ಕುರಿತ ತಿಳಿವಳಿಕೆಯೇ ಪರಮಾತ್ಮ, ಆತ್ಮ.

ಈ ಜ್ಞಾನವೇ ಪರಮಾತ್ಮ - ಪುರುಷೋತ್ತಮ, ಅವನಿಗೆ ಜ್ಞಾನಾಯ ನಮಃ ಎಂದು ನಮಸ್ಕರಿಸುತ್ತೇವೆ.

ಈ ಜ್ಞಾನ, ಅಜ್ಞಾನವೆಂದು ವಿಭಾಗಿಸುವ ವಿವೇಕತೆ, ತಿಳಿವಳಿಕೆ ಬರಬೇಕಾದರೆ ಪರಮಾತ್ಮನ ಕೃಪೆ, ನಮ್ಮ ಸಂಸ್ಕಾರ ಪರಿಶುದ್ಧತೆ, ಪರಿಪಕ್ವತೆ ಬೇಕು. ಇದು ಪರಮಾತ್ಮ, ಅವನಿಗೆ ''ಜ್ಞಾನ''ನಿಗೆ ನಮಸ್ಕಾರಗಳು.

931. ವಿಶ್ವೇಶಾಯ ನಮಃ

ಅಖಿಲಾಂಡ ಕೋಟಿ ಬ್ರಹ್ಮಾಂಡಗಳೇ ಪರಮಾತ್ಮನು ತಾನೇ ಕಾಮಿಸಿ ತಾನೇ ಸಂಕಲ್ಪಮಾತ್ರದಿಂದ ಸೃಷ್ಟಿಸಿದ ವಿಶ್ವ. ಇದರಲ್ಲಿ ಅವನು ಎಲ್ಲೆಲ್ಲಿಯೂ ಎಡೆಬಿಡದೆ ಹರಡಿಕೊಂಡಿರುವುದರಿಂದ ಅದನ್ನೇ ವಿಶ್ವ ಎನ್ನುತ್ತೇವೆ. ಇಂತಹ ವಿಶ್ವಕ್ಕೆ ಒಡೆಯ, ಸೃಷ್ಟಿಕರ್ತನಾದ್ದರಿಂದ ಪರಬ್ರಹ್ಮನನ್ನು ವಿಶ್ವೇಶ ಎಂದು ಕರೆಯುತ್ತೇವೆ. ಅಥವಾ

ಶರೀರಿಗಳಲ್ಲಿ ವಾಸಮಾಡುವ ಜೀವ, ಆತ್ಮಗಳಿಗೆಲ್ಲ ಪರಮಾತ್ಮನೇ ಸೂತ್ರಧಾರ. ಅವನ ಸಂಕಲ್ಪದಂತೆಯೇ ಸಕಲ ಜೀವಕೋಟಿಯೂ ನಡೆಯುವುದರಿಂದ ಅವುಗಳಿಗೆ ಮತ್ತು ಅವುಗಳಿರುವ ಜಗತ್ತಿಗೇ ಪರಮಾತ್ಮನೇ ಈಶ್ವರ. ಅವನನ್ನು ವಿಶ್ವೇಶನೆಂದು ನಮಸ್ಕರಿಸುತ್ತೇವೆ.

932. ಪರಾತ್ಮನೇ ನಮಃ

ಪ್ರತಿ ಶರೀರವನ್ನು ಅಲಂಕರಿಸುವುದು ಆತ್ಮ. ಆತ್ಮವು ಶರೀರದಲ್ಲಿದ್ದಾಗ ಜೀವಾತ್ಮ, ಹೊರಗೆ ಬಂದಾಗ ಆತ್ಮ. ಇಂತಹ ಜೀವಕೋಟಿಯ ಆತ್ಮಗಳಿಗೆಲ್ಲ ಸೂತ್ರಧಾರನು ಪರಮ ಪೂಜ್ಯನು - ಅವನೇ ಪರಾತ್ಮ.

ಅಥವಾ

ಪರ - ಎಂದರೆ ಪರಲೋಕ, ವೈಕುಂಠದಲ್ಲಿ ವಾಸಮಾಡುವ ವಿಷ್ಣುವೇ ಪರಾತ್ಮ, ಇವನೇ ಪರಬ್ರಹ್ಮ, ಸಕಲ ಸೃಷ್ಟಿಗೂ ಕಾರಣಕರ್ತ, ಪರಮೋತ್ತಮನಾದ ''ಪರಾತ್ಮನೇ ನಮಃ''.

933. ಏಕಾತ್ಮನೇ ನಮಃ

ಏಕ - ಎಂದರೆ ಒಬ್ಬನೇ, ಒಂದೇ, ಆತ್ಮ - ಆತ್ಮನು.

ಒಬ್ಬನೇ ಒಬ್ಬನಾದ ವಟಪತ್ರಶಾಯಿಯಾದ ಪರಮಾತ್ಮನು ಈ ಬೃಹತ್ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ಸೃಷ್ಟಿಸಿದ್ದಾನೆ. ಅವನಿಂದಲೇ ಎಲ್ಲವೂ ಬಂದಿವೆ. ಅವನೇ ಬೃಹದಾಕಾರನಾಗಿ ಅಗಣಿತ ಆತ್ಮಗಳಾಗಿ ವಿಸ್ತರಿಸಿಕೊಂಡು ವಿಶ್ವದಲ್ಲೆಲ್ಲಾ ಹರಡಿಕೊಂಡಿದ್ದಾನೆ. ಅವನೇ ಸರ್ವಕ್ಕೂ ಮೂಲನು, ಅವನೇ ಸಕಲಕ್ಕೂ, ಸಕಲ ಲೋಕಗಳಿಗೂ, ಗ್ರಹಗಳಿಗೂ, ಸೃಷ್ಟಿಯಲ್ಲಿ ಏನೇನಿವೆಯೋ,

ಇಲ್ಲವೋ ಎಲ್ಲಕ್ಕೂ ಆಧಾರಭೂತನು, ಮೂಲನು - ಏಕಾತ್ಮನು - ಏಕಾತ್ಮನೇ ನಮಃ ಎಂದರೆ ಅವನಿಗೇ ಸಲ್ಲುತ್ತದೆ.

**934.** **ದ್ವಾದಶಾತ್ಮನೇ ನಮಃ**

ಪರಮಾತ್ಮನು ಒಬ್ಬನೇ ಆದರೂ ದ್ವಾದಶಾತ್ಮನಾಗಿ ಲೋಕವನ್ನು ಬೆಳಗುತ್ತಾನೆ. ಅವನ ರೂಪಗಳೇ ದ್ವಾದಶಾದಿತ್ಯರು - ಹನ್ನೆರಡು ಆದಿತ್ಯರು - ಅದಿತಿ, ಕಶ್ಯಪರ ಮಕ್ಕಳು - ಅದಿತಿಗೆ ಇಂದ್ರ, ವಿಷ್ಣು ಮತ್ತು ಹನ್ನೆರಡು ಆದಿತ್ಯರು - ಮಕ್ಕಳು - ಈ ಹನ್ನೆರಡು ಆದಿತ್ಯರನ್ನೇ ದ್ವಾದಶಾತ್ಮನೆಂದು ಕರೆಯುತ್ತಾರೆ.

*ಚತುರ್ವಿಂಶತಿರೂಪಾಯ ಪಂಚವಿಂಶತಿಮೂರ್ತಯೇ ।*
*ಷಡ್ವಿಂಶಾಕಾತ್ಮನೇ ನಿತ್ಯಂ ಸಪ್ತವಿಂಶತಿಕಾತ್ಮನೇ ॥157॥*

*(935-938)*

**935.** **ಚತುರ್ವಿಂಶತಿರೂಪಾಯ ನಮಃ**

ಪರಮಾತ್ಮನು ಸೃಷ್ಟಿಯಲ್ಲಿ ತನ್ನನ್ನು ತಾನೇ ಸಂಕಲ್ಪಮಾತ್ರದಿಂದ ವಿಭಾಗಿಸಿಕೊಂಡನು. ಈ ವಿಭಾಗಗಳಿಂದ ಜೀವಿ - ಆತ್ಮಗಳನ್ನೂ, ಜಗತ್ತನ್ನೂ, ಶರೀರಗಳನ್ನೂ ಯೋಜಿಸಿ ಸಂಸಾರ ಸಾಗರದಲ್ಲಿ ನಿರಂತರ ಆತ್ಮಗಳು ಕಾಲಯಾಪನ ಮಾಡುವ ಹಾಗೆ ಮಾಡಿದನು. ಇದೇ ಅವನ ಸೃಷ್ಟಿಯ ಜೀವಾಳ - ಈ ಇಪ್ಪತ್ತು ನಾಲ್ಕು ತತ್ತ್ವಗಳು ಈ ರೀತಿ ಇವೆ.

1. ಪಂಚಮಹಾಭೂತಗಳು - ಪೃಥಿವಿ, ಆಪಃ, ತೇಜಸ್ಸು, ವಾಯು, ಆಕಾಶ.
   (ಪೃಥಿವ್ಯಾಪಸ್ತೇಜೋವಾಯುರಾಕಾಶ)
2. ಪಂಚತನ್ಮಾತ್ರೆಗಳು - ಗಂಧ, ರಸ, ರೂಪ, ಸ್ಪರ್ಶ, ಶಬ್ದ
   (ಶಬ್ದಸ್ಪರ್ಶರೂಪರಸಗಂಧ)
3. ಪಂಚಜ್ಞಾನೇಂದ್ರಿಯಗಳು - ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ
   (ತ್ವಕ್ ಚಕ್ಷು ಶ್ರೋತ್ರ ಜಿಹ್ವಾ ಘ್ರಾಣ)
4. ಪಂಚಕರ್ಮೇಂದ್ರಿಯಗಳು - ವಾಕ್ಕು, ಕೈ, ಕಾಲು, ಜಲದ್ವಾರ, ಮಲದ್ವಾರ
   (ವಾಕ್ ಪಾಣಿ ಪಾದ ಪಾಯು ಉಪಸ್ಥ)
5. ಅಂತಃಕರಣಗಳು ನಾಲ್ಕು - ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ.
   (ಮನೋಬುದ್ಧ್ಯಹಂಕಾರಚಿತ್)

ಮೇಲಿನ ಐದೂ ಸೇರಿದರೆ 24 ತತ್ತ್ವಗಳಾಗುತ್ತವೆ. ಈ 24 ರೂಪಗಳು ಪರಮಾತ್ಮನು ತನ್ನನ್ನೇ ವಿಭಾಗಿಸಿಕೊಂಡ 24 ಮೂಲ ತತ್ತ್ವಗಳು. ಅದರಿಂದ ಅವನನ್ನು ಚತುರ್ವಿಂಶತಿರೂಪನೆಂದು ನಮಸ್ಕರಿಸುತ್ತೇವೆ.

**936. ಪಂಚವಿಂಶತಿಮೂರ್ತಯೇ ನಮಃ**

ಪರಮಾತ್ಮನು ಇಪ್ಪತ್ತೈದು ಅಂಶಗಳ ಮೂರ್ತಿಯು. ಮೇಲೆ ಹೇಳಿದ ಪಂಚಮಹಾಭೂತಗಳು, ಪಂಚತನ್ಮಾತ್ರೆಗಳು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ನಾಲ್ಕು ಅಂತಃಕರಣಗಳು = 24ರ ಜೊತೆಗೆ ಆತ್ಮನನ್ನು ಒಡಗೂಡಿಸಿ ಶರೀರದೊಳಗೆ ಇರಿಸುತ್ತಾನೆ. ಆದ್ದರಿಂದ ದೇಹ, ಇಂದ್ರಿಯಗಳು, ಮನಬುದ್ಧ್ಯಹಂಕಾರ ಚಿತ್ತಗಳು ಆತ್ಮ ಸೇರಿ 25 ಮೂಲ ಅಂಶಗಳಾದ್ದರಿಂದ ಅವನು ಪಂಚವಿಂಶತಿ ಮೂರ್ತಿ ಎಂದಾಯಿತು.

ಆ ಆತ್ಮನೊಡನೆ ಇಂದ್ರಿಯಗಳು (10), ಮನೋಬುದ್ಧಿ ಅಹಂಕಾರ ಚಿತ್ (4) ಪಂಚತನ್ಮಾತ್ರೆಗಳು (5) ಸೇರಿ ದೇಹದಿಂದ ದೇಹಕ್ಕೆ ಕಾಲಯಾನದಲ್ಲಿ ಕಲ್ಪಾದಿಯಿಂದ ಕಲ್ಪಾಂತದ ವರೆಗೆ ಅಥವಾ ಭಗವಂತನನ್ನು ಸೇರುವವರೆಗೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಪುನರಾವೃತ್ತಿರಹಿತ ಸ್ಥಾನವನ್ನು ಪಡೆಯುವವರೆಗೆ ದೇಹಗಳನ್ನು ಬದಲಾಯಿಸುತ್ತಿರುತ್ತವೆ. ಇದು ಭಗವಂತನ ನಿಯಮ - ಪಂಚವಿಂಶತಿಮೂರ್ತಿಯಾಗಿ ಹೊರಗೆ 26ನೆಯವನಾಗಿ ನಿಂತು ನಡೆಸುತ್ತಿರುತ್ತಾನೆ.

ಪಂಚವಿಂಶತಿ ರೂಪನೇ ಅವನು, ಅವನಿಗೆ ನಮಸ್ಕಾರಗಳು.

**937. ಷಡ್ವಿಂಶಕಾತ್ಮನೇ ನಮಃ**

ಪರಮಾತ್ಮನನ್ನು ಆತ್ಮದ ಜೊತೆಯಲ್ಲಿಯೇ ಇರುವ (ಅಂಶಗಳು ಒಟ್ಟು 25) ಅಂಶಗಳ ಜೊತೆಗೆ ಸೇರಿಸಿದಾಗ ಅವನು ಷಡ್ವಿಂಶತಿ ರೂಪ - ಷಡ್ವಿಂಶಕಾತ್ಮನಾಗುತ್ತಾನೆ. ಅಥವಾ,

ಮಹತ್ ತತ್ತ್ವವು ಸೇರಿ 26 ತತ್ತ್ವವಾಗುತ್ತದೆ. ಪರಮಾತ್ಮನು ತನ್ನ ಕ್ರೀಡೆಗಾಗಿ ಈ ರೂಪವನ್ನು [illegible]ತ್ತಾನೆ. ಸಂಸಾರಸಾಗರದಲ್ಲಿ ತಾನು ಹೊರಗೆ ನಿಂತು ಉಳಿದ ಅಂಶಗಳನ್ನು ತೇಲಿಸಿ, ಮುಳುಗಿಸಿ ಕಾಲಯಾಪನ ಮಾಡುತ್ತಾನೆ.

**938. ಸಪ್ತವಿಂಶತಿಕಾತ್ಮನೇ ನಮಃ**

ಮೇಲೆ ಹೇಳಿದಂತೆ -

ಪಂಚಮಹಾಭೂತಗಳು (5), ಪಂಚತನ್ಮಾತ್ರೆಗಳು (5), ಪಂಚಜ್ಞಾನೇಂದ್ರಿಯಗಳು (5), ಪಂಚಕರ್ಮೇಂದ್ರಿಯಗಳು (5), ನಾಲ್ಕು ಅಂತಃಕರಣಗಳು (4), ಆತ್ಮ (1), ಮಹತ್ತತ್ತ್ವ (1), ಕಾಲ (1) ಅಥವಾ ಅವನೇ (1) ಸೇರಿದರೆ - ಸಪ್ತವಿಂಶತಿಕಾತ್ಮನು. ಇಂತಹ ಅಪ್ರತಿಮ ಪರಮಾತ್ಮನಿಗೆ ನಮಸ್ಕಾರಗಳು. ಇಲ್ಲಿಯೂ ಕಾಲನನ್ನೇ ಇವಕ್ಕೆ ಸೇರಿಸಿ, ತಾನೇ ಹೊರಗುಳಿಯುತ್ತಾನೆ.

*ಧರ್ಮಾರ್ಥಕಾಮಮೋಕ್ಷಾಯ ವಿಮುಕ್ತಾಯ ನಮೋ ನಮಃ ।*
*ಭಾವಶುದ್ಧಾಯ ಸಿದ್ಧಾಯ ಸಾಧ್ಯಾಯ ಶರಭಾಯ ಚ ॥158॥*

*(939-944)*

**939. ಧರ್ಮಾರ್ಥಕಾಮಮೋಕ್ಷಾಯ ನಮಃ**

ಧರ್ಮಾರ್ಥ ಕಾಮ ಮೋಕ್ಷಗಳು ಚತುರ್ವಿಧ ಫಲಗಳು. ಪ್ರತಿಯೊಂದು ಜೀವಿಯೂ ಇವನ್ನೇ ತಮ್ಮ ಆಧಾರ ಅಪೇಕ್ಷೆಯಾಗಿ ಭಗವಂತನನ್ನು ಪ್ರಾರ್ಥಿಸುತ್ತದೆ. ಏನೇ ಯಾವ ರೀತಿಯ ಅಪೇಕ್ಷೆಯೇ ಆದರೂ ಈ ನಾಲ್ಕರಲ್ಲಿ ಒಂದಾಗಿ ವಿಭಾಗಿಸಲ್ಪಡುತ್ತದೆ.

ಈ ನಾಲ್ಕೂ ಸಹ ಪರಮಾತ್ಮನೇ ಆಗಿರುತ್ತಾನೆ. ಈ ಫಲಗಳನ್ನು ಪಡೆದರೆ ಪರಮಾತ್ಮನನ್ನೇ ಪಡೆದ ಹಾಗಾಗುತ್ತದೆ.

ಧರ್ಮ - ಎಂದರೆ ಇರುವಿಕೆ, ಸ್ವಭಾವ ಜನ್ಯವಾಗಿ ಇರುವುದೇ ಧರ್ಮ. ಯಾವ ಸ್ವಭಾವವು ಪರಮಾತ್ಮನ ಕೃಪೆಗೆ ಪಾತ್ರವಾಗುವುದೋ ಅದೇ ಸದ್ಧರ್ಮ, ಉಳಿದದ್ದೆಲ್ಲವೂ ಅಧರ್ಮ.

ಅರ್ಥ - ಎಂದರೆ ಶ್ರೀ ಸಂಪತ್ತು, ಧನಮಾತ್ರವೇ ಅಲ್ಲ. ಪರಮಾತ್ಮನಿಗೆ ಪ್ರಿಯವಾದ ಸಾತ್ವಿಕವಾಗಿ ನಿಸ್ಪೃಹತೆ, ತ್ಯಾಗದಿಂದ ಸಂಪಾದಿಸಿದ ಅರ್ಥವೇ ನಿಜವಾದ ಅರ್ಥ - ಸಂಪತ್ತು, ವಿದ್ಯಾ ಸಂಪತ್ತು, ಗುಣ ಸಂಪತ್ತು, ವಿವೇಕ ಬುದ್ಧಿ ಸಂಪತ್ತು, ಇತ್ಯಾದಿ, ಇವೇ ಪರಮಾತ್ಮನ ಭಾವಗಳು.

ಕಾಮ - ಇಚ್ಛಿಸಿ ಪಡೆಯುವುದು ಎಲ್ಲ ಕಾಮವೇ. ಮನಸ್ಸು ಮತ್ತು ಬುದ್ಧಿಗೆ ಇಚ್ಛಿಸುವುದು, ವಿವೇಕತೆಯಿಂದ ಸಾತ್ವಿಕ ಗುಣಗಳಿಂದ ಕೂಡಿದ ಇಚ್ಛೆಗಳನ್ನು ನೇರವೇರಿಸಿಕೊಳ್ಳುವುದೇ ಕಾಮ (ಸತ್ಕಾಮ) ಇದು ಪರಮಾತ್ಮನಿಗೆ ಪ್ರಿಯವಾಗುತ್ತವೆ. ಆಗ ಕಾಮವೇ ಅವನಾಗುತ್ತಾನೆ. ಕಾಮ - ಎಂದರೆ ಮನ್ಮಥ - ಪರಮಾತ್ಮ.

ಮೋಕ್ಷ - ಪರಮಾರ್ಥದಲ್ಲಿ ಪರಮಾತ್ಮನನ್ನು ಸೇರುವುದೇ ಮೋಕ್ಷ, ಪರಮಶಾಂತಿಯನ್ನು ಪಡೆಯುವುದೇ ಮೋಕ್ಷ. ಈ ನಾಲ್ಕೂ ಸಹ ಚತುರ್ವಿಧ ಪುರುಷಾರ್ಥಗಳು - ಇವುಗಳ ಮೂಲ ರೂಪಕ್ಕೆ, ಭಾವಕ್ಕೆ, ಮುಟ್ಟಿದರೆ ಅದು ಪರಮಾತ್ಮನೇ ಆಗಿರುತ್ತದೆ. ಆದರಿಂದ ಇವೇ ಪರಮಾತ್ಮನಾಗಿವೆ - ಅವನನ್ನು ಧರ್ಮಾರ್ಥಕಾಮಮೋಕ್ಷಾಯ ನಮಃ ಎಂದು ನಿರ್ದೇಶಿಸುತ್ತೇವೆ.

**940. ವಿಮುಕ್ತಾಯ ನಮಃ**

ಭವಸಾಗರದಿಂದ ಬಿಡುಗಡೆ ಮಾಡುವವನು - ಪರಮಾತ್ಮ - ಇಂತಹ ಬಿಡುಗಡೆಗಳನ್ನು ಮೀರಿದವನು - ಪರಮಾತ್ಮ. ಯಾವ ರೀತಿಯ ಬಂಧನವೇ ಇಲ್ಲದವನು ಪರಮಾತ್ಮ - ಅವನು ವಿಮುಕ್ತನು.

ಆತ್ಮಗಳಂತೆ ಅವನು ಸಂಸ್ಕಾರಗಳಿಂದ ಮುಚ್ಚಲ್ಪಡುವುದಿಲ್ಲ. ಅದರಿಂದ ಅವನು ವಿಮುಕ್ತನು.

ಆತ್ಮನು ಭವಸಾಗರದಿಂದ ಬಿಡುಗಡೆ ಹೊಂದಿ, ಇಂದ್ರಿಯಗಳು, ಅವುಗಳ ಅಧಿ ದೇವತೆಗಳು - ಸಂಸ್ಕಾರಗಳು, ವಾಸನೆಗಳು, ಮನೋಬುದ್ಧ್ಯಹಂಕಾರ ಚಿತ್ತಗಳು - ಮಹತ್ ತತ್ತ್ವಗಳಿಂದ ಕ್ರಮವಾಗಿ ಬಿಡುಗಡೆ ಹೊಂದಿ ಪರಮಾತ್ಮನನ್ನು ಆತ್ಮವು ತಾನೇ ತಾನಾಗಿ ಸೇರಿದಾಗ ಅದು ಪರಮಾತ್ಮನ ಸ್ವರೂಪವನ್ನೇ ಪಡೆಯುತ್ತದೆ. ಆಗ ಅದು ನಿಜವಾಗಿ ವಿಮುಕ್ತಿಯನ್ನು ಪಡೆಯುತ್ತದೆ - ಅಥವಾ ವಿಮುಕ್ತ ಎಂದಾಗುತ್ತದೆ.

**941. ಭಾವಶುದ್ಧಾಯ ನಮಃ**

ಪರಮಾತ್ಮನ ಭಾವಗಳು ಪರಿಶುದ್ಧವಾದವು. ಪವಿತ್ರವಾದುವುಗಳು. ಭಾವಗಳೆಂದರೆ ರೂಪ, ಗುಣಗಳು.

ಭಾವ ಎಂದರೆ ಸ್ಥಿತಿ, ಮನೋವೃತ್ತಿ, ಪ್ರೇಮ, ರಸ, ಇತ್ಯಾದಿ.

ಪರಮಾತ್ಮನು ಯಾವ ರೀತಿ ವಿಮರ್ಶಿಸಿದರೂ ಪರಿಶುದ್ಧನು.

ಅಥವಾ

ಆತ್ಮನೂ ಸಹ ಪರಮಾತ್ಮನಿಂದಲೇ ಬಂದದ್ದರಿಂದ ಶುದ್ಧ ಭಾವದವನಾಗಿರುತ್ತಾನೆ. ಆದರೆ ಆತ್ಮಕ್ಕೆ ಮನೋಬುದ್ಧಿ - ಅಹಂಕಾರ, ಚಿತ್ತ, ಇಂದ್ರಿಯಗಳು ಮತ್ತು ಸಂಸ್ಕಾರಗಳು - ಇವುಗಳ ಲೇಪನವಾಗಿರುವುದರಿಂದ ಅದರ ಪರಿಶುದ್ಧತೆಯು ಮುಚ್ಚಿಹೋಗಿರುತ್ತದೆ. ಸಾಲದ್ದಕ್ಕೆ ಪ್ರಕೃತಿ, ಪುರುಷ, ಮಾಯೆ, ಸಂಸಾರ ಸಾಗರಗಳ ಬಂಧನಕ್ಕೆ ಸಿಲುಕುವುದರಿಂದ ಶುದ್ಧಭಾವವು ಮುಚ್ಚಿಹೋಗಿರುತ್ತದೆ.

ಆತ್ಮನ ಶುದ್ಧತೆ ನೋಡಬೇಕಾದರೆ, ಪರಮಾತ್ಮನ ಕೃಪೆ, ಸಂಸ್ಕಾರ, ಬೇಕೇ ಬೇಕು. ಅದರ ಭಾವಶುದ್ಧತೆಯು ಪರಮಾತ್ಮನನ್ನು ಅವಲಂಬಿಸಿರುತ್ತದೆ, ಆದರೆ ಪರಮಾತ್ಮನದು ಸ್ವತಂತ್ರವಾದ್ದರಿಂದ ಅವನು ನಿರಂತರ ಭಾವಶುದ್ಧನಾಗಿರುತ್ತಾನೆ - ಭಾವಶುದ್ಧಾಯ ನಮಃ ಎಂದರೆ ಅವನಿಗೆ ಸೇರುತ್ತದೆ.

**942. ಸಿದ್ಧಾಯ ನಮಃ**

ಪರಮಾತ್ಮನು ಸದಾ ಸಿದ್ಧನು, ಪರಿಪೂರ್ಣನು. ಅವನು ಪಡೆಯಬೇಕಾದ್ದು ಏನೂ ಇಲ್ಲ. ಅವನು ಪಡೆಯದಿರುವುದು ಯಾವುದೂ ಇಲ್ಲ. ಸರ್ವರೀತಿಯಲ್ಲಿಯೂ ಅವನು ಪರಿಪೂರ್ಣನು ಮತ್ತೆ ತಾನೇ ಸೃಷ್ಟಿಸಿದ ಸಕಲ ವಸ್ತು - ಚರಾಚರ ವಸ್ತುಗಳಲ್ಲಿಯೂ ಮತ್ತು ಸಕಲ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಲ್ಲಿರುವ ಜೀವಕೋಟಿಯ ಪ್ರತಿಯೊಂದು ಜೀವಾತ್ಮ

(ಎಂದರೆ ಆತ್ಮ)ನಲ್ಲಿಯೂ ಪರಿಪೂರ್ಣನಾಗಿಯೇ ನೆಲಸಿರುತ್ತಾನೆ. ಅವನು ಯಾವುದರಲ್ಲಿಯೂ ಅಪೂರ್ಣನಲ್ಲವೇ ಅಲ್ಲ. ಇದು ಶತಸಿದ್ಧ. ಅವನು ಯಾವುದನ್ನೇ ಸೃಷ್ಟಿಸಲಿ, ಕಾರ್ಯಕಾರಣರೂಪನಾಗಿಲಿ, ಅದರಲ್ಲಿಯೇ ಒಳಗೂ, ಹೊರಗೂ ಪರಿಪೂರ್ಣನಾಗಿಯೇ ಇರುತ್ತಾನೆ. ಎಲ್ಲೆಲ್ಲೂ ಹರಡಿರುವುದರಿಂದ ಎಲ್ಲಿಂದ ಎಲ್ಲಿಯವರೆಗೆ ಗಣನೆಗೆ ತೆಗೆದುಕೊಂಡರೂ ಆ ಭಾಗವು ಪೂರ್ಣವಾಗಿಯೇ ಇರುತ್ತದೆ. ಪೂರ್ಣನಾದರೂ ಪೂರ್ಣನೇ. ಅಪೂರ್ಣನಾದರೂ ಪೂರ್ಣನೇ. ಅವನೇ ಸಿದ್ಧ ಸ್ವರೂಪನಾದ್ದರಿಂದ ಈ ಪರಿಪೂರ್ಣತೆ ಸಾಧ್ಯ. ಅಥವಾ

ಸಿದ್ಧ - ಯೋಗಶಕ್ತಿಯುಳ್ಳವನು, ತ್ರಿಕಾಲಜ್ಞಾನಿ, ಮಂತ್ರದಿಂದ ಪರಿಪೂರ್ಣನಾಗುವವನು (ಪ್ರಾರ್ಥಿಸುವವರಿಗಾಗಿ).

ಸಿದ್ಧ - ನಿಶ್ಚಯಮಾಡಲ್ಪಟ್ಟವನು, ವಾದ, ವಿವಾದಗಳಿಂದ, ನಿಶ್ಚಯಿಸಲ್ಪಟ್ಟವನು.

ವೇದ, ಪುರಾಣಗಳಿಂದ ಹೊಗಳಲ್ಪಟ್ಟವನು - ನೇತಿ, ನೇತಿ ಎಂದು ಕರೆಯಿಸಿಕೊಳ್ಳುವವನು.

**943. ಸಾಧ್ಯಾಯ ನಮಃ**

ಸಾಧ್ಯ - ಬಹಳ ಪ್ರಾರ್ಥನೆ, ಧ್ಯಾನ, ಜಪ, ತಪ, ಭಜನೆ ಮುಂತಾದ ಮಾರ್ಗಗಳಿಂದ ಭಕ್ತಿಯಿಂದ ಪಡೆಯಲು ಸಾಧ್ಯವಾದವನು. ಭಕ್ತರಿಂದ ಮಾತ್ರ ತಿಳಿಯಲು ಸಾಧ್ಯನು.

ಅಥವಾ

ಸಾಧ್ಯರು - ದೇವತೆಗಳು, ಅಂತರಿಕ್ಷದಲ್ಲಿ ವಾಸಮಾಡುವ ದೇವತೆಗಳು.

ಅಥವಾ

ಸಾಧ್ಯ - ಸಾಧನೆ, ಉಪಾಯಗಳಿಂದ ಹೊಂದಲ್ಪಡುವವನು - ಪರಮಾತ್ಮ.

**944. ಶರಭಾಯ ನಮಃ**

ಶರಭ - ಸಿಂಹಕ್ಕಿಂತಲೂ ಬಲಿಷ್ಠನು, ಪರಮಾತ್ಮನು ಸಕಲ ಪ್ರಾಣಿವರ್ಗಗಳಲ್ಲಿಯೂ ಬಲಿಷ್ಠನಾದವನು -

- ಏಕೆ ಸಕಲ ಜೀವಕೋಟಿಗೂ ಬಲಿಷ್ಠನಾದವನು - ಸಕಲ ದೇವ ದೇವತೆಗಳಿಗೂ ಬಲಿಷ್ಠನು.

ಸೃಷ್ಟಿಯನ್ನೇ ಮಾಡುವ ಬ್ರಹ್ಮನಿಗಿಂತಲೂ ಸರ್ವಶ್ರೇಷ್ಠನು - ಇವನಿಗಿಂತ ಶ್ರೇಷ್ಠರು ಇಲ್ಲವೇ ಇಲ್ಲ.

*ಪ್ರಬೋಧಾಯ ಸುಬೋಧಾಯ ನಮೋ ಬುದ್ಧಿಪ್ರಿಯಾಯ ಚ ।*
*ಸ್ನಿಗ್ಧಾಯ ಚ ವಿದಗ್ಧಾಯ ಮುಗ್ಧಾಯ ಮುನಯೇ ನಮಃ ।।159।।*
*(945-951)*

**945.** ಪ್ರಬೋಧಾಯ ನಮಃ

ಪ್ರಬೋಧ - ಎಂದರೆ ಎಚ್ಚರವಾಗಿರುವವನು, ನಿಜವಾದ ಜ್ಞಾನವನ್ನು ತಿಳಿಸುವವನು / ಅರಳಿಸುವವನು.

ಪರಮಾತ್ಮನು ನಿರಂತರವಾಗಿ ಎಚ್ಚರವಾಗಿಯೇ ಇರುತ್ತಾನೆ. ಸದಾ ನನ್ನನ್ನೇ ಎಲ್ಲರೂ ಅವಲಂಬಿಸಿರುವುದರಿಂದ ನಾನು ಕಾರ್ಯ, ಕಾರಣ, ಕರ್ಮಗಳನ್ನು ಮಾಡುತ್ತಲೇ ಇರುತ್ತೇನೆ ಎಂದು ಭಗವಂತನು ಗೀತೆಯಲ್ಲಿ ಹೇಳಿದ್ದಾನೆ.

ಭಗವಂತನು ತನ್ನ ಅಪಾರ ಕರುಣೆ, ಕೃಪೆ, ದಯೆಯಿಂದ ಆತ್ಮಗಳನ್ನು ಭವಸಾಗರದಿಂದ ಪಾರುಮಾಡುತ್ತಾನೆ. ಆತ್ಮಗಳಿಗೆ ಜ್ಞಾನ ನೀಡುವುದರಿಂದ ಅವನು - ಪ್ರಬೋಧನು - ಅಂದರೆ ಪ್ರಬೋಧಾಯ ನಮಃ ಎಂದರೆ ಅವನಿಗೇ ಸಲ್ಲುತ್ತದೆ.

**946.** ಸುಬೋಧಾಯ ನಮಃ

ಸುಬೋಧ - ಎಂದರೆ ಬಹಳ ಸುಲಭವಾಗಿ ತಿಳಿಯುವಂತಹವನು. ಪರಮಾತ್ಮನ ಕರುಣೆಯಿಂದಲೇ ಅತಿ ಸುಲಭವಾಗಿ ಅವನನ್ನು ತಿಳಿಯಲು ಸಾಧ್ಯ. ಅವನ ಕೃಪೆಯಾಗಿದೆ ಎಂದು ತಿಳಿಯಲೂ ಸಹ ಅವನ ದಯೆ ಬೇಕು.

ಎಂತಹ ಕಷ್ಟಸಾಧ್ಯವಾದ ಕ್ರಿಯೆಯನ್ನು ಮಾಡಲು ಸುಲಭ ರೀತಿಯಲ್ಲಿ ಪ್ರೇರಣೆಮಾಡುವವನೇ ಪರಮಾತ್ಮ - ಸುಬೋಧನು.

ಸು - ಒಳ್ಳೆಯದನ್ನು, ಬೋಧ - ಪ್ರೇರಿಸುವವನು.

ಸುಬೋಧ - ಆತ್ಮಜ್ಞಾನ, ಪರಮಾತ್ಮಜ್ಞಾನ, ಸಂಸಾರದ ನಶ್ವರತೆ, "ಬ್ರಹ್ಮ ಸತ್ಯಂ ಜಗನ್ಮಿಥ್ಯಂ, ಜೀವೋ ಬ್ರಹ್ಮಸ್ಸನಾತನಃ", ಎಂದು "ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ" ಎಂದು ಶಂಕರರ ಮೂಲಕ ಹೇಳಿರುವವನು - ಸುಬೋಧಾಯ ನಮಃ ಎಂದರೆ ಪರಮಾತ್ಮನೇ - ಶಂಕರರೇ ಪರಮಾತ್ಮನ ಅಪರಾವತಾರ.

**947.** ಬುದ್ಧಿಪ್ರಿಯಾಯ ನಮಃ

ಬುದ್ಧಿ - ಎಂದರೆ ತಿಳಿವಳಿಕೆ, ಯಾವುದು ಸರಿ, ಯಾವುದು ತಪ್ಪು ಎಂದು ನಿರ್ಧರಿಸುವ ಶಕ್ತಿ - ಧೀ ಶಕ್ತಿ - ವಿವೇಕತೆ.

ಇಂತಹ ಬುದ್ಧಿ - ವಿವೇಕ ಶಕ್ತಿಗೆ ಪ್ರಿಯನು - ಬೇಕಾದವನು - ಬುದ್ಧಿಯನ್ನು ಕೊಡುವವನು, ಪ್ರೇರಿಸುವವನು ಅವನೇ! ಬುದ್ಧಿಗೆ ಬೇಕಾದ ಆಪ್ತಬಂಧು.

*ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।*
*ಮನಸಸ್ತು ಪರಾಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥*

*(ಶ್ಲೋಕ 42, ಅಧ್ಯಾಯ 3, ಗೀತಾ)*

ಎಂದರೆ ಬುದ್ಧಿಗೆ ಪರಮಾತ್ಮಜ್ಞಾನ, ವಿವೇಕತೆ, ಆತ್ಮಜ್ಞಾನಗಳನ್ನು ಪ್ರೇರಿಸಿ ಪ್ರಿಯನಾಗುವವನು - ಪರಮಾತ್ಮನೇ! ಅಂದರೆ ಬುದ್ಧಿಪ್ರಿಯಾಯ ನಮಃ ಎಂಬುವನು.

**948. ಸ್ನಿಗ್ಧಾಯ ನಮಃ**

ಸ್ನಿಗ್ಧ - ಮನೋಹರನಾದ, ರಮ್ಯವಾದ, ಪ್ರೇಮದಿಂದ, ಪ್ರೀತಿಯಿಂದ ಕೂಡಿದವನು - ಇವುಗಳಲ್ಲಿ ಇವನನ್ನು ಮೀರಿಸುವವರು ಯಾರೂ ಇಲ್ಲ.

ಪರಮಾತ್ಮನೇ ಅತಿ ಸ್ನಿಗ್ಧನು.

ಸಕಲ ಜೀವಿಗಳಿಗೂ, ಚರಾಚರ ವಸ್ತುಗಳಿಗೂ, ಸಕಲ ಸೃಷ್ಟಿಯ ವಸ್ತುಗಳಿಗೂ ದೇವ ದೇವತೆಗಳಿಗೂ ಬಹಳ ಬೇಕಾದವನು - ಪ್ರೀತಿ, ಸಾಂತ್ವನವನ್ನು ದಯಪಾಲಿಸುವವನು ಇವನೇ! ಇವನೇ ಸ್ನಿಗ್ಧನು - ಅದರಿಂದ ಸ್ನಿಗ್ಧಾಯ ನಮಃ.

**949. ವಿದಗ್ಧಾಯ ನಮಃ**

ವಿದಗ್ಧ - ವಿದ್ವಾಂಸನು - ಪಚನವಾದವನು, ಸುಟ್ಟು ಹೋದವನು, ಅಗ್ನಿ ಸ್ವರೂಪನು.

ಪರಮಾತ್ಮನು ಸಕಲವನ್ನು ವೈಶ್ವಾನರನಾಗಿ ಪಚನಮಾಡುತ್ತಾನೆ.

ವಿದಗ್ಧಾ - ಚತುರಶೀಲನು.

ಅಗ್ನಿ ಸ್ವರೂಪದಲ್ಲಿ ಸಕಲವನ್ನು ಭಸ್ಮಮಾಡಿಬಿಡುವವನು - ಸುಟ್ಟು ಹೋದ ವಸ್ತುಗಳೂ ಸಹ ಅಗ್ನಿಯ ಸ್ಪರ್ಶ ಮಾತ್ರದಿಂದ ಪವಿತ್ರತೆಯನ್ನು ಪಡಯುತ್ತವೆ. ಸಕಲವೂ ಪಂಚಮಹಾಭೂತಗಳ ಪರಿವರ್ತಿತ ರೂಪಗಳೇ ಆದ್ದರಿಂದ ಸಕಲವನ್ನೂ ಪರಮಾತ್ಮನೆಂದೇ ತಿಳಿಯಬೇಕು. ಧಗ್ಧಮಾಡಿ ಪವಿತ್ರತೆಯನ್ನುಂಟುಮಾಡುವುದರಿಂದ ಅವನಿಗೆ ವಿದಗ್ಧಾಯ ನಮಃ ಎಂದು ನಮಸ್ಕರಿಸುತ್ತೇವೆ.

**950. ಮುಗ್ಧಾಯ ನಮಃ**

ಮುಗ್ಧನು - ಎಲ್ಲವನ್ನೂ ತಿಳಿದೂ ತಿಳಿಯದಂತೆ ಸೌಮ್ಯವಾಗಿ ವರ್ತಿಸುವವನು.

- ಸುಂದರನು, ಮೋಹಕನು - ಸರಳ ಮನಸ್ಸಿನವನು.

ಪರಮಾತ್ಮನು ಅತಿ ಸರಳ ಮನಸ್ಸಿನಿಂದ ಶತ್ರುಗಳನ್ನೂ ಸಹ ಪರಿಪಾಲಿಸುವವನು - ಎಂದರೆ ಅವರಿಗೆ ಮುಕ್ತಿಯನ್ನು ದಯಪಾಲಿಸುವವನು - ಮುಗ್ಧನು.

ಮುಗ್ಧ - ಸಮಾನ ಪ್ರೇಮ, ಕರುಣೆ, ದಯೆ, ಕೃಪೆಯನ್ನು ಕೊಡುವವನು.

**951. ಮುನಯೇ ನಮಃ**

ಮುನಿ - ತಪಸ್ವಿಯು, ನರನಾರಾಯಣ ರೂಪದಲ್ಲಿ, ಶಿವ ಪಾರ್ವತಿಯ ರೂಪದಲ್ಲಿ, ಬ್ರಹ್ಮನ ರೂಪದಲ್ಲಿ ತಪಸ್ಸು ಮಾಡುವವನು -

ಮುನಿ - ಮೌನವನ್ನು ತಾಳಿದವನು - ಮುನಿ.

- ಮನಸ್ಸನ್ನು ನಿಗ್ರಹದಲ್ಲಿ ಇಟ್ಟುಕೊಂಡಿರುವವನು - ಮುನಿ.

ಮುನಿಗಳಿಗೆ ಸಿದ್ಧಿಯನ್ನು ಕೊಡುವ ಮುನಿಯು, ಸಾತ್ವಿಕ ಭಾವವನ್ನು ಹೊಂದಿದ ರೂಪವುವನು.

*ಪ್ರಿಯಶ್ರವಾಯ ಶ್ರಾವ್ಯಾಯ ಸುಶ್ರುತಾಯ ಶ್ರುತಾಯ ಚ ।*
*ಗ್ರಹೇಶಾಯ ಮಹೇಶಾಯ ಬ್ರಹ್ಮೇಶಾಯ ನಮೋ ನಮಃ ॥160॥*
*(952-958)*

**952. ಪ್ರಿಯಶ್ರವಾಯ ನಮಃ**

ಪ್ರಿಯ - ಶ್ರವ - ಪ್ರಿಯವಾದದ್ದನ್ನೇ ಕೇಳುವವನು. ಪರಮಾತ್ಮನನ್ನು ಪ್ರೀತಿಯಿಂದ, ಭಕ್ತಿಯಿಂದ, ಶರಣಾಗಿ ಕರೆದರೆ ಬರುತ್ತಾನೆ. ನಮ್ಮ ಕರೆಯನ್ನು ಕೇಳುತ್ತಾನೆ. ಕೇಳಿದಾಕ್ಷಣ ಬರುತ್ತಾನೆ. ಎಲ್ಲಿ ಭಕ್ತಿ, ಶ್ರದ್ಧೆ ಇರುವುದೋ ಅಲ್ಲಿ ಪರಮಾತ್ಮನು ತಾನೇ ಆವಿರ್ಭವಿಸಿ ವಾಸಮಾಡುತ್ತಾನೆ. ಎಲ್ಲಿ ಭಜನೆ, ಪೂಜೆ, ಆಳವಾದ ಶ್ರದ್ಧೆ, ಭಕ್ತಿಯಿಂದ ನಡೆಯುತ್ತವೆಯೋ ಅಲ್ಲಿ ಪರಮಾತ್ಮನು ಕೇಳಲು ಬರುತ್ತಾನೆ.

ಒಬ್ಬರನ್ನೊಬ್ಬರು ಪ್ರಿಯವಾಗಿ ಭಾವಿಸಿದರೆ ಅಲ್ಲಿ ಅವರ ಅಂತಃಕರಣದಲ್ಲಿರುವ ಚಿತ್ ಶಕ್ತಿಯು ಮನಸ್ಸಿನಲ್ಲಿ ಪ್ರಕಟವಾಗಿ ಶಾಂತಿ, ಸಮಾಧಾನ, ಜ್ಞಾನವನ್ನು ಕೊಡುತ್ತದೆ. ಆಗ ಅವರಲ್ಲಿ ಪರಮಾತ್ಮನು ಪ್ರಿಯಶ್ರವನಾಗಿ ಇರುತ್ತಾನೆ.

ಹೇಗೆ ನಮ್ಮವರು ನಮಗೆ ಪ್ರಿಯವೋ ಹಾಗೆಯೇ ಆತ್ಮಗಳು ಪರಮಾತ್ಮನಿಂದ ಬಂದವಾದ್ದರಿಂದ ಅವನಿಗೆ ಪ್ರಿಯರು. ಹೇಗೆ ನಮ್ಮವರು ಏನೇ ಮಾಡಿದರೂ ಅವರನ್ನು ಕ್ಷಮಿಸಿ ಪ್ರೀತಿಸುವೆವೋ ಹಾಗೆಯೇ ಪರಮಾತ್ಮನು ದುಷ್ಟರನ್ನೂ ಸಹ ಪ್ರೀತಿಸಿ ತನ್ನವನನ್ನಾಗಿಸಿಕೊಳ್ಳುತ್ತಾನೆ. ಅವನು

ಹೇಗೆಯಾದರೂ ಪ್ರಿಯರನ್ನಾಗಿಸಿಕೊಳ್ಳುತ್ತಾನೆ. ಅವನಷ್ಟು ಕರುಣಾಳುಗಳು ಯಾರೂ ಇಲ್ಲ. ಅವನೇ ಗತಿ. ಭರ್ತಾ, ಹರ್ತಾ, ಈಶ್ವರನು, ಎಲ್ಲವೂ ಅವನೇ.

**953. ಶ್ರಾವ್ಯಾಯ ನಮಃ**

ಶ್ರವಣ - ಎಂದರೆ ಕೇಳುವ ವಿಚಾರಗಳು. ಶ್ರಾವ್ಯ - ಎಂದರೆ ಕೇಳಲ್ಪಡುವ ವಸ್ತು. ಕೇಳುವವನು, ಕೇಳಲ್ಪಡುವವನು, ಎಲ್ಲವೂ ಅವನೇ. ಪರಮಾತ್ಮನೇ! ಶ್ರಾವ್ಯನು ಪರಮಾತ್ಮ. ಎಲ್ಲರಿಂದಲೂ ಕೇಳಲ್ಪಡುವವನು ಪರಮಾತ್ಮನೇ!

**954. ಸುಶ್ರುತಾಯ ನಮಃ**

ಸುಲಭವಾಗಿ, ಸಾತ್ವಿಕವಾಗಿ, ಒಳ್ಳೆಯದಾಗಿ ಶ್ರುತ - ಕೇಳಲ್ಪಡುವವನು - ಸುಶ್ರುತನು - ಸೃಷ್ಟಿಯಲ್ಲೆಲ್ಲ ಪರಮೋಚ್ಚ, ಪರಮೋತ್ತಮರಾದ ಸುಶ್ರುತನು - ಪರಮಾತ್ಮನೇ! ಸಕಲ ಚರಾಚರ ವಸ್ತುಗಳು, ಜೀವಕೋಟಿಯ ಪ್ರತಿಯೊಂದು ಜೀವಿಯಿಂದಲೂ ಅತ್ಯಂತ ಆಳದಿಂದ, ಗಹನವಾಗಿ ಅಪೇಕ್ಷಿಸಲ್ಪಡುವವನು - ಪರಮಾತ್ಮನೊಬ್ಬನೇ!! - ಸುಶ್ರುತಾಯ ನಮಃ.

**955. ಶ್ರುತಾಯ ನಮಃ**

ಶ್ರುತ - ಎಂದರೆ ಕೇಳಲ್ಪಡುವವನು, ಸಕಲ ಜೀವಕೋಟಿಯ ಪ್ರತಿ ಆತ್ಮನೂ ಅಪೇಕ್ಷಿಸುವುದು ಸಂಸಾರ ಸಾಗರದಿಂದ ಬಿಡುಗಡೆಯನ್ನೆ! ಅದರಿಂದ ಎಲ್ಲರ ಅಂತಃಕರಣದ ವಾಣಿಯನ್ನು ಕೇಳುವವನು ಪರಮಾತ್ಮನೇ!

ವೇದಗಳಿಂದ ಹೊಗಳಲ್ಪಡುವವನು - ಶ್ರುತನು, ಈತನೇ! ಪರಮಾತ್ಮನೇ!

ಎಲ್ಲರಿಂದ ಕೇಳಲ್ಪಡುವನು ಇವನೇ! ಅದರಿಂದ ಇವನನ್ನು ಶ್ರುತ ಎಂದು ಕರೆಯುತ್ತೇವೆ. ಶ್ರುತಾಯ ನಮಃ ಎಂದು ಇವನನ್ನು ಹೊಗಳುತ್ತೇವೆ.

**956. ಗ್ರಹೇಶಾಯ ನಮಃ**

ಗ್ರಹೇಶ - ಗ್ರಹಗಳಿಗೆ ಒಡೆಯನು. ನವಗ್ರಹಗಳಿಗೆ ಒಡೆಯನು - ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು - 9 ಗ್ರಹಗಳು. ಇವುಗಳಿಗೆ ಆಧಾರಸ್ಥಂಭನು ಪರಮಾತ್ಮನೇ! - ಇವುಗಳ ಸೂತ್ರಧಾರನು ಈತನೇ!

ಮೇರು ಪರ್ವತವನ್ನು ಕೇಂದ್ರವಾಗಿಟ್ಟುಕೊಂಡು ಭೂಮಂಡಲವನ್ನು ನಿರ್ದೇಶಿಸುತ್ತೇವೆ. ಸೂರ್ಯನನ್ನು ಕೇಂದ್ರವಾಗಿಟ್ಟುಕೊಂಡು ಸಕಲ ಭೂಮಂಡಲ, ಗ್ರಹಗಳು ಸುತ್ತುತ್ತಿರುತ್ತವೆ. ಇದೇ ಸೂರ್ಯಮಂಡಲ.

ಧೃವ ನಕ್ಷತ್ರವನ್ನೇ ಕೇಂದ್ರವಾಗಿಟ್ಟುಕೊಂಡು ಸಕಲ ಸೃಷ್ಟಿಯು

ಸಪ್ತದ್ವೀಪಗಳು, ಸಪ್ತ ಸಾಗರಗಳು ಶಿಂಶುಮಾರ ಚಕ್ರವೆನಿಸುವ ಚಕ್ರವಾಗಿ ತಿರುಗುತ್ತಿರುತ್ತವೆ. ಬ್ರಹ್ಮಾಂಡಗಳು ಸುತ್ತುತ್ತಿರುತ್ತವೆ. ಈ ಗ್ರಹ, ಸೃಷ್ಟಿಗಳಿಗೆ ಒಡೆಯನಾಗಿರುವ ಪರಮಾತ್ಮನು ಗ್ರಹೇಶನೆನಿಸುತ್ತಾನೆ. ಎಂದರೆ ಪ್ರತಿಯೊಂದು ಬೃಹತ್ತಿಗೂ ಇನ್ನೊಂದು ಬೃಹತ್ತಿರುತ್ತದೆ. ಆದರೆ ಪರಮಾತ್ಮನಿಗಿಂತ ಬೃಹತ್ತಾದುದು ಇಲ್ಲ. ಇವನೇ ಸಕಲಕ್ಕೂ ಈಶನು.

957. ಮಹೇಶಾಯ ನಮಃ

ಮಹಾ - ಈಶ - ಮಹೇಶನು. ಮಹಾಮಹಿಮನಾದ ಈಶನು - ಮಹನೀಯನೇ - ಮಹೇಶನು. ಸಕಲ ರೀತಿಯಲ್ಲಿಯೂ ಪರಮಾತ್ಮನು ಮಹತೋ ಮಹೀಯಾನ್. ಶಿಂಶುಮಾರ ಚಕ್ರವನ್ನೇ ತಿರುಗಿಸುವಂತಹವನು - ಮಹೇಶನೇ ಹೌದು - ಮಹನೀಯನು - ತತ್ ಕ್ಷಣದಲ್ಲಿಯೇ ವಿರೋಧಾಭಾಸವಾಗುವಂತಹ ಅಣೋರಣೀಯಾನ್ - ಅಣುಮಾತ್ರದವನನು - ಅವನು ಹೇಗಾದರೂ ಇರಬಹುದು - ಆದರೆ ಅವನು ಅವನೇ! ಅವನನ್ನು ಹೀಗೇ ಎಂದೋ ಅಥವಾ ಹಾಗೇ ಎಂದೋ ಅಥವಾ ಹೇಗೇ! ಎಂದೋ ಪ್ರಶ್ನಿಸಲು ಅಥವಾ ಉತ್ತರ ಎಂದು ಒಪ್ಪಿಕೊಳ್ಳಲು ಸಾಧ್ಯವಿಲ್ಲ.

''ಯಥಾ ತಥಾ ಯಥಾ ತಥಾ ತಥೈವ ಕೃಷ್ಣ ಸತ್ವದಾ ।
ಮಯಾ ಸ ದೈವ ಗೀಯತಾಂ ತಥಾ ಕೃಪಾ ವಿಧೇಮತಾಮ್ ।।''

ಎಂದರೇನೆ ಸರಿ. ಆಗ ನಮ್ಮ ಶರಣಾಗತ ಸ್ವಭಾವ ಉದ್ಭವವಾಗುತ್ತದೆ - ಅವನು ಮಹೇಶನೇ ಸರಿ!!

958. ಬ್ರಹ್ಮೇಶಾಯ ನಮಃ

ಸಕಲ ಜೀವಕೋಟಿಯನ್ನು ಮತ್ತು ಸಚರಾಚರ ವಸ್ತುಗಳನ್ನು ಬ್ರಹ್ಮಾಂಡಗಳನ್ನು ಲೋಕಗಳನ್ನು ಸೃಷ್ಟಿಸಿದವನೇ ಬ್ರಹ್ಮ. ಈ ಬ್ರಹ್ಮನಿಗೆ ಒಡೆಯನೆಂದ ಮೇಲೆ ಅವನ ರೂಪ, ರೇಖೆ, ಬಲಾಬಲಗಳು, ಗುಣಾಗುಣಗಳು, ಧೀ, ಶಕ್ತಿ, ಇಚ್ಛಾಶಕ್ತಿ, ಕ್ರಿಯಾಶಕ್ತಿ, ಜ್ಞಾನಶಕ್ತಿಗಳು ಹೇಗಿರಬೇಕು, ಊಹಿಸಲು ಸಾಧ್ಯವೇ??

ಬ್ರಹ್ಮನನ್ನೇ ತನ್ನ ನಾಭೀಕಮಲದಲ್ಲಿ ಪಡೆದ ಮೇಲೆ ಆ ಅನಂತ ಪದ್ಮನಾಭಸ್ವಾಮಿಯು ಹೇಗಿರಬೇಕು??

ವಿಚಿತ್ರ ರೂಪ; ವಿಚಿತ್ರ ಶಕ್ತಿ, ಸಕಲವೂ ವಿಚಿತ್ರವೇ! ಅವನೇ ವಿಚಿತ್ರ! ಸಂಕಲ್ಪಮಾತ್ರದಿಂದ ಎಲ್ಲವನ್ನು ನಡೆಸುವವನು - ವಿಚಿತ್ರವೇ! ಅವನ ವೈಚಿತ್ರವೇ ವೈಚಿತ್ರ!! ಬ್ರಹ್ಮೇಶಾಯ ನಮಃ ಎಂದು ಅವನಿಗೆ ನಮಸ್ಕರಿಸಿದರೆ ಸಮಂಜಸವೇ!

*ಶ್ರೀಧರಾಯ ಸುತೀರ್ಥಾಯ ಹಯಗ್ರೀವಾಯ ತೇ ನಮಃ ।*
*ಉಗ್ರಾಯ ಚೋಗ್ರವೇಗಾಯ ಉಗ್ರಕರ್ಮರತಾಯ ಚ ॥161॥*
*(959-964)*

**959. ಶ್ರೀಧರಾಯ ನಮಃ**

ಶ್ರೀ - ಎಂದರೆ ಲಕ್ಷ್ಮಿ, ಸಂಪತ್ತು.

ಧರ - ಎಂದರೆ ಧರಿಸಿರುವವನು, ತನ್ನದಾಗಿ ಹೊಂದಿರುವವನು.

ಶ್ರೀಧರ - ಲಕ್ಷ್ಮಿಯನ್ನು ತನ್ನವಳನ್ನಾಗಿ ಪರಿಗ್ರಹಿಸಿರುವವನು ಯಾರೋ ಅವನು - ಶ್ರೀಧರ - ಮಹಾವಿಷ್ಣು.

ಲಕ್ಷ್ಮಿಯನ್ನು ತನ್ನವಳನ್ನಾಗಿ ಪಕ್ಕದಲ್ಲಿಯೂ, ತನ್ನ ವಕ್ಷಸ್ಥಳದಲ್ಲಿ ವಿಶೇಷ ಸ್ಥಾನದಲ್ಲಿ ನಿಲ್ಲಿಸಿಕೊಂಡಿರುವವನು - ಧರಿಸಿದವನು ಎಂದರೆ ದೇಹದ ಮೇಲೆ ಆಭರಣ, ವಸ್ತ್ರದಂತೆ ಅಲಂಕಾರ ಮಾಡಿಕೊಂಡಿರುವವನೆಂದು ಮಾತ್ರವಲ್ಲ - ದೇಹದ ಒಂದು ಅ-ಭಿನ್ನ ಭಾಗವನ್ನಾಗಿ ಮಾಡಿಕೊಂಡು ಇರುವ ಮಹಾವಿಷ್ಣು - ಇದು ಅವನ ವಿಶೇಷ ರೀತಿ. - ಆದರಿಂದ ಶ್ರೀಧರಾಯ ನಮಃ.

ಅಥವಾ ಶ್ರೀ ಎಂದರೆ ಲಕ್ಷ್ಮಿದೇವಿಯ ಗುಣಗಳಾದ ಧನ, ಸಂಪತ್ತುಗಳನ್ನು ತನ್ನಲ್ಲಿಟ್ಟುಕೊಂಡು ಎಲ್ಲರಿಗೂ ನಿರಂತರ ಹಂಚುತ್ತಿರುವವನು - ಎಂದರೆ ಶ್ರೀಧರ - ಅಪರಿಮಿತನು. ಆದರೆ ಜೀವಿಗಳಲ್ಲಿರುವ "ಶ್ರೀ" ಸಂಪತ್ತು ಕ್ಷಣಿಕ, ಕ್ಷಣದಲ್ಲಿ ನಾಶವಾಗತಕ್ಕದ್ದು.

ಅಥವಾ

ಅತ್ಯುತ್ತಮ ಸಂಪತ್ತುಗಳಾದ ಸಾಲೋಕ್ಯ, ಸಾಯುಜ್ಯ, ಸಾರೂಪ್ಯ, ಸಾಮಿಪ್ಯ, ಪುನರಾವೃತ್ತಿರಹಿತ ಲೋಕಗಳನ್ನು ತನ್ನಲ್ಲಿಯೇ ಇಟ್ಟುಕೊಂಡಿರುವವನು - ಅಥವಾ ಧರಿಸಿರುವವನು. ಇದನ್ನೇ ಪರಮ ಜ್ಞಾನಿಗಳಾದ ಭಕ್ತರು, ಯೋಗಿಗಳು, ಸಾಧಕರು ಅಪೇಕ್ಷಿಸಿ ಪರಮಾತ್ಮನಿಗೆ ತಮ್ಮನ್ನು ತಾವೇ ಧಾರೆ ಎರೆದು ಶರಣಾಗತರಾಗುತ್ತಾರೆ. ಅವರಿಗೆ ಪರಮಾತ್ಮನು ಅಪೇಕ್ಷಿಸಿದ ಕಾಮನೆಗಳನ್ನು ಕೊಟ್ಟು ಅವರಲ್ಲಿಯೇ ವಾಸಮಾಡುತ್ತಾನೆ. ಇದು - ಶ್ರೀ - ಈ ಶ್ರೀಯನ್ನು ಧರಿಸಿ ಕೊಡುವವನು - ಧರ - ಅವನೇ ಶ್ರೀಧರ - ಅವನಿಗೆ ಶ್ರೀಧರಾಯ ನಮಃ ಎಂದು ಕೃತಜ್ಞತೆಯಿಂದ ನಮಸ್ಕರಿಸುತ್ತೇವೆ.

**960. ಸುತೀರ್ಥಾಯ ನಮಃ**

ತೀರ್ಥ - ಎಂದರೆ ಪವಿತ್ರಮಾಡುವ ಶಕ್ತಿಯುಳ್ಳ ವಸ್ತು - ಸ್ಥಾನ, ಕ್ಷೇತ್ರ - ನೀರು.

ತೀರ್ಥ - ಎಂದರೆ ಗುರುವಿನ ನಾಮ. ಸಂನ್ಯಾಸದ ಸಂಪ್ರದಾಯಗಳಲ್ಲಿ ಒಂದು.

ತೀರ್ಥ - ಪವಿತ್ರವಾದ ಗುರುವಿನ, ದೇವರಿಗೆ ಅಭಿಷೇಕ ಮಾಡಿದ ವಸ್ತು - ತೀರ್ಥ - ಪಾದತೀರ್ಥ.

- ನಿವೇದನ ಮಾಡಿದ ಪ್ರಸಾದ

- ಪಾದವನ್ನು ಅಭಿಷೇಕಿಸಿ ತೊಳೆದ ನೀರು.

ಸುತೀರ್ಥ - ಪರಮ ಪವಿತ್ರವಾದ ಗುರುವಿನ ಮತ್ತು ಪರಮಾತ್ಮನ ಪಾದತೀರ್ಥ.

ಈ ಪಾದ ತೀರ್ಥಗಳು ಪರಮಾತ್ಮನಿಗಿಂತ ಶ್ರೇಷ್ಠವಾದ ಗುಣಗಳನ್ನು ಹೊಂದಿರುತ್ತವೆ. ಸದ್ಗುಣಗಳನ್ನು ಬೆಳೆಸುತ್ತವೆ. ಪವಿತ್ರತೆಯನ್ನು ಮನಸ್ಸಿನ ಶಾಂತಿಯನ್ನು ಹೆಚ್ಚಿಸುತ್ತವೆ. ಭಕ್ತಿ ಮತ್ತು ಶ್ರದ್ಧೆ ಆಳವಾದಷ್ಟು ಫಲಗಳು ಬಂದೇ ಬರುತ್ತವೆ.

ಪರಮಾತ್ಮನು - ಸುತೀರ್ಥನು - ಶ್ರೇಷ್ಠನು - ಅವನ ಜಪ, ತಪ, ಧ್ಯಾನ, ನಾಮಸ್ಮರಣೆ, ಭಗವಚ್ಚಿಂತನೆಗಳು ಮನಸ್ಸಿಗೆ ಪವಿತ್ರತೆಯನ್ನು ನಿಶ್ಚಲ, ನಿರ್ಮಲ ಶುದ್ಧತೆ, ಸರಳತೆಯನ್ನು ಕೊಡುತ್ತವೆ. ನಿರಂತರವಾಗಿ ಈ ದಾರಿಯಲ್ಲಿ ಹೋಗುವುದರಿಂದ ಭವಸಾಗರದಲ್ಲಿ ಇದ್ದೂ ಸಹ, ಅದನ್ನು ದಾಟಿ ಮನಸ್ಸಿನಿಂದ ಭಗವಂತನನ್ನು ಸೇರಿ ಆನಂದಿಸಬಹುದು. ನಮ್ಮ ಚಿತ್ತದಲ್ಲಿರುವ ಮೂಲ ಆನಂದವನ್ನು ಹೊರಗೆಡವಬಹುದು - ಇಲ್ಲಾ ನಾವೇ ಬುದ್ಧಿ ಮನಸ್ಸನ್ನು ಚಿತ್ತದಲ್ಲಿ ಲೀನಮಾಡಿ ಆ ಸಮಯವನ್ನು ಕ್ಷಣಮಾತ್ರದಿಂದ ವೃದ್ಧಿಮಾಡಿಕೊಳ್ಳಬಹುದು - ಇದೇ ಸುತೀರ್ಥದ ಪ್ರಭಾವ, ಪರಮಾತ್ಮನು ಕೊಡುವ ಅಮೂಲ್ಯವಾದ ಕೊಡುಗೆ. ನಾವು ಸಹ ಸುತೀರ್ಥರಾಗಬಹುದು - ಸಜ್ಜನರು ಸತ್ಪುರುಷರು, ಸಾಧಿಸಿ ಸಿದ್ಧಿ ಪಡೆದವರುಗಳು ಸುತೀರ್ಥರೇ ಸರಿ!!

**961. ಹಯಗ್ರೀವಾಯ ನಮಃ**

ಹಯ - ಎಂದರೆ ಕುದುರೆ, ಗ್ರೀವ - ಎಂದರೆ ಕತ್ತು.

ಹಯಗ್ರೀವ - ಕುದುರೆಯ ಕತ್ತು ಉಳ್ಳವನು - ಪರಮಾತ್ಮನ ಒಂದು ರೂಪ - ಹಯಗ್ರೀವ ದೇವರು, ಹಯವದನ ಎಂದೂ ಈ ರೂಪಕ್ಕೆ ಹೆಸರು.

ಪರಮಾತ್ಮನನ್ನು ಕುದುರೆಯ ರೂಪದಲ್ಲಿ ಆಹ್ವಾನಿಸಿ ನಿವೇದಿಸಿದಾಗ ಪರಮಾತ್ಮನು ಕುದುರೆಯ ಕತ್ತುಳ್ಳವನಾಗಿ ಬಂದು ಆಚಾರ್ಯರಿಂದ ನಿವೇದನವನ್ನು ಸ್ವೀಕರಿಸಿದನು - ಇದು ಆಚಾರ್ಯರ ಭಕ್ತಿಯ ಪರಾಕಾಷ್ಠೆ - ಪರಮಾತ್ಮನ ಅಪಾರ ಕರುಣೆ, ದಯೇ - ಭಕ್ತ ಬಾಂಧವನಾಗಿ ಹೇಗೆ ಕರೆದರೂ ಬರುತ್ತಾನೆ ಎಂಬುದಕ್ಕೆ ನಿದರ್ಶನ - ಹಾಗೆಯೇ ಕರೆದ ಹಯದ ರೂಪದ ವದನದಲ್ಲಿ ಬಂದು ನಿವೇದನವನ್ನು ಸ್ವೀಕರಿಸಿ, ಅದೇ ರೂಪದಲ್ಲಿ ಹಯಗ್ರೀವ, ಹಯವದನ ಎಂದು ಪೂಜಿಸಿಕೊಳ್ಳುತ್ತಿದ್ದಾನೆ. ಪರಮಾತ್ಮನು ಅವ್ಯಾಜ

ಕರುಣಾಮೂರ್ತಿ - ಬೇಡಿದ್ದಕ್ಕಿಂತ ಹೆಚ್ಚು ಕರುಣೆಯನ್ನು ನೀಡುಪವನು - ಸಮ ಸಮ ಮಾಡುವುದಿಲ್ಲ. ನಮಗೆ ತಿಳಿಯದೇ ಪರಿಸರದಲ್ಲಿ ಈ ಜಗತ್ತಿನಲ್ಲಿ ನಮಗಾಗಿ, ನಮ್ಮ ಅನುಕೂಲಕ್ಕಾಗಿ ಏನೇನನ್ನು ನಾವು ಜಗತ್ತಿಗೆ ಬರುವ ಮೊದಲೇ ಸೃಷ್ಟಿಸಿ ತಯಾರಾಗಿ ನಮಗಾಗಿ ಕಾಯುತ್ತಿದ್ದಾನೆ - ಇದಕ್ಕಿಂತ ಕರುಣೆ ಬೇಕೇ!! - ಅವ್ಯಾಜ ಕರುಣಾಮೂರ್ತಯೇ ನಮಃ.

962. ಉಗ್ರಾಯ ನಮಃ

ಉಗ್ರ - ಬಹಳ ಕೋಪದಿಂದಿರುವ ರೂಪ, ಭಾವ, ಶತ್ರುಗಳ ಮೇಲೆ ಶಿಕ್ಷಿಸುವಾಗ ಉಗ್ರಕೋಪದಲ್ಲಿರುತ್ತಾನೆ. ಇವನು ಉಗ್ರನಾದರೆ ತಡೆಯುವವರು ಯಾರೂ ಇಲ್ಲ. ಈ ಉಗ್ರತೆಯನ್ನು ನರಸಿಂಹ ರೂಪದಲ್ಲಿದ್ದ ಈ ಉಗ್ರತೆಯನ್ನು ಹೋಗಲಾಡಿಸಲು ಲಕ್ಷ್ಮಿ, ಪ್ರಹ್ಲಾದ ಪ್ರಾರ್ಥಿಸಿದರು. ಬ್ರಹ್ಮದೇವರು ಸಹಸ್ರನಾಮವನ್ನೇ ಹೇಳಿದರು - ಆಗ ಉಗ್ರ ನರಸಿಂಹಸ್ವಾಮಿಯು ಶಾಂತನಾಗಿ ಲಕ್ಷ್ಮಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಪ್ರಹ್ಲಾದನಿಗೆ ಪಟ್ಟಾಭಿಷೇಕವನ್ನು ಬ್ರಹ್ಮದೇವರಿಂದ ಮಾಡಿಸಿದನು. ಅದರಿಂದ ನರಸಿಂಹನಿಗೆ ಉಗ್ರಾಯ ನಮಃ ಎಂದೂ ಉಗ್ರನರಸಿಂಹನೆಂದೂ ನಮಸ್ಕರಿಸುತ್ತೇವೆ.

ಅಥವಾ ನವರಸಗಳಲ್ಲಿ ಒಂದು ರಸ - ರೌದ್ರರಸ, ಉಗ್ರ - ಭಯಂಕರ, ಕ್ರೂರ, ಸಿಟ್ಟಿನ ಭಾವ.

ಅಥವಾ

ಉಗ್ರ - ಶಿವ - ಪ್ರಳಯ ಕಾಲದ ರುದ್ರನು, ಮನ್ಮಥ ದಹನ ಮಾಡುವ ಕ್ಷಣದ ಉಗ್ರ ರುದ್ರನು.

963. ಉಗ್ರವೇಗಾಯ ನಮಃ

ಉಗ್ರ - ಭಯಂಕರತೆ, ಕೋಪ, ರೌದ್ರರಸ - ಬಹಳ ವೇಗವಾಗಿ ಬರುತ್ತದೆ. ಬಹಳ ಕಾಲ ಇರುತ್ತದೆ, ನಿಧಾನವಾಗಿ ನಾಶ/ಲಯ ಹೊಂದುತ್ತದೆ. ಆದರೆ ಪರಮಾತ್ಮನಲ್ಲಿ ಎಂತಹದೇ ಕೋಪವಾಗಲೀ ಕ್ಷಣಮಾತ್ರದಲ್ಲಿ ಶಮನವಾಗುತ್ತದೆ. ನರಸಿಂಹ ಸ್ವಾಮಿಗೆ ಅಪಾರ ಕೋಪವಾಗಿದ್ದಿತು, ಅದು ಪ್ರಹ್ಲಾದ, ಲಕ್ಷ್ಮಿ, ಬ್ರಹ್ಮರಿಂದ ವೇಗವಾಗಿ ಶಮನವಾಯಿತು. ಇದಕ್ಕೆ ಅವನನ್ನು ಉಗ್ರವೇಗಾಯ ನಮಃ ಎಂದು ಕರೆದರು.

ಅಥವಾ

ಪರಮಾತ್ಮನ ಸಂಕಲ್ಪ, ಅವುಗಳು ನೆರವೇರುವ ವೇಗ, ವಿಶೇಷವಾದುದು, ಭಯಂಕರವಾದ ವೇಗದಲ್ಲಿ ನಡೆಸುತ್ತಾನೆ.

ಅಥವಾ

ಭಯಂಕರವಾದ ವೇಗದಲ್ಲಿ ಎಷ್ಟೇ ದೂರದಲ್ಲಿದ್ದರೂ ನಮ್ಮ ಆರ್ತನಾದವನ್ನು ಕೇಳಿ ತಾನು ನಮ್ಮ ಹತ್ತಿರ ಬರದೆಯೇ ನಮ್ಮ "ಕೂಗು"ಗಳಿಗೆ ಪರಿಹಾರ ದೊರಕಿಸುತ್ತಾನೆ - ಇದು ಅವನ ಉಗ್ರವೇಗ.

ಅಥವಾ

ಮನೋವೇಗ, ವಾಯುವೇಗದ ಜೊತೆಗೆ ಪರಮಾತ್ಮನ ಅತೀವ ವೇಗವೇ ಉಗ್ರವೇಗ - ಊಹಿಸಲಸಾಧ್ಯವಾದುದು. ಮನೋವೇಗ, ವಾಯುವೇಗವನ್ನು ತಡೆಯಬಹುದು ಆದರೆ ಪರಮಾತ್ಮನ ಅವ್ಯಕ್ತ ಸಂಕಲ್ಪದಿಂದ ನಡೆಯುವ ಉಗ್ರವೇಗದ ಕ್ರಿಯೆಗಳು - ಊಹಿಸಲಸಾಧ್ಯ, ತಡೆಯಲಸಾಧ್ಯ - ಪ್ರಕೃತಿಯ ವಿಕೋಪಗಳು ಉಗ್ರವೇಗಗಳ ಕ್ರಿಯೆ - ಉದಾ: ಪ್ರವಾಹಗಳು, ಭೂಕಂಪಗಳು, ಆಕಸ್ಮಿಕವಾಗಿ ಸಂಭವಿಸುವ ಅಪಘಾತಗಳು, ಅಗ್ನಿಪರ್ವತದ ಪ್ರತಾಪಗಳು, ಏಕೆ - ನಮ್ಮ ಮನಸ್ಸಿನಲ್ಲಿ ಸಂಭವಿಸುವ ಆತಂಕ, ಭಯಗಳು - ಎಲ್ಲ ಪರಮಾತ್ಮನ ಉಗ್ರವೇಗದ ಪರಿಣಾಮಗಳು - ಇದಕ್ಕೆ ಪರಿಹಾರವನ್ನು ಅವನೇ ತೋರಿಸಬೇಕು - ಅದಕ್ಕೆ ಅವನನ್ನು ಉಗ್ರವೇಗಾಯ ನಮಃ ಎಂದು ನಮಸ್ಕರಿಸುತ್ತೇವೆ.

**964. ಉಗ್ರಕರ್ಮರತಾಯ ನಮಃ**

ಪರಮಾತ್ಮನು ಉಗ್ರವಾದ, ಭಯಂಕರವಾದ ಕರ್ಮಗಳನ್ನು ಮಾಡುವುದರಲ್ಲಿ ನಿರತನಾಗಿರುತ್ತಾನೆ. ಅಖಿಲಾಂಡ ಕೋಟಿ ಬ್ರಹ್ಮಾಂಡದಲ್ಲಿ ಒಂದಲ್ಲ ಒಂದು ಕಡೆ ಭಯಂಕರ ರೀತಿಯ ಕಾರ್ಯಗಳು ನಡೆಯುತ್ತಲೇ ಇರುತ್ತವೆ. ಪ್ರಪಂಚದಲ್ಲಿ ಸಮತೋಲನ ಮಾಡುವವನು ಇವನೇ! ಸೃಷ್ಟಿ, ಸ್ಥಿತಿ, ಲಯಗಳು ನಡೆಯುತ್ತಲೇ ಇರಬೇಕು. ಯಾವುದೂ ಇದ್ದ ಹಾಗೆಯೇ ಇರುವುದಿಲ್ಲ. ಭಯಂಕರ ಕರ್ಮಗಳಾದ ಜನನ - ಮರಣ, ಪ್ರವಾಹ, ಭೂಕಂಪ, ಅಗ್ನಿಪರ್ವತದ ದಾಂಧಲೆ, ಎಲ್ಲ ನಿರಂತರ ನಡೆಯುತ್ತಲೇ ಇರಬೇಕು. ಇದು ಸೃಷ್ಟಿ ನಿಯಮ.

ಉಗ್ರಕರ್ಮಗಳು ಅವ್ಯಕ್ತವಾಗಿ ನಿರೀಕ್ಷಣೆಗೆ ಮೀರಿ ನಡೆಸುವುದು ಅವನ ಗುರಿ. ಪ್ರಪಂಚದ ಸಮಾನತೆಗೆ ಇವು ಬೇಕೇ ಬೇಕು.

*ಉಗ್ರೇಕ್ಷಣಾಯ ವ್ಯಗ್ರಾಯ ಸಮಗ್ರಗುಣಶಾಲಿನೇ ।*
*ಬಾಲಗ್ರಹವಿನಾಶಾಯ ಪಿಶಾಚಗ್ರಹಘಾತಿನೇ ॥162॥ (965-969)*

**965. ಉಗ್ರೇಕ್ಷಣಾಯ ನಮಃ**

ಉಗ್ರ - ಭಯಂಕರ ರೀತಿಯಲ್ಲಿ, ಈಕ್ಷಣ - ನೋಡುವಿಕೆ - ಭಯಂಕರ ರೂಪದಲ್ಲಿ, ಭಾವದಲ್ಲಿ, ನೋಡುವವನು - ಆದೇ ಪರಮಾತ್ಮನು ಭಕ್ತರಿಗೆ

ಶಾಂತನಾಗಿಯೂ, ಶತ್ರುಗಳಿಗೆ ಭಯಂಕರನಾಗಿಯೂ ತೋರುವವನು. ಸಂಹಾರದ ಸಮಯದಲ್ಲಿ ರೌದ್ರರಸಭರಿತನಾದ ಪರಮಾತ್ಮನು ಉಗ್ರ ರೀತಿಯಿಂದ ಶತ್ರುಗಳನ್ನು ನೋಡುತ್ತಾನೆ. ಆದರಿಂದ ಅವನು ಉಗ್ರೇಕ್ಷಣಾಯ ನಮಃ ಆಗುತ್ತಾನೆ.

ಅಥವಾ

ಕಠಿಣ ರೀತಿಯಲ್ಲಿ ನೋಡುವವನು - ಪರಮಾತ್ಮ.

**966. ವ್ಯಗ್ರಾಯ ನಮಃ**

ವ್ಯಗ್ರ - ವ್ಯಾಕುಲ, ದುಃಖದಲ್ಲಿದ್ದ, ಗೊಂದಲದಲ್ಲಿ ಬಿದ್ದಾಗ ಪರಮಾತ್ಮನು ಇಂತಹವರಿಗೆ ಆಶ್ರಯನು - ಸರ್ವರೀತಿಯ ದುಃಖಗಳನ್ನು ಬಿಡಿಸುವುದರಿಂದ - ಅವನು - ವ್ಯಗ್ರನು.

ವ್ಯಗ್ರ - ಎಂದರೆ ಮಗ್ನನು, ತಲ್ಲೀನನು.

ಪರಮಾತ್ಮನ ಧ್ಯೇಯವೇ ಜೀವಿಗಳನ್ನು ಸಂಸಾರ ಸಾಗರದಿಂದ ಬಿಡುಗಡೆ ಮಾಡುವುದು - ಇದಕ್ಕೆ ಇದರಲ್ಲಿಯೇ ತಲ್ಲೀನನಾಗಿರುವುದರಿಂದ ಅವನನ್ನು ''ವ್ಯಗ್ರ''ನು ಎಂದು ಹೇಳುತ್ತೇವೆ.

ಈ ಗುಣದಲ್ಲಿ ಯಾರೂ ಇವನನ್ನು ಮೀರಿಸುವವರಿಲ್ಲ. ಆದರಿಂದ ಅವನು - ವ್ಯಗ್ರಾಯ ನಮಃ ಎನಿಸಿಕೊಳ್ಳುತ್ತಾನೆ.

**967. ಸಮಗ್ರಗುಣಶಾಲಿನೇ ನಮಃ**

ಸಮಗ್ರ - ಎಂದರೆ ಎಲ್ಲವೂ, ಮೊದಲಿನಿಂದ ಎಲ್ಲವೂ, ಏನನ್ನೂ ಬಿಡದೆ ಎಲ್ಲವೂ,

ಗುಣ - ಗುಣಗಳನ್ನು, ಶಾಲಿನೇ - ಹೊಂದಿರುವವನು.

ಪರಮಾತ್ಮನು ಸಕಲ ಗುಣಗಳನ್ನು ಹೊಂದಿರುವವನು - ಏನನ್ನೂ ಬಿಡದೆ ಎಲ್ಲಾ ಗುಣಗಳನ್ನು ಭಾವನೆಗಳನ್ನೂ ಹೊಂದಿರುವವನು. ಇವನನ್ನು ಮೀರಿಸಿದವರು ಯಾರೂ ಇಲ್ಲ. ಎಲ್ಲಕ್ಕೂ ಮೀರಿದ ಗುಣವೆಂದರೆ ತನ್ನ ಸಂಕಲ್ಪ ಮಾತ್ರದಿಂದ ಈ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ತನ್ನ ಸಂಕಲ್ಪ ಮಾತ್ರದಿಂದ ಸೃಷ್ಟಿಸಿ, ನಡೆಸಿ, ಲಯ ಮಾಡುವ ಅಥವಾ ತನ್ನಲ್ಲಿ ಲೀನಮಾಡಿಕೊಳ್ಳುವ ಜ್ಞಾನವನ್ನು ಹೊಂದಿರುವವನು - ಪರಮಾತ್ಮನು. ಅವನಿಗೆ ಸಮರಾದವರಾಗಲೀ, ಅವನಿಗಿಂತ ಉತ್ತಮರಾಗಲೀ ಯಾರೂ ಇಲ್ಲ. ಆದರಿಂದ ಇವನು - ಸಮಗ್ರ ಗುಣಶಾಲಿನೇ ನಮಃ.

**968. ಬಾಲಗ್ರಹವಿನಾಶಾಯ ನಮಃ**

ಗ್ರಹಗಳು, ಪಿಶಾಚಿಗಳು, ಬಾಲಗ್ರಹಗಳು, ಜೀವಿಗಳು (ಎಂದರೆ ದೇಹಗಳ

ಬಾಲ್ಯಾವಸ್ಥೆ) ಮಕ್ಕಳಾಗಿರುವ ಕಾಲದಲ್ಲಿ ತೊಂದರೆಯನ್ನು ಕೊಡುತ್ತವೆ. ಇದಕ್ಕೆ ಬಾಲ್ಯದಲ್ಲಿ ಆಗುವ ಬಾಲಗ್ರಹ ದೋಷ ಎನ್ನುತ್ತೇವೆ. ಬಾಲಾರಿಷ್ಠ ಎಂದೂ ಕರೆಯುತ್ತೇವೆ. ಇಂತಹ ದೋಷಗಳನ್ನು ಸಂಪೂರ್ಣವಾಗಿ ನಾಶಮಾಡುವವನು - ಪರಮಾತ್ಮನೇ! ಅವನು ಬಾಲಗ್ರಹವಿನಾಶಾಯ ನಮಃ ಎಂದು ಕರೆಯಲ್ಪಡುತ್ತಾನೆ. ಬಾಲ್ಯದಲ್ಲಿ ಯಾವ ತರಹದ ವಿವೇಚನಾ ಶಕ್ತಿಯೂ ಇರುವುದಿಲ್ಲ. ಸ್ವತಂತ್ರ ಮನೋಬುದ್ಧಿ ಇರುವುದಿಲ್ಲ. ಎಲ್ಲಾ ಬಾಲಿಶ, ಆದರಿಂದ ಗ್ರಹಗಳ ಪೀಡೆ ಜಾಸ್ತಿ, ಇದನ್ನು ಪರಮಾತ್ಮನೇ ನಿವಾರಿಸುತ್ತಾನೆ.

969. ಪಿಶಾಚಗ್ರಹಘಾತಿನೇ ನಮಃ

ಪಿಶಾಚ - ಭೂತ, ಪ್ರೇತ, ಪಿಶಾಚ, ದೆವ್ವಗಳು.

ಇಂತಹ ಪ್ರೇತ ರೂಪವಾದವು ಆಕಾಶದಲ್ಲಿ ತೇಲುತ್ತಿರುತ್ತವೆ. ಯಾವ ಯಾವ ಆತ್ಮಗಳಿಗೆ ದೇಹ ವಿಸರ್ಜನೆಯಾದ ಮೇಲೆ ಯುಕ್ತ ರೀತಿಯಲ್ಲಿ ಸಂಸ್ಕಾರಗಳು ನಡೆಯುವುದಿಲ್ಲವೋ ಅವು ''ಪ್ರೇತ''ಗಳಾಗಿ ಹಾರಾಡುತ್ತಿರುತ್ತವೆ. ಪ್ರೇತತ್ವನಿವಾರಣೆಯಾಗದಿದ್ದರೆ ಅವುಗಳಿಗೆ ಗತಿಯಿಲ್ಲ. ಇಂತಹ ಪ್ರೇತಗಳ ದುಷ್ಟ ಪರಿಣಾಮಗಳು ಅದನ್ನು ಮಾಡದೆ ಬಿಟ್ಟವರಿಗೆ ಉಂಟಾಗುತ್ತದೆ. ಇಂತಹ ಪಿಶಾಚಿಗಳಿಂದಾಗುವ ಪೀಡೆಗಳನ್ನು ಪರಮಾತ್ಮನು ಬಿಡಿಸುತ್ತಾನೆ.

ಅಥವಾ

ಪ್ರೇತಗಳಿಗೆ ಬಂದಿರುವ ಪ್ರೇತತ್ವವನ್ನು ಬಿಡಿಸಿ ಅದರ ಬಂಧನದಿಂದ ಆತ್ಮನನ್ನು ಬಿಡಿಸುತ್ತಾನೆ. ಆದ್ದರಿಂದ ಅವನು ಪಿಶಾಚಗ್ರಹಘಾತಿನೇ ನಮಃ ಎಂದು ಆಗುತ್ತಾನೆ.

*ದುಷ್ಟಗ್ರಹನಿಹಂತ್ರೇ ಚ ನಿಗ್ರಹಾನುಗ್ರಹಾಯ ಚ ।*
*ವೃಷಧ್ವಜಾಯ ವೃಷ್ಣ್ಯಾಯ ವೃಷಭಾಯ ವೃಷಾಯ ಚ ॥163॥*
*(970-975)*

970. ದುಷ್ಟಗ್ರಹನಿಹಂತ್ರೇ ನಮಃ

ಜನ್ಮಕಾಲದಲ್ಲಿ ಗ್ರಹಗಳು ಇರುವ ನಕ್ಷತ್ರ, ರಾಶಿಗಳ ಕಾರಣ ಆತ್ಮನು ಧರಿಸಿರುವ ಶರೀರ, ಮನ, ಬುದ್ಧಿ, ಅಹಂಕಾರ, ಚಿತ್ತಗಳ ಮೇಲೆ ದುಷ್ಪರಿಣಾಮಗಳನ್ನು ಪೂಜಾದಿಗಳಿಂದ ಭಗವಂತನು ಪಾರುಮಾಡುತ್ತಾನೆ. ಆದರಿಂದ ದುಷ್ಟಗ್ರಹನಿಹಂತ್ರೇ ನಮಃ ಎನ್ನುತ್ತೇವೆ.

ಜೀವನು ಆತ್ಮನ ಸಂಸ್ಕಾರಕ್ಕೆ ತಕ್ಕಂತೆ ದೇಹವನ್ನು ಯೋನಿಯನ್ನು ಪಡೆಯುತ್ತಾನೆ. ಒಂದು ಶರೀರವು ಆತ್ಮಕ್ಕೆ ದೊರಕಬೇಕಾದರೆ ತನ್ನ ಸಂಸ್ಕಾರಗಳೇ ಕಾರಣ, ಆದಕ್ಕೆ ತಕ್ಕಂತೆ ಪರಮಾತ್ಮನ ಸಂಕಲ್ಪದಂತೆ ಯೋನಿಯು

ನಿರ್ಧಾರವಾಗುತ್ತದೆ. ಅದಕ್ಕೆ ಅನುಗುಣವಾದ ಪುರುಷ, ಪ್ರಕೃತಿ, ಮಾಯೆ - ಅದರ ಯೋನಿ - ಮಾತಾ ಪಿತೃ - ಎಂದರೆ ಕ್ಷೇತ್ರ - ಕ್ಷೇತ್ರಜ್ಞ - ವನ್ನು ಪರಮಾತ್ಮನೇ ಸಿದ್ಧಮಾಡುತ್ತಾನೆ, ಎಂದರೆ ಮಾತೃ, ಪಿತೃ ಪ್ರಸ್ತುತ ಆತ್ಮ ಇವುಗಳ ಕರ್ಮಾನುಸಾರ ಸಂಗಮವನ್ನು ಪರಮಾತ್ಮನೇ ಏರ್ಪಡಿಸುತ್ತಾನೆ. ಕಾಲದೇಶ, ಸ್ಥಾನ, ಯೋನಿ, ಪುರುಷ, ಪ್ರಕೃತಿ - ಎಲ್ಲವೂ ಅವನಿಂದಲೇ ಕರ್ಮ, ಸಂಸ್ಕಾರಾನುಸಾರ ನಿರ್ಧಾರವಾಗುತ್ತದ. ಆತ್ಮನು ಪುರುಷನ ವೀರ್ಯದಲ್ಲಿ ಪ್ರವೇಶಿಸಿ, ಸೂಕ್ತ ಕಾಲ ದೇಶದಲ್ಲಿ ಸ್ತ್ರೀಯ ಯೋನಿಯ ಸಂಭೋಗದ ಮೂಲಕ ಸ್ತ್ರೀಯ ಅಂಡವನ್ನು ಸೇರುತ್ತಾನ. ಅದಕ್ಕೆ ತಕ್ಕ ಪಿಂಡೋತ್ಪತ್ತಿಯು ಗರ್ಭದಲ್ಲಿ ಆಗಿ ಕ್ರಮಕ್ರಮವಾಗಿ ದಿನೇ ದಿನೇ ಬೆಳೆದು ಶರೀರವನ್ನು ಹೊಂದುತ್ತದೆ. ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ ಎಂದು ಶರೀರವನ್ನು ಪಡೆಯುತ್ತದೆ. ಗರ್ಭದಿಂದ ಭೂಸ್ಪರ್ಶವಾದ ಸಮಯಕ್ಕನುಗುಣವಾಗಿ ನಕ್ಷತ್ರ, ಸಮಯ, ಗ್ರಹಗಳು ಪ್ರವೇಶಮಾಡಿಪ ನಕ್ಷತ್ರಗಳು - ಇತ್ಯಾದಿ ಎಲ್ಲವೂ ನಿರ್ಧಾರವಾಗುತ್ತದೆ. ಗ್ರಹಗಳ ಚಲನೆಯಂತೆ ಉಚ್ಚ, ನೀಚ, ಸಾಮಾನ್ಯವೆಂಬ ಸ್ಥಾನಗಳು - ರಾಶಿಗಳು ನಿರ್ಧಾರವಾಗುತ್ತವೆ. ಯಾವಾಗ ಯಾವಾಗ ಯಾವ ಯಾವ ಗ್ರಹಗಳು ದುಷ್ಟ ದೃಷ್ಟಿಯಲ್ಲಿ ಈ ಆತ್ಮನ ಶರೀರಕ್ಕೆ ಇರುವುದೋ ಆಯಾ ಕ್ಷಣದಲ್ಲಿ ಪರಮಾತ್ಮನು ದುಷ್ಟ ಪರಿಣಾಮವನ್ನು ಹೋಗಲಾಡಿಸುತ್ತಾನೆ. ಇದೇ ದುಷ್ಟಗ್ರಹನಿಯಂತ್ರಣ. ಅವನೇ ದುಷ್ಟಗ್ರಹ ನಿಯಂತ್ರೇ ನಮಃ ಎನಿಸಿಕೊಳ್ಳುತ್ತಾನೆ. ದುಷ್ಟಗ್ರಹ ನಿಹಂತ್ರೇ ನಮಃ ಎಂದೇ ಆಗುತ್ತದೆ.

**971.** ನಿಗ್ರಹಾನುಗ್ರಹಾಯ ನಮಃ

ನಿಗ್ರಹ - ಎಂದರೆ ದುಷ್ಟ ಲಕ್ಷಣ, ಭಾವನೆ, ದುಷ್ಕಾರ್ಯಗಳನ್ನು ತಪ್ಪಿಸಿ, ತಡೆಗಟ್ಟುವುದು.

ಅನುಗ್ರಹ - ಕೋರಿದ ಪ್ರಾರ್ಥನೆಗಳನ್ನು ನೆರವೇರಿಸುವುದು, ಸಾಮಾನ್ಯವಾಗಿ ಒಳ್ಳೆಯ ಫಲಗಳನ್ನು ವರವಾಗಿ ಕೊಡುವುದಕ್ಕೆ ಅನುಗ್ರಹವೆಂದು ಹೆಸರು.

ಸಮರ್ಥ ರೀತಿಯಲ್ಲಿ ಪಕ್ಷಪಾತವಿಲ್ಲದೆ ನಡೆಸುವವನು ಪರಮಾತ್ಮನೊಬ್ಬನೇ! ಬೇರೆ ಯಾರಿಂದಲೂ ಇದು ಸಾಧ್ಯವೇ ಇಲ್ಲ. ಯಾರು ಏನೇ ಮಾಡಿದರೂ ನಾನಾ ಬಗೆಯ ಅರ್ಥಗಳು ಉದ್ಭವವಾಗುತ್ತವೆ. ಪರಮಾತ್ಮನಾದರೋ ಇದನ್ನು ಮೀರಿದವನು. ಪ್ರತಿ ಜೀವಿಯೂ ಕಾಲಾನುಕಾಲಕ್ಕೆ ಪರಮಾತ್ಮನ ಸಂಕಲ್ಪ ಮತ್ತು ಸದ್ಭಾವನೆಯನ್ನು ಒಪ್ಪಿಯೇ ತೀರುತ್ತಾನೆ. ಏಕೆಂದರೆ ಪರಮಾತ್ಮನೊಬ್ಬನೇ ತ್ರಿಕಾಲಜ್ಞಾನಿ. ಅವನು ಮಾಡುವುದೆಲ್ಲಾ ಒಳ್ಳೆಯದೆ! ಇದರಲ್ಲಿ ನಿಗ್ರಹ, ಅನುಗ್ರಹಗಳು ಅವನು ಮಾಡುವ ಕಾರ್ಯಗಳು, ಎಲ್ಲರೂ

ಇದನ್ನು ಶಾಂತ ಭಾವನೆಯಿಂದ, ಶರಣಾಗತ ರೀತಿಯಲ್ಲಿ ಒಪ್ಪುತ್ತಾರೆ. ಅವನನ್ನು ನಿಗ್ರಹಕ್ಕೋ, ಅನುಗ್ರಹಕ್ಕೋ ಮೊರೆ ಹೋಗುತ್ತಾರೆ. ಅದರಿಂದ ಅವನನ್ನು ನಿಗ್ರಹಾನುಗ್ರಹಾಯ ನಮಃ ಎಂದು ನಮಿಸುತ್ತಾರೆ. ಆದರದಿಂದ ತಮ್ಮ ಪರಮ ಹಿತೈಷಿ ಎಂದು ಸದಾ ದುಃಖದಲ್ಲಿಯೂ ಸುಖದಲ್ಲಿಯೂ ಗೌರವಿಸುತ್ತಾರೆ. ಇದರಲ್ಲಿ ಅನುಮಾನವೇ ಇಲ್ಲ.

972. ವೃಷಧ್ವಜಾಯ ನಮಃ

ವೃಷ - ಧರ್ಮವು ಸಕಲ ಇಷ್ಟಾರ್ಥಗಳನ್ನು ವರ್ಷಿಸುತ್ತದೆ ಅದರಿಂದ ಧರ್ಮವು ವೃಷ ಎಂದು ಕರೆಯಲ್ಪಡುತ್ತದೆ. (ವಿ.ಸ. 101)

ವೃಷಾ - ಎಂದರೆ ಧರ್ಮ ಅಥವಾ ಪುಣ್ಯ.

ಧ್ವಜ - ಎಂದರೆ ಬಾವುಟ, ಗುರುತು, ಚಿಹ್ನೆ, ಭೂಷಣಪ್ರಾಯವಾದ್ದು.

ಪರಮಾತ್ಮನು ಧರ್ಮವನ್ನೆ ತನ್ನ ಧ್ಯೇಯವಾಗಿಟ್ಟುಕೊಂಡು ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನು ಕೊಡುವುದರಿಂದ ಅವನು - ವೃಷಧ್ವಜನು.

ಅಥವಾ

ಧರ್ಮರೂಪನಾದ ಯಜ್ಞಕ್ಕೆ ನೆಲೆಯಾಗಿರುವವನು ಪರಮಾತ್ಮ.

ಅಥವಾ

ವೃಷ - ಎಂದರೆ ಹೋರಿ, ಎತ್ತು.

ಹೋರಿಯನ್ನೇ ಚಿಹ್ನೆ, ವಾಹನ ಚಿಹ್ನೆಯಾಗಿಟ್ಟುಕೊಂಡಿರುವವನು - ಶಿವ, ಶಿವನು ನಂದಿಯನ್ನೇ ತನ್ನ ಧ್ವಜವಾಗಿಯೂ ಮತ್ತು ವಾಹನವನ್ನಾಗಿಯೂ ಇಟ್ಟುಕೊಂಡಿದ್ದಾನೆ. ಅವನನ್ನು ನಂದಿವಾಹನ, ವೃಷಧ್ವಜ ಎಂದು ನಮಿಸುತ್ತಾರೆ.

973. ವೃಷ್ಯಾಯ ನಮಃ

ವೃಷವನ್ನು ಹೊಂದಿರುವವನು ಶಿವ,

ಅಥವಾ

ಧರ್ಮದಿಂದ ಗುರುತಿಸಲ್ಪಡುವವನು - ವೃಷ್ಯ - ಪರಮಾತ್ಮ.

ಧರ್ಮವನ್ನು ಪ್ರತಿಪಾದಿಸುವವನು - ವೃಷ್ಯ.

ಅಥವಾ

ನಂದಿಯನ್ನೇ ಸೇವಕನನ್ನಾಗಿಯೂ, ವಾಹನವನ್ನಾಗಿಯೂ ಹೊಂದಿರುವವನು - ಶಿವನು - ವೃಷ್ಯನು.

ಅಥವಾ

ಧರ್ಮ - ವೃಷದಿಂದ ಸೇವಿಸಲ್ಪಡುವವನು - ವೃಷ್ಯ.

**974.** ವೃಷಭಾಯ ನಮಃ

ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡುವವನು - ವರ್ಷಿಸುವವನು - ವೃಷ - ಭ - ಕೊಡುವವನು.

ಅಥವಾ

ವೃಷಭ - ಎಂದರೆ ಎತ್ತು, ಹೋರಿ.

ಶಿವನನ್ನು ನಂದಿಯು ಸೇವಿಸುತ್ತಾನೆ, ಎಡೆಬಿಡದೆ ವಾಹನನಾಗಿಯೂ ಸೇವಿಸುತ್ತಾನೆ. ಶಿವನು ತ್ರಿಮೂರ್ತಿಗಳಲ್ಲಿ ಒಬ್ಬನು. ಅವನಿಗೆ ವಾಹನನಾಗಿ ಸೇವಿಸಬೇಕಾದರೆ, ಆ ಆತ್ಮನು ಬಹಳ ಉನ್ನತವಾಗಿರಬೇಕು. ಪರಮಾತ್ಮನೇ ನಂದಿರೂಪವನ್ನು (ವೃಷಭ ರೂಪ) ಧರಿಸಿ ಪರಮಾತ್ಮ ರೂಪಿಯಾದ ಶಿವನನ್ನು ಸೇವಿಸುವುದರಿಂದ ಶಿವ - ನಂದಿಯರಲ್ಲಿ ಭೇದವಿಲ್ಲವೆಂದಾಯಿತು. ತನ್ನನ್ನು ತಾನೇ ಸೇವಿಸುವುದರಿಂದ ಪರಸ್ಪರ ಭೇದವಿಲ್ಲ.

ಅಥವಾ

ವೃಷಾ ಎಂದರೆ ಧರ್ಮರೂಪದಿಂದ, ಭ - ಹೊಳೆಯುವವನು - ಪರಮಾತ್ಮ - ವೃಷಭ.

**975.** ವೃಷಾಯ ನಮಃ

ವೃಷ - ಎಂದರೆ ಧರ್ಮ, ಧರ್ಮ ಸ್ವರೂಪಕ್ಕೆ ಮತ್ತು ಧರ್ಮಸ್ವರೂಪನಾದ ವೃಷನಿಗೆ (ಪರಮಾತ್ಮನಿಗೆ) ನಮಸ್ಕಾರಗಳು.

(ವಿ.ಸ.313)

ಅಥವಾ

ವೃಷ - ನಂದಿ / ಎತ್ತು

ನಂದಿರೂಪನಾದ (ವೃಷ) ಪರಮಾತ್ಮನಿಗೆ ನಮಸ್ಕಾರಗಳು. - ವೃಷಾಯ ನಮಃ.

*ಉಗ್ರವೀರಾಯ ಶಾಂತಾಯ ನಮಃ ಶ್ರುತಿಧರಾಯ ಚ ।*
*ನಮಸ್ತೇ ದೇವ ದೇವೇಶ ನಮಸ್ತೇ ಮಧುಸೂದನ ॥164॥*

*(976-980)*

**976.** ಉಗ್ರವೀರಾಯ ನಮಃ

ಉಗ್ರ - ಎಂದರೆ ಭಯಂಕರ, ಎದುರಿಸಲಸಾಧ್ಯವಾದ, ವೀರ - ಎಂದರೆ ಸಾಮರ್ಥ್ಯವುಳ್ಳವನು, ಪರಾಕ್ರಮಶಾಲಿಯಾದವನು.

ಉಗ್ರವೀರ - ಅತ್ಯಂತ ಭಯವನ್ನು ಹುಟ್ಟಿಸುವ ಪರಾಕ್ರಮಶಾಲಿಯಾದವನು - ಉಗ್ರವೀರನು.

- ಅತ್ಯಂತ ಪರಾಕ್ರಮಶಾಲಿ, ಏನನ್ನು ಬೇಕಾದರೂ ಎದುರಿಸುವವನು.

ಅಖಂಡ ಅಖಿಲಾಂಡ ಕೋಟಿ ಬ್ರಹ್ಮಾಂಡವನ್ನು ಸೃಷ್ಟಿಸಿ ಅವುಗಳ ನಾಯಕನಾಗಿ - ತನ್ನ ಪರಾಕ್ರಮವನ್ನು ತೋರಿಸಿದವನು - ಮತ್ಯಾರೂ ಇಂತಹ ಕಾರ್ಯವನ್ನು ಮಾಡದ ಹಾಗೆ ಮಾಡಿರುವವನು - ಉಗ್ರವೀರಾಯ ನಮಃ.

977. ಶಾಂತಾಯ ನಮಃ

ಶಾಂತಃ - ಸಮಾಧಾನ ಹೊಂದಿರುವವನು, ಸ್ಥಿತಪ್ರಜ್ಞನು - ಪರಮಾತ್ಮನು ಸದಾ ಶಾಂತನು, ಇವನಿಗಿಂತ ಶಾಂತರಾಗಿರುವವರು ಯಾರೂ ಇಲ್ಲ.

ಯಾವ ಜೀವಿಯೂ ಶಾಂತವಾಗಿದ್ದರೂ ಅದು ಕೇವಲ ಕ್ಷಣಮಾತ್ರ. ಆದರೆ ಭಗವಂತನ ಶಾಂತತೆ ವೈಶಾಲ್ಯವಾದದ್ದು. ಇಂತಹ ಅಖಂಡ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ಸೃಷ್ಟಿಸಿ, ಸಕಲ ಜೀವಕೋಟಿಯನ್ನು ಅವವುಗಳ ಸಂಸ್ಕಾರದಂತೆ / ಅನುಗುಣವಾಗಿ ಕಲ್ಪಾದಿಯಿಂದ ಕಲ್ಪಾಂತದವರೆಗೆ ಕಾಲಯಾಪನ ಮಾಡುವಂತೆ ನಡೆಸಬೇಕಾದರೆ ಅವನ ಶಾಂತತೆ ಅತ್ಯಂತ ವಿಶೇಷವಾದುದು. ಅವನದು ಪರಮಶಾಂತ ಸ್ವಭಾವ - ಅದಕ್ಕೆ ಶಾಂತಾಯ ನಮಃ ಎನ್ನುತ್ತೇವೆ. ಇದರಲ್ಲಿ ಅವನನ್ನು ಮೀರಿಸುವವರು ಯಾರೂ ಇಲ್ಲ.

ಅಥವಾ

ನವರಸಗಳಲ್ಲಿ ಒಂದು - ಶಾಂತರಸ.

ಅಥವಾ

ಉರಿಯುತ್ತಿರುವ ದೀಪವು ಆರಿಹೋದಾಗ ಶಾಂತವಾಯಿತು ಎಂದು ಹೇಳುತ್ತೇವೆ. ಅಥವಾ

ಶಾಂತನು - ಎಂದರೆ ಸಂನ್ಯಾಸಿ, ಯತಿ - ಸೌಮ್ಯ ಭಾವ / ನಮ್ರ ಭಾವ, - ಪರಮಾತ್ಮನನ್ನೇ ಹೊಂದುವ ಗುರಿಯುಳ್ಳವನು ಸದಾ ಶಾಂತನಾಗಿರುತ್ತಾನೆ. ಅವನ ಆತ್ಮವು - ಪರಮಾತ್ಮನ ಅಂಶ - ಅದರಿಂದ ಅವನ ಶಾಂತಭಾವವನ್ನೇ ಹೊಂದಿರುತ್ತದೆ. ಇವನೂ ಸಹ ಶಾಂತಾಯ ನಮಃ ಎನಿಸಿಕೊಳ್ಳುತ್ತಾನೆ.

978. ಶ್ರುತಿಧರಾಯ ನಮಃ / ಶೃತಿಧರಾಯ ನಮಃ

ಶೃತ - ಎಂದರೆ ಕೇಳಿಸಿಕೊಂಡ ವಸ್ತು, ವಿಶೇಷ ವಿಚಾರ, ಅತ್ಯುತ್ತಮ ವಿಚಾರವೆಂದರೆ ಪರಮಾತ್ಮನಿಗೆ ಸಂಬಂಧಪಟ್ಟದ್ದು. ಇದನ್ನು ಕೇಳಿಸಿಕೊಳ್ಳುವವನು ಪರಮಾತ್ಮನೇ! ನಾಮಸ್ಮರಣೆ, ಜಪ, ಧ್ಯಾನ, ತಪಗಳನ್ನು ಕೇಳಿಸಿಕೊಳ್ಳುವವನು - ಪರಮಾತ್ಮ - ಕೇಳಿಸಿಕೊಂಡು ಧರ - ಎಂದರೆ ಗ್ರಹಿಸುವವನು - ಅವನೇ! ಅವನಿಗಿಂತ ಉತ್ತಮರು, ಸಮರು ಯಾರೂ ಇಲ್ಲ. ಅದರಿಂದ ಅವನೇ ಶ್ರುತಿಧರನು.

ಕೇಳಿಸಿಕೊಳ್ಳುವ ವಿಚಾರಗಳಲ್ಲಿ ವೇದ ಮಂತ್ರಗಳು ಉಪನಿಷದ್ವಾಣಿಗಳು, ಜಪ ಮೊದಲಾದವುಗಳು, ಅತಿ ಉತ್ತಮವಾದುವುಗಳು - ಶ್ರುತಧರಾಯ ನಮಃ.

ಅಥವಾ

ಶ್ರುತಿ - ಎಂದರೆ ಶ್ರುತಿಗಳನ್ನು ವೇದಮಂತ್ರ, ಉಪನಿಷತ್ತು, ಮಂಗಳ ಮಂತ್ರಗಳು, ಸ್ತೋತ್ರಗಳು, ಭಕ್ತರ ಪೂಜೆ, ಜಪ, ತಪ, ಧ್ಯಾನಗಳನ್ನು ಧರಿಸುವವನು / ಧರಿಸಿರುವವನು / ಗ್ರಹಿಸಿರುವವನು - ಶ್ರುತಿಧರನು - ಶ್ರುತಿಧರಾಯ ನಮಃ.

**979. ದೇವ ದೇವಾಯ ನಮಃ / ದೇವ ದೇವೇಶಾಯ ನಮಃ**

ದೇವ - ದೇವತೆಗಳಿಗೆ ದೇವ - ದೇವರಾದವನು, ದೇವ ದೇವಿಯರ ಈಶನು. ಜೀವಕೋಟಿಗಳಿಗೆ ದೇವತೆಗಳು ಕಾಮ್ಯ ವಸ್ತುಗಳನ್ನು ಕೊಡುತ್ತಾರೆ. ಅಂತಹ ದೇವತೆಗಳಿಗೆ (ದೇವ, ದೇವಿಯರಿಗೆ) ದೇವನಾದವನು - ಎಂದರೆ ಇವನಿಗಿಂತ ಉತ್ತಮರಾದ / ಸಮರಾದ ದೇವರಿನ್ನೊಬ್ಬರು ಇಲ್ಲ - ಅದರಿಂದ ಪರಮಾತ್ಮನು - ದೇವ ದೇವೋತ್ತಮನು - ದೇವ ದೇವಾಯ ನಮಃ. ಮಹಾವಿಷ್ಣು - ಪರಬ್ರಹ್ಮನು - ಪುರುಷೋತ್ತಮನು. ಏನೆಂದು ಕರೆದರೂ ಅವನೇ - ಅವನೇ - ಬೇರೆಯವರು ಬರುವುದಿಲ್ಲ! ದೇವ, ದೇವಿಯರ ಒಡೆಯನು - ಎಂದರೆ ದೇವ ದೇವೋತ್ತಮ.

**980. ಮಧುಸೂದನಾಯ ನಮಃ**

ಮಧು - ಮಧುವೆಂಬ ರಾಕ್ಷಸನ, ಸೂದನ - ಪ್ರಾಣಗಳನ್ನು ಹೀರಿದವನು, - ಮಧುಸೂದನ.

ಮಧು - ಮಕರಂದವನ್ನು - ಪುಷ್ಪಗಳಿಂದ - ಸೂದನ - ಹೀರಿದ ಮಕರಂದಗಳು.

ಮಧು - ಸಕಲ ಜೀವಿಗಳಿಗೂ ಮಧುರವಾದ ಮನಸ್ಸನ್ನು, ಸೂದನ - ಎಳೆದವನು - ಮಧುಸೂದನ.

ಮಧು - ಕೈಟಭ - ಮಧು ಮತ್ತು ಕೈಟಭ - ಇವರು ವಿಷ್ಣು ಮಲಗಿದಾಗ ಆತನ ಕಿವಿಯಿಂದ ಹುಟ್ಟಿದರು. ಅವರು ಬ್ರಹ್ಮ ದೇವರನ್ನು ಏರಿಹೋದಾಗ / ವೇದಗಳೆನ್ನೆಳೆದುಕೊಂಡು ಅಪಹರಿಸಿಕೊಂಡು ಓಡಿದಾಗ ವಿಷ್ಣುವು ಅವರ ಪ್ರಾಣಗಳನ್ನು ಎಳೆದನು - ಅದರಿಂದ - ಮಧುಸೂದನಾಯ ನಮಃ ಎಂದು ನಮಿಸುತ್ತೇವೆ.

ಮಧುವೆಂದರೆ ಜೇನು ತುಪ್ಪ, ಸೂದನ - ಎಂದರೆ ಮಕರಂದಗಳು ಎಳೆಯುವುದು.

ಮಧು - ಸಿಹಿಯಾದ ಪ್ರೇಮವನ್ನು, ಸೂದನ - ಸಮ್ಮತಿಸುವವನು - ಮಧುಸೂದನ - ಮಧುಸೂದನಾಯ ನಮಃ.

*ನಮಸ್ತೇ ಪುಂಡರೀಕಾಕ್ಷ ನಮಸ್ತೇ ದುರಿತಕ್ಷಯ ।*
*ನಮಸ್ತೇ ಕರುಣಾಸಿಂಧೋ ನಮಸ್ತೇ ಸಮಿತಿಂಜಯ ॥165॥*
*(981-984)*

981. ಪುಂಡರೀಕಾಕ್ಷಾಯ ನಮಃ

ಪುಂಡರೀಕ - ಬಿಳಿಯ ಆನೆ (ಆಗ್ನೇಯ ದಿಕ್ಕಿನ ಆನೆ), ಬಿಳಿಯ ಕಮಲ.

ಅಕ್ಷ - ಕಣ್ಣು.

ಬಿಳಿಯ ಕಮಲದಂತೆ ಮನೋಹರವಾದ ಕಣ್ಣುಗಳುಳ್ಳವನು.

ನರಸಿಂಹಸ್ವಾಮಿಯು ಹಿರಣ್ಯಕಶಿಪುವಿನ ಸಂಹಾರವಾದ ಕ್ಷಣದಲ್ಲಿ ಉಗ್ರರೂಪದ ಮುಖ ಮತ್ತು ದೇಹವಾಗಿದ್ದನು. ಬ್ರಹ್ಮದೇವನ ಸಹಸ್ರನಾಮಗಳನ್ನು ಕೇಳಿದ ನಂತರ ಕ್ರಮೇಣ ರೌದ್ರರಸದ ಮುಖದಿಂದ ಶಾಂತ ರಸದ ಭಾವವನ್ನು ತೋರಿಸುತ್ತಾ ಬಿಳಿಯ ಕಮಲದಂತೆ ನಿಷ್ಕಲ್ಮಶವಾದ ಕಣ್ಣುಗಳಿಂದ ಎಲ್ಲರನ್ನೂ ನೋಡುತ್ತಾನೆ. ಎಲ್ಲರಿಗೂ ಅವನ ಕೃಪಾದೃಷ್ಟಿ ಆಪ್ಯಾಯಮಾನವಾಗಿರುತ್ತದೆ. ಹಿಂದೆ ಎಂದೂ ನೋಡದಂತಹ ಸಿಂಹ ಮುಖದ ಮನುಷ್ಯನ ಶರೀರವನ್ನು ಹೊಂದಿದ ವಿಶೇಷವಾದ ವಿಷ್ಣುವಿನ ನರಸಿಂಹಾವತಾರದಲ್ಲಿ ಪರಮ ಶಾಂತದೃಷ್ಟಿಯನ್ನು ಕಂಡರು - ಪುಂಡರೀಕದಂತಹ ಅಕ್ಷಿಯುಳ್ಳವನು - ಪುಂಡರೀಕಾಕ್ಷಾಯ ನಮಃ ಎಂದು ಹೊಗಳಿ ಪುನಃ ಪುನಃ ನಮಸ್ಕರಿಸಿದರು.

982. ದುರಿತಕ್ಷಯಾಯ ನಮಃ

ದುರಿತ - ಎಂದರೆ ಪಾಪಗಳು, ಸಂಕಟ, ವೇದನೆ, ತೊಂದರೆ, ಕಷ್ಟಗಳು - ಇವುಗಳನ್ನು, ಕ್ಷಯ - ಪತನ, ನಾಶಮಾಡುವವನು.

ಸಕಲ ರೀತಿಯ ಕಷ್ಟಕಾರ್ಪಣ್ಯಗಳನ್ನು ಮತ್ತು ಪಾಪದಗಂಟನ್ನು ಕ್ಷಣಮಾತ್ರದಲ್ಲಿ ನಾಶ, ಭಸ್ಮಮಾಡುವವನು - ಯಾರೋ ಅವನು - ಅವನೇ ಪರಮಾತ್ಮ. ಯಾವ ಜೀವಿಯೂ, ದೇವ, ದೇವತೆಯೂ ಈ ರೀತಿ ನಿರ್ಮೂಲವಾಗಿ ದುರಿತಗಳನ್ನು ಕ್ಷಯ ಮಾಡಲಾರರು. ಅವನೇ ದುರಿತಕ್ಷಯಾಯ ನಮಃ ಎಂದೇ ಸಮಂಜಸವಾಗಿ ನಮಸ್ಕರಿಸಲ್ಪಡುವವನು - ಆ ಪರಬ್ರಹ್ಮನಿಗೆ ನಮಸ್ಕಾರಗಳು.

983. ಕರುಣಾಸಿಂಧವೇ ನಮಃ

ಕರುಣೆ - ಎಂದರೆ ದಯೆಯ, ಸಿಂಧು - ಸಾಗರ, ಸಮುದ್ರ,

ಪರಿಮಿತಯಿಲ್ಲದ ಸಾಗರ, ಕಡಿಮೆಯಾಗದ ಸಾಗರ.

ಪರಮಾತ್ಮನು ಅಖಿಲಾಂಡ ಕೋಟಿ ಬ್ರಹ್ಮಾಂಡದ ಚರಾಚರ ವಸ್ತುಗಳಿಗೂ ಅಪರಿಮಿತ, ಅನಂತ ಜೀವಕೋಟಿಗೂ - ಪ್ರತಿ ದೇಹವನ್ನೂ ಧರಿಸಿದ ಶರೀರಿಯಾದ ಪ್ರತಿ ಜೀವ - ಆತ್ಮನಿಗೂ ನಿರಂತರ ಅಪಾರ ಕರುಣೆಯನ್ನು - ಕರುಣೆಯ ಬಿಂದುಗಳನ್ನು ಹಂಚುತ್ತಿದ್ದಾನೆ - ಹಂಚಿದ್ದಾನೆ, ಹಂಚುತ್ತಾನೆ - ದುರಿತ ಸಾಗರ, ಭವಸಾಗರ, ಸಂಸಾರ - ಪ್ರಕೃತಿ, ಪುರುಷ, ಮಾಯಾಪಾಶದಿಂದ ಬಿಡುಗಡೆ ಹೊಂದಲು ಆತ್ಮನಿಗೆ ಸಹಾಯಮಾಡುತ್ತಿದ್ದಾನೆ. - ಇದನ್ನು ಕಲ್ಪಾದಿಯಿಂದ ಕಲ್ಪಾದಿ - ಕಲ್ಪಾಂತ - ಸಮಯ ಯಾನದಲ್ಲಿ ಕರುಣಿಸುವುದೇ ಅವನ ಕೆಲಸ. ಜೀವಿಗಳಿಗೆ ಸೂಕ್ತವಾದ ಪ್ರೇರಣೆಯನ್ನು ಕೊಡುವವನೂ ಅವನೇ! ಸಂಸ್ಕಾರಗಳನ್ನು ಭಸ್ಮಮಾಡಿ ಆತ್ಮನನ್ನು ತಾನೇ ತಾನಾಗಿಸುವವನು ಪರಮಾತ್ಮನೇ! - ಕರುಣಾಸಿಂಧವೇ ನಮಃ.

**984.** ಸಮಿತಿಂಜಯಾಯ ನಮಃ

ಸ - ಮಿತ - ಮಿತಿಂ - ಜಯಾಯ - ನಮಃ

ಮಿತಿ - ಎಂದರೆ ಇಷ್ಟೇ, ಇಷ್ಟೆಂದು ವ್ಯಕ್ತವಾಗುವ ಎಲ್ಲೆ, ರೂಪರೇಖೆ, ಪರಿಮಿತ - ಅಳತೆ, ಪ್ರಮಾಣ, ಸಾಮ್ಯತೆ.

ಸ - ಎಂದರೆ ಕೂಡಿದ್ದು,

ಜಯ - ಎಂಧರೆ ಅದನ್ನು ಮೀರಿದವನು.

ಸಮಿತಿಂಜಯ - ಎಲ್ಲ ರೀತಿಯ ಅಳತೆ, ಪ್ರಮಾಣ, ಕಾಲದೇಶಗಳನ್ನು ಮೀರಿದವನು - ಯಾವ ರೀತಿಯಲ್ಲಿಯೂ ಅಳತೆಗೆ, ಮಾಯೆಗೆ, ಪ್ರಮಾಣಕ್ಕೆ, ಕಾಲಕ್ಕೆ, ದೇಶಕ್ಕೆ ಒಳಪಡಿಸಲ್ಪಡದಿರುವವನು - ಅದರಿಂದ ಅವನು - ಅಮಿತ, ಮಾಯಾತೀತ, ಕಾಲಾತೀತ, ಗುಣಾತೀತ, ದೇಶಾತೀತ, ಸಕಲ ರೀತಿಯ ಅತೀತನು. ಇಂತಹ ಅತೀತಗಳಿಗೂ ಅತೀತನು - ಅವನು ಅವನೇ! ಹೀಗೇ ಎಂದು, ಹೇಗೆ ಎಂದು, ಹಾಗೇ ಎಂದು, ಇದೇ ಎಂದು ಮಿತಮಾಡಲಸಾಧ್ಯನು - ಅಂದರೆ ಎಲ್ಲ ರೀತಿಯ ಸಮಿತಿಗಳಿಗೂ ಸಿಕ್ಕದವನು - ಸಮಿತಿಂಜಯನು - ಸಮಿತಿಂಜಯಾಯ ನಮಃ - ಎನ್ನಲ್ಪಡುವವನು.

*ನಾರಸಿಂಹ ನಮಸ್ತೇಽಸ್ತು ನಮಸ್ತೇ ಗರುಡಧ್ವಜ ।*
*ಯಜ್ಞಧ್ವಜ ನಮಸ್ತೇಽಸ್ತು ಕಾಲಧ್ವಜ ಜಯಧ್ವಜ ॥166॥*

*(985-988)*

**985.** ನಾರಸಿಂಹ ಗರುಡಧ್ವಜಾಯ ನಮಃ

ನಾರಸಿಂಹ - ನರಸಿಂಹನಿಗೆ ಸಂಬಂಧಪಟ್ಟಿದ್ದು - ನಾರಸಿಂಹ, ಗರುಡ

ಧ್ವಜ - ಗರುಡ ಪಕ್ಷಿಯನ್ನೇ ತನ್ನ ಚಿಹ್ನೆ, ಬಾವುಟವನ್ನಾಗಿ ಹೊಂದಿರುವವನು.

ಗರುಡನನ್ನೇ ಅವನ ಚಿತ್ರವನ್ನೇ ತನ್ನನ್ನು ನಿರ್ದೇಶಿಸುವ ಚಿಹ್ನೆ, ಬಾವುಟವನ್ನಾಗಿರಿಸಿಕೊಂಡಿರುವವನು - ಶ್ರೀ ನರಸಿಂಹಸ್ವಾಮಿಯು - ಶ್ರೀ ಮಹಾವಿಷ್ಣುವು.

ಗರುಡ ಪಕ್ಷಿಯೇ ಶ್ರೀ ಹರಿಗೆ ವಾಹನ.

ಗರುಡನು ವಿನತೆಯ ಮಗ, ಅತಿ ತೀಕ್ಷ್ಣ ದೃಷ್ಟಿಯುಳ್ಳ ಪಕ್ಷಿ. ಬಹಳ ಶ್ರೇಷ್ಠವಾದ ಪಕ್ಷಿ, ಅತಿ ವೇಗದಲ್ಲಿ ಸಂಚರಿಸುವ ಉತ್ಕೃಷ್ಟ ಪಕ್ಷಿ. ಎಷ್ಟು ದೂರದ್ದಾದರೂ ಅತಿ ಸೂಕ್ಷ್ಮದೃಷ್ಟಿಯಿಂದ ಕಂಡುಹಿಡಿಯಬಲ್ಲದು - ಪಕ್ಷಿಗಳ ರಾಜ - ಪಕ್ಷಿರಾಜನೇ ಗರುಡ - ಈತನು ಕಶ್ಯಪ ಹಾಗೂ ವಿನತೆಯ ಮಗ - ವಿಷ್ಣುವಿನ ವಾಹನ - ಅದರಿಂದ ವಿಷ್ಣುವು ಗರುಡನನ್ನು ವಾಹನವಾಗಿ ಉಪಯೋಗಿಸಿ ಹಾರಾಡುತ್ತಾನೆ - ಅವನು ಗರುಡವಾಹನ - ಗರುಡಧ್ವಜ - ಗರುಡಧ್ವಜಾಯ ನಮಃ.

*ಕುಂಕುಮಾಂಕಿತವರ್ಣಾಯ ಕುಂದೇಂದು ಧವಳಾಯ ಚ /*
*ವಿಷ್ಣುವಾಹನ ನಮಸ್ತುಭ್ಯಂ ಪಕ್ಷಿರಾಜಾಯ ತೇ ನಮಃ //*

ಎಂದು ಗರುಡನನ್ನು ನಮಸ್ಕರಿಸುತ್ತೇವೆ. ಅವನ ಧ್ವಜವುಳ್ಳವನು - ಮಹಾವಿಷ್ಣು.

ನರಸಿಂಹನೇ ವಿಷ್ಣು - ವಿಷ್ಣುವಿನ ಎಲ್ಲ ಅವತಾರಗಳಿಗೂ ಈ ನಾಮವು ಸಲ್ಲುತ್ತದೆ.

986. ಯಜ್ಞಧ್ವಜಾಯ ನಮಃ

ಸಕಲ ಯಜ್ಞಯಾಗಾದಿಗಳು ಭಗವಂತನನ್ನು - ವಿಷ್ಣು, ಅವನ ರೂಪ / ದೇವ ದೇವತೆಗಳನ್ನು ಉದ್ದೇಶಿಸಿ ಮಾಡಲ್ಪಡುತ್ತವೆ. ಯಜ್ಞವೇ ಪರಮಾತ್ಮನಿಗೆ ಅರ್ಪಿಸುವ ಪ್ರತೀಕ - ಉತ್ತಮ ಉನ್ನತವಾದ ಚಿಹ್ನೆ - ದಾರಿ - ಭೂಷಣ - ಅಲಂಕಾರ. ಯಜ್ಞಗಳನ್ನೇ ತನ್ನ ಧ್ವಜ, ಚಿಹ್ನೆ, ಗುರುತು - ಅರ್ಪಣೆಯ ಪ್ರತೀಕವಾಗಿರಿಸಿಕೊಂಡಿರುವವನು - ಮಹಾವಿಷ್ಣು.

ಪರಮಾತ್ಮನನ್ನು ಮಂತ್ರ ಮತ್ತು ಅಗ್ನಿಯಲ್ಲಿ ಸಮರ್ಪಿಸುವ ಹವಿಸ್ಸಿನಿಂದ ಅಲಂಕರಿಸುವ ವಿಧಾನವೇ ಯಜ್ಞಗಳು - ಅದರಿಂದ ಅವನು ಯಜ್ಞಧ್ವಜನು - ಯಜ್ಞಧ್ವಜಾಯ ನಮಃ ಎನ್ನುತ್ತೇವೆ.

987. ಕಾಲಧ್ವಜಾಯ ನಮಃ

ಕಾಲ - ಎಂದರೆ ಸಮಯ, ಮೃತ್ಯುದೇವತೆ - ಯಮ, ಶನಿ, ಮುಂತಾದವು.

ಮುಖ್ಯವಾದ ಅರ್ಥ ಸಮಯ, ಮೃತ್ಯುದೇವತೆ.

ಸಮಯ - ಪರಮಾತ್ಮನ ಸಕಲ ಸೃಷ್ಟಿ, ಸ್ಥಿತಿ, ಲಯ, ಜೀವಿಗಳ ದಾರಿಗಳು, ಘಟನೆಗಳು ಸಮಯದ ಗಣಿತ - ಗಣನೆಯನ್ನೇ ಅವಲಂಬಿಸಿವೆ.

ಕಾಲ - ಸಮಯವೆಂಬುದು ಸಕಲದ ಗಣನೆಗೆ ಆಧಾರ - ಎಂದ ಮೇಲೆ ಇದು ಪರಮಾತ್ಮನ ಅತ್ಯನ್ನತವಾದ ಸಕಲಕ್ಕೂ ಬೇಕೇ ಬೇಕಾದ ಅವಶ್ಯಕವಾದ ಚಿಹ್ನೆ - ಧ್ವಜದೋಪಾದಿಯಲ್ಲಿ ಇದೆ. ಕಾಲವು ಪರಮಾತ್ಮನ ರೂಪ - ಅದರಿಂದ ಅವನು ಕಾಲಧ್ವಜ.

ಅಥವಾ

ಕಾಲವೆಂದರೆ ಮೃತ್ಯುದೇವತೆ - ಯಮ ಎಂದು ಅರ್ಥಮಾಡಿದಾಗ - ಸೃಷ್ಟಿ, ಸ್ಥಿತಿ, ಲಯಗಳು ನಡೆಯದಿದ್ದರೆ ಜೀವಿಗಳು ಸಂಸಾರ ಸಾಗರಕ್ಕೇನೆ ಬರಲು ಸಾಧ್ಯವಾಗುತ್ತಿರಲಿಲ್ಲ. ಇದು ಸಂಸಾರ ಚಕ್ರ. ಅನೇಕ ಯೋನಿಗಳಲ್ಲಿರುವ ಶರೀರಗಳನ್ನು ಆತ್ಮನು ಜೀವಿಯಾಗಿ ಧರಿಸಲೇಬೇಕು - ಇದು ಪರಮಾತ್ಮನ ಸಂಕಲ್ಪ. ಇದಕ್ಕೆ ಮೃತ್ಯುದೇವತೆಯ ಅವಶ್ಯಕತೆ ಇದ್ದೇ ಇದೆ. ಶರೀರಗಳನ್ನು ಧರಿಸಬೇಕಾದರೆ ವಿಸರ್ಜನೆಯೂ ಆಗಲೇ ಬೇಕು - ಮೃತ್ಯುವು ನಡೆಯಲೇ ಬೇಕು - ಜನನವಾಗಲು ಮೃತ್ಯುವು ಬೇಕೇ ಬೇಕು - ಇದು ಸೃಷ್ಟಿ ನಿಯಮ. - ಕಾಲನ ಅವಶ್ಯಕತೆ ಇರಲೇ ಬೇಕು. ಪ್ರತಿ ಆತ್ಮನಿಗೂ ಇದು ಪರಮ ಪವಿತ್ರವಾದ ಅವಶ್ಯಕತೆ - ಅದರಿಂದ ಕಾಲವನ್ನು ಚಿಹ್ನೆಯನ್ನಾಗಿ ತಿಳಿಯಬೇಕು - ಕಾಲಧ್ವಜ. ಕಾಲಧ್ವಜನಿಗೆ ನಮಸ್ಕಾರಗಳು.

988. ಜಯಧ್ವಜಾಯ ನಮಃ

ಜಯ - ಎಂದರೆ ಗೆಲ್ಲುವುದು, ಎದುರಾಳಿಗಳನ್ನು ಗೆಲ್ಲುವುದು - ಪರಮಾತ್ಮನಿಗೆ ಎದುರಾಳಿಗಳು ಯಾರೂ ಇಲ್ಲ. ಸೋಲೆಂಬುದು ಅವನಿಗೇ ತಿಳಿಯದು. ಎಲ್ಲಿ ಹೋದರೂ, ಯಾವ ಸಮಸ್ಯೆಯೇ ಬಂದರೂ, ಎಂತಹ ವರಪ್ರದಾತರಾದ ಶತ್ರುಗಳೇ ಆದರೂ ಆ ವರಕ್ಕೆ ಸಮಂಜಸವಾದ ರೂಪ, ಉಪಾಯಗಳನ್ನು ಹುಡುಕಿ ಅವರನ್ನು ಸಂಹಾರ ಮಾಡುವವನು - ಮಹಾವಿಷ್ಣು. ಅದರಿಂದ ಅವನಿಗೆ ಜಯವನ್ನೇ ತನ್ನ ಬಳುವಳಿಯಾಗಿ, ಚಿಹ್ನೆಯಾಗಿ, ಧ್ವಜವಾಗಿ ನಡೆಯುವವನು - ಪರಮಾತ್ಮನು - ಪರಬ್ರಹ್ಮನೆಂದರೆ, ಜಯದ ಗುರುತು.

*ಯತ್ರಯೋಗೀಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ।*
*ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥*

*(ಶ್ಲೋಕ 78, ಅಧ್ಯಾಯ 18, ಗೀತಾ)*

ಪರಮಾತ್ಮನಿದ್ದಲ್ಲಿ ಜಯವು ನಿಶ್ಚಯ - ಅವನೇ ಜಯಧ್ವಜ, ಅವನಿಗೇ ಜಯಧ್ವಜಾಯ ನಮಃ ಎನ್ನುತ್ತೇವೆ.

*ಅಗ್ನಿನೇತ್ರ ನಮಸ್ತೇऽಸ್ತು ನಮಸ್ತೇ ಹ್ಯಮರಪ್ರಿಯ ।*
*ಮಹಾನೇತ್ರ ನಮಸ್ತೇऽಸ್ತು ನಮಸ್ತೇ ಭಕ್ತವತ್ಸಲ ॥167॥ (989-992)*

989. ಅಗ್ನಿನೇತ್ರಾಯ ನಮಃ

ಅಗ್ನಿನೇತ್ರ - ಅಗ್ನಿಯನ್ನೇ, ನೇತ್ರ - ಕಣ್ಣಾಗಿ ಉಳ್ಳವನು - ಮಹಾದೇವ. ಶಿವನು ತನ್ನ ಮೂರನೆಯ ಕಣ್ಣಿನಲ್ಲಿ ಅಗ್ನಿಯುಳ್ಳವನಾಗಿದ್ದಾನೆ. ಅವನಿಗೆ ತ್ರಿನೇತ್ರ ಎಂದು ಹೆಸರು, ಹಣೆಯಲ್ಲಿರುವ ಮೂರನೆಯ ಕಣ್ಣಿನಿಂದ ಅಗ್ನಿಜ್ವಾಲೆಯನ್ನು ಬಿಟ್ಟು ತಪಸ್ಸನ್ನು ಭಂಗಪಡಿಸಲು ಬಂದ ಮನ್ಮಥನನ್ನು ಅಂದರೆ ಕಾಮದೇವನನ್ನು ದಹಿಸಿಬಿಟ್ಟನು - ಇದರಿಂದ ಶಿವನಿಗೆ ಅಗ್ನಿನೇತ್ರ ಎಂಬ ನಾಮವು ಸ್ಥಿರವಾಯಿತು. - ಅಗ್ನಿನೇತ್ರಾಯ ನಮಃ.

990. ಅಮರಪ್ರಿಯಾಯ ನಮಃ

ಅಮರ - ಎಂದರೆ ಅಮೃತವನ್ನು ಕುಡಿದವರಾದ್ದರಿಂದ ದೇವತೆಗಳಿಗೆ ಮೃತ್ಯುವಿಲ್ಲ, ಆದರಿಂದ ಅವರು ಅಮರರು, ಮೃತ್ಯುವಿಲ್ಲದವರು.

ಪ್ರಿಯ ಎಂದರೆ ಬೇಕಾದವನು.

ವಿಷ್ಣುವು ದೇವತೆಗಳಿಗೆ ಯಾವ ತರಹದ ತೊಂದರೆ ಬಂದರೂ ಕಾಪಾಡುವವನು - ಅದರಿಂದ ಅವನು ಅಮರಪ್ರಿಯನು. ಎಲ್ಲರೂ ಅವನನ್ನು ಅಮರಪ್ರಿಯಾಯ ನಮಃ ಎಂದು ನಮಸ್ಕರಿಸುತ್ತಾರೆ.

ಪರಮಾತ್ಮನೇ ದೇವತೆಗಳಿಗೂ ರಾಕ್ಷಸರಿಗೂ ಕ್ಷೀರಸಾಗರದ ಮಥನ ಕಾಲದಲ್ಲಿ ಆದ ಜಗಳವನ್ನು ಬಿಡಿಸಿ ಅಮೃತವನ್ನು ಹಂಚಲು ಮೋಹಿನಿಯ ಅವತಾರವೆತ್ತಿದನು. ಚಾಕಚಕ್ಯತೆಯ ಮಾತುಗಳಿಂದ ರಾಕ್ಷಸರನ್ನು ಮೋಹಗೊಳಿಸಿ ದೇವತೆಗಳಿಗೆ ಅಮೃತವನ್ನು ಹಂಚಿದನು. ಇದೇ ರೀತಿ ಅನೇಕ ಸಲ ಅವರನ್ನೇ ಕಾಪಾಡಿದ್ದಾನೆ. ಕಾರಣ ದೇವತೆಗಳು ತಮ್ಮ ಭಕ್ತಿಯಿಂದ ಪರಮಾತ್ಮನನ್ನು ಗೆದ್ದಿದ್ದಾರೆ. ಪ್ರಿಯರಾಗಿದ್ದಾರೆ. ಅವನೂ ಸಹ ದೇವತೆಗಳಿಗೆ ಪ್ರಿಯನಾಗಿದ್ದಾನೆ - ಅಮರಪ್ರಿಯನು.

991. ಮಹಾನೇತ್ರಾಯ ನಮಃ

ನೇತ್ರ - ಎಂದರೆ ಕಣ್ಣುಗಳು, ಮಹಾ - ಎಂದರೆ ಮಹತ್ತಾದುದು - ಮಹಾ - ದೊಡ್ಡದು, ಗುಣದಲ್ಲಿ ದೊಡ್ಡದು, ತೀಕ್ಷ್ಣತೆ, ದಯೆ, ಕರುಣೆ, ಎಂಬ ಗುಣ, ಭಾವಗಳಲ್ಲಿ ದೊಡ್ಡದು.

ಪರಮಾತ್ಮನ ಕಣ್ಣುಗಳು ವಿಶೇಷವಾದವುಗಳು. ಅವು ಅವನ ಹೃದಯದ, ಮನಸ್ಸಿನ ಭಾವಗಳನ್ನು ಎತ್ತಿ ತೋರಿಸುತ್ತವೆ. ಭಕ್ತರ ಭಾವನೆಗಳನ್ನು, ಆಳವಾದ ಶ್ರದ್ಧೆ ಮತ್ತು ಅವ್ಯಭಿಚಾರಿಣೀ ಭಕ್ತಿಯನ್ನು ಸ್ಪಂದಿಸಿ ಈತನ ಹೃದಯ,

ಮನಸ್ಸುಗಳು ಮಹಾನೇತ್ರಗಳಾಗಿ ಹೋಗುತ್ತವೆ. ಅವನು ತೋರುವ ಯಾವುದೇ ರೀತಿಯ ಕಳಕಳಿಯು ಈ ನೇತ್ರಗಳಿಂದ ಮನಸ್ಸನ್ನು ಎಳೆಯುತ್ತದೆ. ನಯನ ಮನೋಹರವಾದ ಕಣ್ಣುಗಳಿಂದ ದೃಷ್ಟಿಯ ಕಡೆನೋಟಗಳೂ ಸಹ ಮಹಾನ್ ಆಗುತ್ತವೆ. ಅವನ ದೃಷ್ಟಿಯು ಬಿದ್ದ ಶರೀರವನ್ನು ಧರಿಸಿರುವ ಆತ್ಮನು ಮೇಲ್ಮಟ್ಟಕ್ಕೆ ಹೋಗುತ್ತದೆ.

ಅಥವಾ ದುಷ್ಟಶಿಕ್ಷಣದಲ್ಲಿ ಇವನು ದೃಷ್ಟಿಮಾತ್ರವನ್ನು ಬಿಟ್ಟರೂ ಮತ್ತು ಇವನು ಸ್ಪರ್ಶ ಮಾಡಿದರೂ ಸರಿ, ಅವು ಉನ್ನತ ಪವಿತ್ರತೆಯನ್ನು ಪಡೆಯುತ್ತವೆ. ಆ ಆತ್ಮಗಳು ಮುಕ್ತಿಯನ್ನು ಪಡೆದರೂ ಪಡೆಯಬಹುದು. ಏಕೆಂದರೆ ಅವನ ಶತ್ರುಗಳೂ ಸಹ ಅವನ ನಾಮವನ್ನೇ ಅನವರತ ವಿರೋಧ ಭಾವದಿಂದ ಸ್ಮರಿಸುತ್ತಿರುತ್ತಾರೆ. ಅವನ ಕೃಪಾದೃಷ್ಟಿಯಿಂದ ಯಾರು ಏನನ್ನೂ ಸಾಧಿಸಬಹುದು.

*''ಮೂಕಂ ಕರೋತಿ ವಾಚಾಳಂ ಪಂಗುಂ ಲಂಘಯತೇ ಗಿರಿಮ್ ।*
*ಯತ್ಕೃಪಾ ತಮಹಂ ವಂದೇ ಪರಮಾನಂದಮಾಧವನಮ್ ॥''*

ಅವನ ಕೃಪಾದೃಷ್ಟಿಯ ದೃಷ್ಟಿ - ಅದಕ್ಕೆ ಮಿತಿಯೇ ಇಲ್ಲ - ಮಹಾನೇತ್ರನು - ಮಹಾನೇತ್ರಾಯ ನಮಃ ಎಂದರೆ ಅವನೇ!

**992. ಭಕ್ತವತ್ಸಲಾಯ ನಮಃ**

ವತ್ಸ - ಎಂದರೆ ಮಗು, ಕರು,

ವತ್ಸಲ - ಪ್ರೀತಿ, ಪ್ರೇಮ, ಸ್ನೇಹ, ವಾತ್ಸಲ್ಯ - ಪ್ರೀತಿಯ ಭಾವ,

ಭಕ್ತವತ್ಸಲ - ಎಂದರೆ ಭಕ್ತರನ್ನು ತನ್ನ ಅತ್ಯಂತ ಹತ್ತಿರದ ಭಾವ, ಪ್ರೀತಿಯಿಂದ ನೋಡಿಕೊಳ್ಳುವವನು. ಇದು ಸತ್ಯವೇ! ಆತ್ಮಗಳು ಅವನಿಂದಲೇ ಬಂದಿರುವುದರಿಂದ, ಅವುಗಳನ್ನು ಹೊರಗೆ ಹಾಕಿದವನು ತಾನೇ ಅವುಗಳನ್ನು ಒಳಗೆ ಕರೆದುಕೊಳ್ಳುತ್ತಾನೆ. ಅದರಿಂದ ಅವನನ್ನೇ ನಂಬಿದ ಆತ್ಮಗಳಿಗೆ ವಾತ್ಸಲ್ಯವೆಂಬ ಅಮೃತವನ್ನು ಕುಡಿಸಿ ಭವಸಾಗರದ ಬಿಡುಗಡೆಗೆ ದಾರಿಮಾಡುತ್ತಾನೆ. ಇದನ್ನ ತಿಳಿಯದ ಅಥವಾ ಅವನ ಕೃಪೆಯ ಪ್ರಭಾವವನ್ನು ತಿಳಿಯದೆ ಶರೀರ ಹೊಂದಿದ ಜೀವಿಗಳು ಸಂಸಾರ ಸಾಗರದಲ್ಲಿ ತೊಳಲಾಡುತ್ತಲೇ ಇರಬೇಕು, ಕೋಟ್ಯಾನುಕೋಟಿ ಯೋನಿಗಳಲ್ಲಿ ಶರೀರವನ್ನು ಹೊತ್ತು ಸಮಯದ ಉದ್ದಕ್ಕೂ ಹೋಗುತ್ತಲೇ ಇರಬೇಕು. ಹೀಗೆ ಅವನ ಕೃಪೆಯಿಂದ ದೂರ ಹೋದವರಿಗೆ ಅವರವರ ಸಂಸ್ಕಾರವೇ ಕಾರಣ - ಭಕ್ತವತ್ಸಲಾಯ ನಮಃ.

ಈ ಪರಮಾತ್ಮನ ಕರುಣೆಯನ್ನು ಹೊಂದಬೇಕಾದರೆ ಯಾವಾಗಲೋ,

ಯಾವುದೋ ರೂಪದಲ್ಲಿ ಗುರುವನ್ನು ಅವನೇ ಕರುಣಿಸುತ್ತಾನೆ. ಆ ಗುರುವಿನ ಉಪದೇಶದಿಂದ ಶರೀರವನ್ನು ಧರಿಸಿರುವ ಆತ್ಮಕ್ಕೆ ಸಂಸಾರ ಬಂಧನದಿಂದ ಮತ್ತು ಸಂಸ್ಕಾರ ಮತ್ತು ಪ್ರಾರಬ್ಧ, ಸಂಚಿತ ಮತ್ತು ಆಗಮ ಕರ್ಮಗಳಿಂದ ಬಿಡುಗಡೆಯ ದಾರಿಯು ಕಾಣುತ್ತದೆ. ಅವನು ಅದನ್ನು ಭದ್ರವಾಗಿ ಹಿಡಿದುಕೊಂಡು ಎಡೆಬಿಡದೆ, ಪೂಜೆ, ಭಜನೆ, ಜಪ, ತಪ, ಧ್ಯಾನಾದಿಗಳನ್ನು ಮಾಡಬೇಕು. ಇದರಿಂದ ಭಗವಂತನ ವಾತ್ಸಲ್ಯವನ್ನು ನಾವು ಪಡೆಯಲು ಸಾಧ್ಯ. ನಿರಂತರ ಇದನ್ನು ಪಡೆದರೆ ಭವಸಾಗರವನ್ನು ದಾಟಬಹುದು - ಅದನ್ನು ತಾರಿಸುವವನು ಅವನೇ! ಕರುಣಾಪೂರ್ಣನಾದ ಭಕ್ತವತ್ಸಲನೇ ಅವನು! ಭಕ್ತವತ್ಸಲಾಯ ನಮಃ.

*ಧರ್ಮನೇತ್ರ ನಮಸ್ತೇಽಸ್ತು ನಮಸ್ತೇ ಕರುಣಾನಿಧೇ ।*
*ಪುಣ್ಯನೇತ್ರ ನಮಸ್ತೇಽಸ್ತು ನಮಸ್ತೇಽಭೀಷ್ಟದಾಯಕ ॥168॥*
*(993-996)*

993. ಧರ್ಮನೇತ್ರಾಯ ನಮಃ

ಧರ್ಮನೇತ್ರ - ಧರ್ಮವನ್ನೇ ಕಣ್ಣಾಗಿ ಅದರಂತೆ ನೋಡುವವನು. ಧರ್ಮನೇತ್ರ - ಧರ್ಮವೇ ಅವನ ಕಣ್ಣು.

ಸದಾ ಧರ್ಮದ ಮೂಲಕ ನೋಡುವವನು ಯಾರೋ ಅವನು - ಪರಮಾತ್ಮ.

ಪರಮಾತ್ಮನ ಧರ್ಮ - ಭಕ್ತರನ್ನು ರಕ್ಷಿಸುವುದು, ಶಿಷ್ಟರನ್ನು ಪಾಲಿಸುವುದು - ದುಷ್ಟರನ್ನು ಶಿಕ್ಷಿಸುವುದು.

ತಾನೇ ಕಾಮಿಸಿದ ಸೃಷ್ಟಿ, ಸ್ಥಿತಿ, ಲಯ, ಜಗತ್ತು, ಪ್ರಕೃತಿ, ಪುರುಷ, ಮಾಯೆಗಳನ್ನು ನಿರಂತರ ನಡೆಸುವುದೇ ಪರಮಾತ್ಮನ ಧರ್ಮ. ಮತ್ತು ತನ್ನ ದೇಹದಿಂದ ಸಂಸಾರ ಸಾಗರದೊಳಗೆ ಹೋಗಿರುವ ಆತ್ಮಗಳನ್ನು ಮತ್ತೆ ತನ್ನೊಳಗೆ ಬರಮಾಡಿಕೊಳ್ಳುವುದೇ ಧರ್ಮ.

ಇದಕ್ಕೆ ಬೇಕಾದ ಸಲಕರಣೆಗಳು, ಭಕ್ತಿ, ಜ್ಞಾನ, ವೈರಾಗ್ಯಗಳು ಶರೀರದಲ್ಲಿರುವ ಆತ್ಮನೊಡನೆ ಅಂಟಿಕೊಂಡಿರುವ ಬುದ್ಧಿ ಮನಸ್ಸು, ಅಹಂಕಾರ, ಚಿತ್ತ, ಇಂದ್ರಿಯಗಳಿಗೆ ಅರ್ಥವತ್ತಾಗಿ ಬರುವಂತೆ ಮಾಡುವುದೇ ಅವನ ಧರ್ಮದ ಕಣ್ಣಿನ ದೃಷ್ಟಿ - ಅದರಿಂದ ಅವನು ಧರ್ಮನೇತ್ರನು, ಅಥವಾ

ಕೃಪಾದೃಷ್ಟಿಯೇ ಪರಮಾತ್ಮ ಧ್ಯೇಯ.

ಕ್ರೂರ ದೃಷ್ಟಿಯನ್ನೇನಾದರೂ ಬೀರಿದನಾದರೆ ಆ ಶರೀರದಲ್ಲಿರುವ ಆತ್ಮಕ್ಕೆ ಜ್ಞಾನವನ್ನು ಕೊಡುವ ಅವನ ದೃಷ್ಟಿ ಇದ್ದೇ ಇರುತ್ತದೆ.

ಎಚ್ಚರಗಳಿಸುವುದಕ್ಕೆ ಅವನು ಸ್ವಲ್ಪ ಸ್ವಲ್ಪ ಮಂದ ರೀತಿಯಲ್ಲಿರುವ ಹಾಗೆ ಗೋಚರನಾಗುತ್ತಾನೆ. ಇದೂ ಸಹ ಅವನ ಧರ್ಮನೇತ್ರದ ರೀತಿ.

994. ಕರುಣಾನಿಧಯೇ ನಮಃ

ಕರುಣೆ - ದಯೆ - ಕೃಪೆ, ಎಂಬುದನ್ನು ಸಕಲ ಜೀವಿಗಳೂ ಅಪೇಕ್ಷಿಸುತ್ತಾರೆ. ಯಾವಾಗ ಕಷ್ಟ ಬರುವುದೋ, ದುಃಖ ಇರುವುದೋ ಆಗ ಯಾರೇ ಆದರೂ ಇತರರ ಸಹಾನುಭೂತಿಯನ್ನು ಅಪೇಕ್ಷಿಸುತ್ತಾರೆ. ಪರಮಾತ್ಮನ ಕರುಣೆಯು ಸದಾ ಸಿದ್ಧವಿರುತ್ತದೆ. ಆದರೆ ಅದನ್ನು ಆಳವಾದ, ಪರಿಶುದ್ಧವಾದ ಮನಸ್ಸಿನಿಂದ ಮತ್ತು ವಿವೇಕಯುತ ಬುದ್ಧಿಯಿಂದ ಅಹಂಕಾರರಹಿತವಾಗಿ ಕರೆಯಬೇಕು. ಆಗ ಭಗವಂತನು ಓಡಿಬಂದು ತನ್ನ ಕರುಣಾರಸವನ್ನು ವರ್ಷಿಸುತ್ತಾನೆ. ಇದು ಅವನ ನಿಧಿ - ಶ್ರೀ ಸಮಾನ - ಸಂಪತ್ತಿಗೆ ಸಮಾನ. ಈ ನಿಧಿಯನ್ನು ಎಲ್ಲರೂ ಆಶಿಸುತ್ತಾರೆ. ತಮ್ಮಲ್ಲಿರುವ ಈ ಕರುಣಾರಸವನ್ನು ಆರ್ತರಾದವರಿಗೆ ಕೊಡುತ್ತಾರೆ. ಆದರೆ ಅದರಲ್ಲಿ ಒಂದು ಸ್ವಾರ್ಥತೆ ಇರುತ್ತದೆ. ಅದರಿಂದ ಕೃತಜ್ಞತೆಯನ್ನು ಮತ್ತು ಮುಂದೆ ಅನುಕೂಲವನ್ನು ಅಪೇಕ್ಷಿಸುತ್ತಾರೆ. ಆದರೆ ಪರಮಾತ್ಮನು ಕರುಣಾರಸವನ್ನು ಹರಿಸುವಾಗ ಜೀವಿಯಿಂದ ಏನನ್ನೂ ಆಶಿಸುವುದಿಲ್ಲ, ಆಶಿಸಿದರೂ ಭಕ್ತಿಯನ್ನೇ. ಇಂತಹ ನಿಷ್ಕಾಮ ಕರುಣಾನಿಧಿ ಭಗವಂತನಲ್ಲದೇ ಬೇರೊಬ್ಬರಿಲ್ಲ. ಅದರಿಂದಲೇ ಸರ್ವ ಜೀವಿಗಳು ಅಖಿಲಾಂಡ ಕೋಟಿ ಬ್ರಹ್ಮಾಂಡದಲ್ಲಿರುವ ಸಕಲ ಜೀವಕೋಟಿ - ಸಚರಾಚರ ವಸ್ತುಗಳು ಇವನೊಬ್ಬನನ್ನೇ ಆಶ್ರಯಿಸುವುದು. ಇಷ್ಟು ಕರುಣೆಯನ್ನು ಅನಾದಿ, ಕಲ್ಪಾದಿಯಿಂದ ವರ್ಷಿಸುತ್ತಿದ್ದರೂ ಅವನ ಕರುಣಾನಿಧಿ, ಕರುಣಾಸಾಗರ, ದಯಾಮಯತೆ ಏನೂ ಕುಗ್ಗಿಲ್ಲ, ಇನ್ನೂ ಪರಿಪೂರ್ಣವಾಗಿಯೇ ಇದೆ, ಇತ್ತು, ಮುಂದೆಯೂ ಇರುತ್ತದೆ. ಅದರಿಂದ ಅವನು ಶಾಶ್ವತನಾದ ಕರುಣಾನಿಧಿ - ಇಂತಹವನಿಗೆ ಕರುಣಾನಿಧಯೇ ನಮಃ ಎಂದು ಆತ್ಮಗಳು ಶರೀರ ಕೋಟಿ ಕೋಟಿಗಳಿಂದ ಕೋಟಿ ಕೋಟಿ ಅಗಣಿತವಾಗಿ ನಮಸ್ಕರಿಸುತ್ತೇವೆ.

995. ಪುಣ್ಯನೇತ್ರಾಯ ನಮಃ

ಪುಣ್ಯ - ಎಂದರೆ ಒಳ್ಳೆಯ, ಸತ್ಕಾರ್ಯದಿಂದ ಗಳಿಸುವ ಫಲ. ಶರೀರವು ಪುಣ್ಯ ಪಾಪಗಳನ್ನು ಪ್ರತಿಕ್ಷಣವೂ ಗಳಿಸುತ್ತಲೇ ಇರುತ್ತದೆ. ಪರಮಾತ್ಮನ ನೇತ್ರ - ಕಣ್ಣುಗಳು ಪುಣ್ಯದ ಗಣಿ, ಪುಣ್ಯದ ಸಾಗರ, ''ಪರೋಪಕಾರಾರ್ಥಮಿದಂ ಶರೀರಂ । ಪಾಪಾಯ ಪರಪೀಡನಮ್''. ಪರಮಾತ್ಮನಾದರೂ ಪುಣ್ಯನೇತ್ರನು. ಅವನನ್ನು ನೋಡಿದಾಕ್ಷಣ, ಅವನ ದೃಷ್ಟಿ ಬಿದ್ದಾಕ್ಷಣ, ''ಕೋಟಿ ಜನ್ಮಕೃತಂ ಪಾಪಂ ತತ್ತತ್ ಕ್ಷಣೇ ವಿನಶ್ಯತಿ''. - ಪರಮ

ಕರುಣಾಳು, ಅವನು ಮಾಡುವ ಪುಣ್ಯ ಕಾರ್ಯಗಳಿಗೆ ಲೆಕ್ಕವಿಲ್ಲ. ಎಲ್ಲಾ ಅವನ ನಿಷ್ಕಾಮ ಪುಣ್ಯ. ಭಕ್ತಿ ವರ್ಧನೆಗಾಗಿ! ಸೋಽಕಾಮಯತ - ತನ್ನ ಕಾಮನೆಗಾಗಿ! ತನ್ನ ಆಟಕ್ಕಾಗಿ ಅಷ್ಟೆ! ತನ್ನ ಸಂಕಲ್ಪದಂತೆ ಪುಣ್ಯನೇತ್ರನೂ ಆಗಿದ್ದಾನೆ.

996. ಅಭೀಷ್ಟದಾಯಕಾಯ ನಮಃ

ಅಭೀಷ್ಟ - ಎಂದರೆ ಇಚ್ಛೆಗಳನ್ನು, ದಾಯಕ - ನಡೆಸಿಕೊಡುವವನು.

ಅಭೀಷ್ಟದಾಯಕ - ಕೇಳಿದ ಇಷ್ಟಗಳನ್ನು ಕೊಡುವವನು. ಯಾರು ಏನು ವರವನ್ನು ಕೇಳುತ್ತಾರೆಯೋ ಅದನ್ನು ಪರಮಾತ್ಮನು ಇಲ್ಲವೆನ್ನುವ ಇಚ್ಛೆಯೇ ಇಲ್ಲ.

ಆದರೆ ಅದೂ ಇದೆ - ಅಮರತ್ವ, ಯಾವ ಜೀವಿಗೂ ಇದನ್ನು ಅವನು ಕೊಡುವುದಿಲ್ಲ. ಇದರಲ್ಲಿ ಅವನ ಸಂಕಲ್ಪದ ರೀತಿ ಲೋಕ ಕಲ್ಯಾಣವೇ ಮುಂದೆ ಬರುತ್ತದೆ. ಆದರೆ ಪರಮ ಭಕ್ತರು ಭಕ್ತಿಯೆಂಬ ಹಗ್ಗದಿಂದ ಕಟ್ಟಿಹಾಕಿ ಇದನ್ನು ಕೇಳಿದ್ದಾರೆ, ಆಗ ಪರಮಾತ್ಮನು ಸಂಪೂರ್ಣವಾಗಿ ಕೊಡದೆ ಅವನ ಸಂಹಾರಕ್ಕಾಗಿ ಒಂದು ದಾರಿಯನ್ನಿಟ್ಟು ವರ ಕೊಡುತ್ತಾನೆ. ಮಹಾ ಮಹಾ ಭಕ್ತರಾದ ರಾಕ್ಷಸರ ರೀತಿ ಇದು. ಹೇಗಾದರೂ ವರ ಪಡೆದು ದುರುಪಯೋಗ ಪಡಿಸಿಕೊಳ್ಳುವುದು. ಅದರಿಂದ ಅವರಿಗೆ ಅಮರತ್ವದ ವರ ದೊರೆಯಲಿಲ್ಲ.

ಅಮರತ್ವ, ಚಿರಂಜೀವಿತನವನ್ನು ಪಡೆದ ಮಹಾಭಕ್ತರು, ಮಹಾ ಮಹಾನ್ ಸೇವಕರು ಇದ್ದಾರೆ.

ಧೃವ, ಆಂಜನೇಯ, ವಿಭೀಷಣ, ದ್ವಿಂದ, ಮಾಗದ, ಜಾಂಬುವಂತರು.

ಅಶ್ವತ್ಥಾಮ, ಬಲಿ, ವ್ಯಾಸ, ಹನುಮಾನ್, ವಿಭೀಷಣ, ಕೃಪ, ಪರಶುರಾಮ - 7 ಚಿರಂಜೀವಿಗಳು.

*ಅಶ್ವತ್ಥಾಮೋ ಬಲಿರ್ವ್ಯಾಸೋ ಹನುಮಾಂಶ್ಚ ವಿಭೀಷಣಃ ।*

*ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಂಜೀವಿನಃ ॥*

ಎಂದು ಇದೆ. ಹೀಗೆ ಅನೇಕಾನೇಕರು.

ಅಭೀಷ್ಟದಾಯಕರು ಯಾರಾದರೂ ಯಾರು ಬೇಕಾದರೂ ಆಗಬಹುದು. ಆದರೆ ಪರಮಾತ್ಮನ ಸಮಕ್ಕೆ ಅಥವಾ ಅವನನ್ನು ಮೀರುವವರೂ ಯಾರೂ ಇಲ್ಲ. ಅವನು ಅನಭಿಷಿಕ್ತ ಪರಮೋತ್ತಮ ಅಭೀಷ್ಟದಾಯಕನು.

*ನಮೋ ನಮಸ್ತೇ ಜಯಸಿಂಹರೂಪ*

*ನಮೋ ನಮಸ್ತೇ ವನ ಸಿಂಹರೂಪ ।*

*ನಮೋ ನಮಸ್ತೇ ರಣಸಿಂಹರೂಪ*
*ನಮೋ ನಮಸ್ತೆ ನರಸಿಂಹರೂಪ ॥169॥ (97-1000)*

ಬ್ರಹ್ಮದೇವರು ಸಹಸ್ರನಾಮಗಳನ್ನು ಹೇಳುತ್ತಾ ತಮ್ಮ ಪ್ರಾರ್ಥನೆಯ ಕಡೆಯ ಶ್ಲೋಕದಲ್ಲಿ ನರಸಿಂಹಸ್ವಾಮಿಗೆ ಮಂಗಳವನ್ನು ಹೇಳುತ್ತಾ, ನಮಸ್ಕರಿಸುತ್ತಾರೆ - ಒಟ್ಟು 168 ಶ್ಲೋಕಗಳಲ್ಲಿ ಒಂದು ಸಾವಿರ ನಾಮಗಳನ್ನು ಪಾಡಿ, ಪೊಗಳಿ, ಕೊಂಡಾಡುತ್ತಿದ್ದಾರೆ. ನರಸಿಂಹನನ್ನ - ಪ್ರಾರಂಭದಲ್ಲಿದ್ದ ನರಸಿಂಹ ಸ್ವಾಮಿಯ ಕರಾಳ, ಉಗ್ರರೂಪ, ಮುಖ ಭಾವಗಳು ಸ್ತೋತ್ರವನ್ನು ಕೇಳುತ್ತಾ, ಕೇಳುತ್ತಾ ಶಾಂತತೆಯನ್ನು ಹೊಂದುತ್ತವೆ. ಕೊನೆಯ ಇಪ್ಪತ್ತೆರಡು ನಾಮಗಳು ಸೌಮ್ಯತೆಯನ್ನು ವರ್ಧಿಸುತ್ತವೆ.

997. ಜಯಸಿಂಹಾಯ ನಮಃ

ಪರಮಾತ್ಮನಿಗೆ ಜಯ ಹಾಡಿದ್ದಾರೆ. ಸದಾ ಜಯ. ಅಪಜಯವೇ ಅವನಿಗಿಲ್ಲ. ಅವನನ್ನು ಸೋಲಿಸುವವರೇ ಇಲ್ಲ. ಏಕೆಂದರೆ ಸಕಲ ಸೃಷ್ಟಿಯೂ ಅವನ ''ಏಕಾಂಶೇನ ಸ್ಥಿತೋ ಜಗತ್'' ಎಂದಿದ್ದಾನೆ ಶ್ರೀ ಕೃಷ್ಣ ಪರಮಾತ್ಮ ಗೀತೆಯಲ್ಲಿ, ವಿಭೂತಿಯೋಗದ ಅಧ್ಯಾಯದಲ್ಲಿ. (ಶ್ಲೋಕ 42, ಅಧ್ಯಾಯ 10, ಗೀತಾ)

ಅವನೇ ಕಾಮಿಸಿ ತನ್ನ ಆಟಕ್ಕಾಗಿ ಈ ಅಖಿಲಾಂಡ ಕೋಟಿ ಬ್ರಹ್ಮಾಂಡಗಳನ್ನು ಮಾಡಿ ಅದರ ನಾಯಕನಾಗಿರುವಾಗ ಅವನಿಗೆ ಎದುರು ಯಾರಿದ್ದಾರೆ, ಯಾರಿದ್ದರು? ಯಾರಿರುವರು ಮುಂದೆ! ಜಯಸಿಂಹಾಯ ನಮಃ.

ಅವನಿಗೆ ಜಯವೋ! ಜಯ! ಎಲ್ಲೆಲ್ಲಿ ಏನೇನು ಮಾಡಿದರೂ ಇಚ್ಛಿಸಿದರೂ ಸಂಕಲ್ಪ ಮಾಡಿದರೂ ಜಯವೇ! ಜಯಲಕ್ಷ್ಮಿಯೇ ಓಡಿ ಬಂದು ಹಾರಹಾಕಿ ಆಲಿಂಗಿಸಿಕೊಳ್ಳುತ್ತಾಳೆ ಅವನನ್ನ - ಲಕ್ಷ್ಮಿ - ನರಸಿಂಹನಲ್ಲವೇ! ಅವನು!! ಜಯಲಕ್ಷ್ಮಿಯೇ ಅವನ ಬರುವಿಕೆಗಾಗಿ ಕಾಯುತ್ತಿರುತ್ತಾಳೆ! ಕಾಯುವುದೆಲ್ಲಿ ಬಂತು, ಅವನ ವಕ್ಷಸ್ಥಳವನ್ನೇ ಆಕೆ ಆಕ್ರಮಿಸಿರುವಾಗ ಲಕ್ಷ್ಮಿಯನ್ನು ನರಸಿಂಹನಿಂದ ಬೇರ್ಪಡಿಸುವವರು ಯಾರು! ಲಕ್ಷ್ಮಿ-ನರಸಿಂಹರು, ಶಿವ-ಶಕ್ತಿಯ ಹಾಗೆ, ಏಕರು, ಅಭೇದರು - ಇಬ್ಬರೂ ಓಂಕಾರದಲ್ಲಿ ಸೇರಿ ಹೋಗಿದ್ದಾರೆ - ಜಯನೂ ಅವನೇ ಸಿಂಹನೂ ಅವನೇ! ಜಯಳೂ ಅವಳೇ, ಸಿಂಹ-ಸಿಂಹಿಣಿಯೂ ಅವಳೇ. ಇಬ್ಬರೂ ಒಂದೇ! ಇದೇ ಪರಮಾತ್ಮನ ಪರಬ್ರಹ್ಮ ರೂಪ! ಓಂ ಜಯಸಿಂಹಾಯ ನಮಃ.

998. ವನಸಿಂಹಾಯ ನಮಃ

ವನ - ಎಂದರೆ ಅರಣ್ಯ - ಅರಣ್ಯವಲ್ಲಿರುವ ಪ್ರಾಣಿಗಳಿಗೆಲ್ಲ, ಸಿಂಹ - ಸಿಂಹನು - ರಾಜನು - ವನಸಿಂಹನು.

ಅಥವಾ

ವನ - ಎಂದರೆ ನಮ್ಮ ಶರೀರದಲ್ಲಿರುವ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳಿಂದ ಕೂಡಿದ ಕಾಡು. ಜೊತೆಗೆ ಇಂದ್ರಿಯಗಳು, ಸತ್ವರಜಸ್ಸು, ತಮೋ ಗುಣಗಳು ಸಂಸಾರದ ಪ್ರಕೃತಿ, ಪುರುಷ, ಮಾಯೆಗಳು ಎಲ್ಲವೂ ಕಾಡಿನಲ್ಲಿರುವ ಪ್ರಾಣಿಗಳು, ವೃಕ್ಷಗಳು. ಇವುಗಳನ್ನು ನಿಗ್ರಹಿಸಲು ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳನ್ನು ವಿವೇಕತೆಯಿಂದ ಉಪಯೋಗಿಸಿದರೆ ಸಂಸಾರದ ಬಿಡುಗಡೆ ಸಾಧ್ಯ. ಅಲ್ಲಿ ಒಂದು ಸಿಂಹರಾಜನು ಬೇಕು. ಅದಕ್ಕೆ ಪರಮಾತ್ಮನು ಬುದ್ಧಿಗೆ ವಿವೇಕತೆಯನ್ನು ತುಂಬಿದ್ದಾನೆ. ಈ ವಿವೇಕತೆಯೇ ಸಿಂಹ, ಉಳಿದದ್ದೆಲ್ಲವೂ ವನ - ಕಾಡು - ಅರಣ್ಯ - ವಿವೇಕತೆಯ ಬುದ್ಧಿಯೇ ವನಸಿಂಹ - ಇದಕ್ಕೆ ಸಂಕಲ್ಪ ನೀಡುವವನು ಆತ್ಮನಲ್ಲ - ಪರಮಾತ್ಮನು - ಅವನೇ ಸೂತ್ರಧಾರಿ! ಹೊರಗಿದ್ದು ಆಡಿಸುವವನು - ವನಸಿಂಹಾಯ ನಮಃ.

ಆತ್ಮವು ಕೆಲಸ ಮಾಡುವುದಿಲ್ಲ! ಅದು ಸಾಕ್ಷಿಭೂತ - ಮೂಕನಾಗಿ ಸಾಕ್ಷಿರೂಪನಾಗಿ ಇರುತ್ತದೆ. ಆದರೆ ಕೆಲಸ ಮಾಡುವವನು ಪರಮಾತ್ಮ - ಸಾಕ್ಷಿ - ಸೂತ್ರಧಾರ ಗೋಪಾಲ!

999. ರಣಸಿಂಹಾಯ ನಮಃ

ಭಕ್ತ ಪರಿಪಾಲನೆಯಾಗಬೇಕಾದರೆ ಅಪರಿಮಿತ, ಅಗಣಿತ ರಣ - ಯುದ್ಧಗಳನ್ನು ಮಾಡಬೇಕು. ಕ್ಷಣ ಕ್ಷಣದಲ್ಲಿಯೂ ಮನಸ್ಸು ಬುದ್ಧಿಗಳಲ್ಲಿ ದ್ವಂದ್ವಯುದ್ಧಗಳು ನಡೆಯುತ್ತಲೇ ಇರುತ್ತದೆ. ಪ್ರತಿ ಕ್ಷಣದಲ್ಲಿಯೂ ಪರಮಾತ್ಮನು ಬುದ್ಧಿಗೆ ವಿವೇಕತೆಯನ್ನು ನೀಡಿ ಆತ್ಮನ ಬಿಡುಗಡೆಗಾಗಿ ಶ್ರಮಿಸುತ್ತಾನೆ. ಆದರೆ ಆತ್ಮನಿಗೆ ಅಂಟಿರುವ ಸಂಸ್ಕಾರ, ಪ್ರಾರಬ್ಧ, ಆಗಮ, ಸಂಚಿತ ಕರ್ಮಗಳು ಪರಮಾತ್ಮನು ಆತ್ಮನನ್ನು ಬಿಡಿಸಲು ಅಡ್ಡಿಯಾಗುತ್ತಿವೆ. ಅದರಿಂದ ಪರಮಾತ್ಮನೇ ತನ್ನ ಸಂಕಲ್ಪ ಮಾತ್ರದಿಂದ ಬುದ್ಧಿಗೆ ವಿವೇಕತೆಯನ್ನು ನೀಡಿ ಉದ್ಧರಿಸುತ್ತಾನೆ. ಆದರೆ ಉದ್ಧಾರ - ಅಂದರೆ ಸಂಸಾರ ಸಾಗರದಿಂದ ಆತ್ಮನ ಬಿಡುಗಡೆ ಆತ್ಮನಿಂದಲೇ ಆಗಬೇಕು. ಪರಮಾತ್ಮನಲ್ಲಿ ಅನುರಾಗ, ಭಕ್ತಿ ಮಾಡುವಂತೆ ಮನಸ್ಸು ಬುದ್ಧಿ ಪರಿವರ್ತಿತವಾಗಬೇಕು. ಇವೆರಡೇ ಎಲ್ಲಕ್ಕೂ ಅಳಿವಿಗೂ ಉಳಿವಿಗೂ ಕಾರಣ - ರಣರಂಗದಲ್ಲಿ ಸಿಂಹದಂತೆ ಬುದ್ಧಿ ಮನಸ್ಸುಗಳು ಗೆದ್ದು ಪರಮಾತ್ಮನನ್ನು ಆಶ್ರಯಿಸಬೇಕು. ಇದೇ ಆತ್ಮದ ಇಚ್ಛೆ - ಪರಮಾತ್ಮನು ನೀಡುವ ಭರವಸೇ! - ರಣಸಿಂಹನ ಧ್ಯೇಯ - ರಣಸಿಂಹಾಯ ನಮಃ.

1000. ನರಸಿಂಹರೂಪಾಯ ನಮಃ

ಸಹಸ್ರನಾಮದ ಮೊದಲನೇ ನಾಮ - ನರಸಿಂಹ.

ಸಹಸ್ರನಾಮದ ಸಹಸ್ರದ ನಾಮ - ನರಸಿಂಹರೂಪ.

ಮೊದಲಿನ ನಾಮ - ನರಸಿಂಹ - ಉಗ್ರ ನರಸಿಂಹನಿಗೆ ಉದ್ದೇಶಿಸಿದೆ,

ಕೊನೆಯ ನಾಮ - ನರಸಿಂಹನಿಗೆ - ಶಾಂತರೂಪ ನರಸಿಂಹನಿಗೆ ಉದ್ದೇಶಿಸಿದೆ.

ಆದರೆ ಅದೇ ನರಸಿಂಹ ಮೊದಲಿನಿಂದ ಕೊನೆಯವರೆಗೂ ಬ್ರಹ್ಮದೇವರಿಂದ ಕೇಳಿದ್ದಾನೆ! ಉಗ್ರದಿಂದ ಶಾಂತತೆಯ ಸ್ಥಿತಿಗೆ ಬರಬೇಕಾದರೆ ಬ್ರಹ್ಮದೇವರು ಒಂದು ಸಹಸ್ರನಾಮಗಳನ್ನು ಹೇಳಬೇಕಾಯಿತು!

ಆ ರೂಪ ಭಯಂಕರವಾದ್ದು. ಈ ರೂಪ ಮನೋಹರವಾದ್ದು, ಚಿತ್ತ ಚೋರನಾದ ರೂಪ, ಚೋರಾಗ್ರಗಣ್ಯರೂಪ.

ಮನಃ ಪರಿವರ್ತನೆಗೆ 'ನರಸಿಂಹ' ನಿಂದ 'ನರಸಿಂಹ ರೂಪ'ದ ವರೆಗೆ ಮಧ್ಯದಲ್ಲಿ 998 ನಾಮಗಳು ವಿವಿಧ ಭಾವ - ಮಂತ್ರ, ಜ್ಞಾನ, ಕ್ರಿಯೆ, ಯೋಗಗಳ ಸಾರಭೂತಗಳಿಂದ ತುಂಬಿದ ನಾಮಗಳು - ಬ್ರಹ್ಮದೇವರಿಂದ ಶ್ರೀಮನ್ಮಹಾವಿಷ್ಣುವು ನರಸಿಂಹ ಅವತಾರದಲ್ಲಿ ಕುಳಿತು ತನ್ನವನೇ ಆದ ತನ್ನ ನಾಭೀಕಮಲದಲ್ಲಿ ಕಮಲಸಂಭವನಾದ ಪುತ್ರನಾದ ಬ್ರಹ್ಮದೇವನಿಂದ ಕೇಳಿದನು. - ಕೇಳಿದ್ದು ಮಾತ್ರವಲ್ಲ - ಸಂತುಷ್ಟನಾಗಿ ಶಾಂತನಾದನು - ಶಾಂತನಾದ್ದು ಮಾತ್ರವೇ ಅಲ್ಲ - ಲಕ್ಷ್ಮಿಯನ್ನು ತನ್ನಂಕದಲ್ಲಿ ಕುಳ್ಳಿರಿಸಿಕೊಂಡನು - ಇದು ಮಾತ್ರವೇ ಅಲ್ಲ - ಮಹಾಭಕ್ತ ಪ್ರಹ್ಲಾದನಿಗೆ ಪಟ್ಟಾಭಿಷೇಕ ಮಾಡಲು ಬ್ರಹ್ಮನಿಗೆ ಆದೇಶಿಸಿದನು - ಇಷ್ಟೇ ಅಲ್ಲ, ಹಿರಣ್ಯಕಶಿಪುವಿಗೆ ಜನ್ಮಮೋಕ್ಷ - ಕೊಟ್ಟನು - ನೆರೆದವರಿಗೆಲ್ಲ ಕಾಪಾಡುತ್ತೇನೆಂದು ಭರವಸೆ ಕೊಟ್ಟನು. ಇದೇ ನರಸಿಂಹನ ಅಪಾರ ಕರುಣೆ - ಪರಮ ಕರುಣಾಳು ಅವನಲ್ಲವೇ! ನರಸಿಂಹರೂಪನಿಗೆ ನಮೋ ನಮಃ.

*ದುರ್ವೃತ್ತಂ ಗರ್ವಿತಂ ದೈತ್ಯಂ ನಿಹತ್ಯಾಜೌ ಸುರದ್ವಿಷಮ್ ।*
*ದೇವಕಾರ್ಯಂ ಮಹತ್ಕೃತ್ವಾ ಗರ್ಜಸೇ ಸ್ವಾತ್ಮತೇಜಸಾ ॥170॥*

ಬ್ರಹ್ಮದೇವರು ಮುಂದುವರಿದು ಹೇಳುತ್ತಾರೆ,

ಕೆಟ್ಟ ನಡತೆಗಳ ವರ್ತುಲದಲ್ಲಿ ಸಿಕ್ಕಿಕೊಂಡು ಗರ್ವದಿಂದ ಕೂಡಿದ, ದೇವತೆಗಳಿಗೆ ಶತ್ರುವಾಗಿದ್ದ ರಾಕ್ಷಸನಾದ ಹಿರಣ್ಯಕಶಿಪುವನ್ನು ಕೊಂದು ದೇವತೆಗಳು ಮತ್ತು ಬ್ರಹ್ಮನಿಗೆ ಸಂಬಂಧಿಸಿದ ದೇವತೆಗಳ ಕೆಲಸವನ್ನು ಮಹಾ ರೀತಿಯಲ್ಲಿ ಮಾಡಿ, ತನ್ನಲ್ಲಿರುವ ಮಹತ್ತಾದ ತೇಜಸ್ಸಿನಿಂದ ಗರ್ಜಿಸುತ್ತಿದ್ದೀಯೆ.

*ಅತಿರೌದ್ರಮಿದಂ ರೂಪಂ ದುಸ್ಸಹಂ ದುರತಿಕ್ರಮಮ್ ।*
*ದೃಷ್ಟ್ವಾ ತು ಶಂಕಿತಾಃ ಸರ್ವೇ ದೇವತಾಸ್ತ್ವಾಮುಪಾಗತಾಃ ॥171॥*

ಈ ನಿನ್ನ ರೂಪವು ಮುಖ ಮತ್ತು ದೇಹದ ಭಾವವು ಬಹಳ ರೌದ್ರ - ರೌದ್ರ ರಸದಿಂದ ಕೂಡಿದುದು. ತಡೆಯಲು ಅಸಾಧ್ಯವಾದುದು. ಇದನ್ನು ದಾಟಲು ಬಹಳ ಕಷ್ಟತರವಾದುದು. ಇದನ್ನು ನೋಡಿ ಎಲ್ಲಾ ದೇವತೆಗಳೂ ಬಹಳ ಸಂದೇಹಪಡುತ್ತಾ ನಿನ್ನ ಮುಂದೆ ಬಂದಿರುತ್ತಾರೆ.

*ಏತಂ ಪಶ್ಯ ಮಹೇಶಾನಂ ಬ್ರಹ್ಮಾಣಂ ಮಾಂ ಶಚೀಪತಿಮ್ ।*
*ದಿಕ್ಪಾಲಾನ್ ದ್ವಾದಶಾದಿತ್ಯಾನ್ ರುದ್ರಾನುರಗರಾಕ್ಷಸಾನ್ ॥172॥*

ಹೇ ನರಸಿಂಹನೇ, ಮಹೇಶ್ವರನನ್ನು - ಮಹಾನ್ ಈಶನನ್ನು, ಬ್ರಹ್ಮನಾದ ನನ್ನನ್ನು, ಶಚಿಪತಿಯಾದ ದೇವೇಂದ್ರನನ್ನು, ಅಷ್ಟದಿಕ್ಪಾಲಕರನ್ನು, ದ್ವಾದಶಾದಿತ್ಯರನ್ನು, ಏಕಾದಶರುದ್ರರನ್ನು, ಉರಗ (ಸರ್ಪ-ಹಾವು)ಗಳನ್ನು, ರಾಕ್ಷಸರನ್ನು - ಈ ಎಲ್ಲರನ್ನು ನೋಡು. (ಬಂದಿರುವ ಎಲ್ಲರನ್ನು ನೋಡು).

*ಸರ್ವಾನೃಷಿಗಣಾನ್ ಸಪ್ತಮಾತೃಗೌರೀಸರಸ್ವತೀಃ ।*
*ಲಕ್ಷ್ಮೀಂ ನದೀಶ್ಚ ತೀರ್ಥಾನಿ ಸರ್ವಾನ್ ಭೂತಗಣಾನಪಿ ॥173॥*

ಮತ್ತು ಎಲ್ಲಾ ಋಷಿಗಳ ಸಮೂಹಗಳನ್ನು, ಸಪ್ತಮಾತೃಕೆಯರನ್ನು, ಗೌರಿಯನ್ನು ಸರಸ್ವತಿಯನ್ನು, ಲಕ್ಷ್ಮೀ ದೇವಿಯನ್ನು, ನದಿಗಳನ್ನು (ನದಿಗಳ ಅಧಿ ದೇವತೆಗಳನ್ನು), ಅನೇಕ ತೀರ್ಥಗಳನ್ನು, ಎಲ್ಲಾ ಭೂತಗಳನ್ನು (ನೋಡು),

*ಪ್ರಸೀದ ತ್ವಂ ಮಹಾಸಿಂಹ ಉಗ್ರಭಾವಮಿದಂ ತ್ಯಜ ।*
*ಪ್ರಕೃತಿಸ್ಥೋ ಭವ ತ್ವಂ ಹಿ ಶಾಂತಭಾವಂ ಹಿ ಧಾರಯ ॥174॥*

ನೀನು ಪ್ರಸನ್ನನಾಗು, ಪ್ರಸಾದವನ್ನು ಕೊಡುವವನಾಗು, ಹೇ ಮಹಾಸಿಂಹನೇ! ಈಗ ಇರುವ ರೀತಿಯ ಭಯಂಕರವಾದ ಉಗ್ರಭಾವವನ್ನು ತ್ಯಜಿಸು (ಬಿಡು), ನೀನು ಸಾಮಾನ್ಯ ರೂಪದಲ್ಲಿಯೇ ಇರುವವನಾಗು, ಶಾಂತಭಾವವನ್ನೇ ಧರಿಸು (ಹೊಂದುವವನಾಗು).

*ಇತ್ಯುಕ್ತ್ವಾ ದಂಡವದ್ಭೂಮೌ ಪಪಾತ ಸ ಪಿತಾಮಹಃ ।*
*ಪ್ರಸೀದ ತ್ವಂ ಪ್ರಸೀದ ತ್ವಂ ಪ್ರಸೀದೇತಿ ಪುನಃ ಪುನಃ ॥175॥*

ಈ ರೀತಿಯಾಗಿ ಹೇಳಿ ಭೂಮಿಯಲ್ಲಿ ದಂಡ ರೀತಿಯಲ್ಲಿ ಆ ಬ್ರಹ್ಮದೇವನು ನಮಸ್ಕಾರ ಮಾಡುತ್ತಾ ಬಿದ್ದನು (ಮಲಗಿದನು), ನೀನು ಪ್ರಸನ್ನನಾನು, ನೀನು ಪ್ರಸನ್ನನಾಗು, ಪ್ರಸನ್ನನಾಗು ಎಂದು ಮತ್ತೆ ಮತ್ತೇ ಹೇಳುತ್ತಾ ದಂಡ ಪ್ರಣಾಮ ಮಾಡಿದನು.

ಶ್ರೀ ಮಾರ್ಕಂಡೇಯ ಉವಾಚ ॥

ಶ್ರೀ ಮಾರ್ಕಂಡೇಯ ಋಷಿಗಳು ಹೇಳುತ್ತಾರೆ -

*ದೃಷ್ಟ್ವಾ ತು ದೇವತಾಃ ಸರ್ವಾಃ ಶ್ರುತ್ವಾ ತು ಬ್ರಹ್ಮಣಾಮುಖ್ಯೈಃ ।*
*ಸ್ತೋತ್ರೇಣಾಪಿ ಚ ಸಂತುಷ್ಟಃ ಶಾಂತಭಾವಂ ಚ ಧಾರಯನ್ ॥ 176॥*

ದೇವತೆಗಳನ್ನು ನೋಡಿ ಎಲ್ಲಾ ಸಹಸ್ರನಾಮಗಳನ್ನು ಬ್ರಹ್ಮನ ಮುಖದಿಂದ ಕೇಳಿದ ನಂತರ, ಈ ಸ್ತೋತ್ರಗಳಿಂದ ಸಂತುಷ್ಟನಾಗಿ (ಸಂತೋಷಭರಿತನಾಗಿ) ಶಾತಭಾವವನ್ನು ಧರಿಸಿದನು.

*ಅಬ್ರವೀನ್ನಾರಸಿಂಹಸ್ತು ಘನಗಂಭೀರ ನಿಸ್ವನಃ ।*
*ಸರ್ವಚೈತನ್ಯಸರ್ವಸ್ವಸಾರಸತ್ತ್ವಾಮಯೋ ಹರಿಃ ॥177॥*

ನರಸಿಂಹನಾದರೋ ಘನಗಂಭೀರತೆಯಿಂದ ಉಸಿರಾಡುತ್ತಾ (ನಿಧಾನವಾಗಿ ಉಸಿರಾಡುತ್ತಾ) ಎಲ್ಲ ರೀತಿಯ ಚೈತನ್ಯ, ಎಲ್ಲದರ ಸಾರಗಳಿಂದ ಸಾತ್ವಿಕತೆಯಿಂದ ಕೂಡಿದ ಶ್ರೀ ಹರಿಯು ಈ ರೀತಿ ಹೇಳಿದನು.

ಶ್ರೀ ನರಸಿಂಹ ಉವಾಚ ॥

ಶ್ರೀ ನರಸಿಂಹಸ್ವಾಮಿಯು ಹೇಳಿದನು (ಈ ರೀತಿಯಲ್ಲಿ ಎಲ್ಲರಿಗೂ ಹೇಳಿದನು) -

*ಭೋ ಭೋ ದೇವವರಾಃ ಸರ್ವೇ ಪಿತಾಮಹ ಪುರೋಗಮಾಃ ।*
*ಶೃಣುಧ್ವಂ ಮಮ ವಾಕ್ಯಾನಿ ಭವಂತು ವಿಗತಜ್ವರಾಃ ॥178॥*

ಹೇ! ಹೇ! ದೇವ ಶ್ರೇಷ್ಠರುಗಳಿರಾ, ಪಿತಾಮಹ ಬ್ರಹ್ಮನನ್ನು ಮುಂದೆ ಮಾಡಿಕೊಂಡು ಬಂದಿರುವ ಎಲ್ಲರುಗಳಿರಾ, ನನ್ನ ಮಾತುಗಳನ್ನು ಕೇಳಿರಿ, ನಿಮ್ಮ ಕಾಯಾ ವಾಚಾ ಮನಸ್ಸಿನಲ್ಲಿರುವ ಜ್ವರಗಳಿಂದ ಬಿಡುಗಡೆ ಹೊಂದುವರಾಗಿರಿ.

*ಯದ್ಧಿತಂ ಭವತಾಂ ನೂನಂ ತತ್ ಕರಿಷ್ಯಾಮಿ ಸಾಂಪ್ರತಮ್ ।*
*ಏತನ್ನಾಮಸಹಸ್ರಂ ಮೇ ತ್ರಿಸಂಧ್ಯಂ ಯಃ ಪಠೇತ್ ಸುಧೀಃ ॥179॥*

ನಿಮಗೆ ಯಾರ ರೀತಿಯಲ್ಲಿ ಹಿತವಾದುದು ಯಾವುದು, ಕಡಿಮೆ ಯಾಗಿರುವುದೋ ಅದನ್ನು ಕೂಡಲೇ ಯೋಗ್ಯವಾಗಿ ಕಲ್ಯಾಣವಾಗುವ ರೀತಿಯಲ್ಲಿ ಮಾಡುತ್ತೇನೆ. ಈ ಸಹಸ್ರನಾಮವನ್ನು ನನಗಾಗಿ ಮೂರು ಸಂಧ್ಯೆಯಲ್ಲಿ ಒಳ್ಳೆಯ ಬುದ್ಧಿಯಿಂದ ಯಾರು ಓದುತ್ತಾರೋ ಅವರಿಗೆ ಕಲ್ಯಾಣವನ್ನು ಮಾಡುತ್ತೇನೆ.

*ಶೃಣೋತಿ ವಾ ಶ್ರಾವಯೇದ್ವಾ ಪೂಜಾಂತೇ ಭಕ್ತಿಸಂಯುತಃ ।*
*ಸರ್ವಾನ್ ಕಾಮಾನವಾಪ್ನೋತಿ ಜೀವೇಚ್ಚ ಶರದಃ ಶತಮ್ ॥180॥*

ಭಕ್ತಿಯಿಂದ ಕೂಡಿದ ಪೂಜೆಯನ್ನು ಮಾಡಿದ ನಂತರ ಯಾರು ಈ ನನ್ನ ಸಹಸ್ರನಾಮವನ್ನು ಕೇಳುತ್ತಾರೆಯೋ ಅಥವಾ ಕೇಳಿಸುತ್ತಾರೆಯೋ ಅಂದರೆ ಓದಿಸುತ್ತಾರೆಯೋ ಅವರು ಎಲ್ಲಾ ರೀತಿಯ ಇಚ್ಛೆಗಳನ್ನು ಹೊಂದುತ್ತಾರೆ ಮತ್ತು ನೂರು ಶರತ್ಕಾಲಗಳ ಪರ್ಯಂತ ಜೀವಿಸುತ್ತಾರೆ.

*ನಾಮಭಿಶ್ಚ ನೃಸಿಂಹಾದ್ಯೈರರ್ಚಯನ್ ಕ್ರಮಶೋ ಮಮ ।*
*ಸರ್ವ ತೀರ್ಥೇಷು ಯತ್ಪುಣ್ಯಂ ಸರ್ವ ತೀರ್ಥೇಷು ಯತ್ಫಲಮ್ ॥181॥*

ಈ ನನ್ನ ನಾಮಗಳಿಂದ ನರಸಿಂಹನನ್ನು ಕ್ರಮವಾಗಿ ಅರ್ಚಿಸಿದರೆ (ಪೂಜಿಸಿದರೆ) ಎಲ್ಲಾ ತೀರ್ಥ ಕ್ಷೇತ್ರದಲ್ಲಿ ಯಾವ ಪುಣ್ಯವು ಮತ್ತು ಎಲ್ಲಾ ತೀರ್ಥ ಕ್ಷೇತ್ರಗಳಲ್ಲಿ ಯಾವ ಫಲವು ಬರುತ್ತದೆಯೋ ಅವೆಲ್ಲ ಸಿಕ್ಕುತ್ತದೆ.

*ಸರ್ವ ಪೂಜಾಸು ಯತ್ಪ್ರೋಕ್ತಂ ತತ್ಸರ್ವಂ ಲಭತೇ ಭೃಶಮ್ ।*
*ಜಾತಿಸ್ಮರತ್ವಂ ಲಭತೇ ಬ್ರಹ್ಮಜ್ಞಾನಂ ಸನಾತನಮ್ ॥182॥*

ಎಲ್ಲಾ ಪೂಜೆಗಳಲ್ಲಿ ಯಾವುದು ಹೇಳಲ್ಪಟ್ಟಿರುವುದೋ, ಅವೆಲ್ಲವನ್ನು ನಿಶ್ಚಯವಾಗಿ ಪಡೆಯುತ್ತಾನೆ. ಪೂರ್ವ ಜನ್ಮದ ಸ್ಮರಣೆಯನ್ನು ಪಡೆಯುತ್ತಾನೆ. ಸನಾತನವಾದ ಬ್ರಹ್ಮಜ್ಞಾನವನ್ನು ಪಡೆಯುತ್ತಾನೆ.

*ಸರ್ವಪಾಪೈರ್ವಿನಿರ್ಮುಕ್ತಸ್ತದ್ವಿಷ್ಣೋಃ ಪರಮಂ ಪದಮ್ ।*
*ಮನ್ನಾಮಕವಚಂ ಬಧ್ವಾ ವಿಚರೇದ್ವಿಗತಜ್ವರಃ ॥183॥*

ಸಕಲ ಪಾಪಗಳಿಂದಲೂ ಬಿಡಿಸಲ್ಪಟ್ಟು ಆ ಪರಮ ಪದವಾದ ವಿಷ್ಣು ಸಾಯುಜ್ಯವನ್ನು ಹೊಂದುತ್ತಾನೆ ಮತ್ತು ನನ್ನ ಹೆಸರಿನ ಕವಚವನ್ನು ಧರಿಸಿಕೊಂಡು ಎಲ್ಲಾ ರೀತಿಯ ಕಾಯಾ ವಾಚಾ ಮನಸಾ ಜ್ವರ (ಹಿಂಸೆ) ಗಳನ್ನು ಹೋಗಲಾಡಿಸಿಕೊಂಡು ವಿಚಾರಮಾಡುತ್ತಿರಬೇಕು (ಓಡಾಡುತ್ತಿರಬೇಕು).

*ಭೂತಭೇತಾಲಕೂಷ್ಮಾಂಡಪಿಶಾಚಬ್ರಹ್ಮರಾಕ್ಷಸಾಃ ।*
*ಶಾಕಿನೀಡಾಕಿನೀಮುಖ್ಯಾಃ ನೀಲೀಬಾಲಗ್ರಹಾದಯಃ ॥184॥*

ಭೂತ, ಭೇತಾಳ, ಕೂಷ್ಮಾಂಡ, ಪಿಶಾಚ, ಬ್ರಹ್ಮರಾಕ್ಷಸರು, ಶಾಕಿನೀ, ಡಾಕಿನೀ ಮುಖ್ಯರುಗಳು, ನೀಲೀ, ಬಾಲಗ್ರಹ ಮುಂತಾದವುಗಳು,

*ದುಷ್ಟಗ್ರಹಾಶ್ಚ ನಶ್ಯಂತಿ ಯಕ್ಷರಾಕ್ಷಸಪನ್ನಗಾಃ ।*
*ಯೇ ಚ ಸಂಧ್ಯಾಗ್ರಹಾಃ ಸರ್ವೇ ಚಂಡಾಲಗ್ರಹಸಂಜ್ಞಿತಾಃ ।।185।।*

ದುಷ್ಟಗ್ರಹಗಳು ನಾಶವಾಗುತ್ತವೆ ಮತ್ತು ಯಕ್ಷರು, ರಾಕ್ಷಸರು, ಪನ್ನಗಗಳು ಮತ್ತು ಯಾವ ಯಾವ ಸಂಧ್ಯಾಕಾಲದ ಗ್ರಹಗಳು, ಎಲ್ಲಾ ಚಂಡಾಲ ಗ್ರಹಗಳೆಂದು ಗುರುತಿಸಲ್ಪಡುವ ಗ್ರಹಗಳು,

*ನಿಶಾಚರಗ್ರಹಾಶ್ಚೈವ ರೋಗಾಣಾಮಧಿದೇವತಾಃ ।*
*ಶೀಘ್ರಂ ನಶ್ಯಂತಿ ತೇ ಸರ್ವೇ ನೃಸಿಂಹಸ್ಮರಣಾತ್ ಸದಾ ।।186।।*

ರಾತ್ರಿಯಲ್ಲಿ ಓಡಾಡುವ ಗ್ರಹಗಳೂ ಸಹ, ಇದೇ ರೀತಿಯಲ್ಲಿ ರೋಗಗಳ ಅಧಿ ದೇವತೆಗಳೂ ಸಹ ಬಹಳ ಬೇಗ ಆ ಎಲ್ಲರೂ (ದುಷ್ಟಗ್ರಹಾದಿಗಳು), ನರಸಿಂಹನ ಸ್ಮರಣೆಯನ್ನು ಸದಾ ಮಾಡುವುದರಿಂದ ನಾಶಹೊಂದುತ್ತವೆ.

*ರಾಜ್ಯಕಾಮೋ ಲಭೇದ್ರಾಜ್ಯಂ ಧನಕಾಮೋ ಲಭೇದ್ಧನಮ್ ।*
*ವಿದ್ಯಾಕಾಮೋ ಲಭೇದ್ವಿದ್ಯಾಂ ಬದ್ಧೋ ಮುಚ್ಯೇತ ಬಂಧನಾತ್ ।।187।।*

ರಾಜ್ಯವನ್ನು ಆಶಿಸುವವನು ರಾಜ್ಯವನ್ನು ಪಡೆಯುತ್ತಾನೆ, ಧನವನ್ನು ಕಾಮಿಸುವವನು ಧನವನ್ನು ಪಡೆಯುತ್ತಾನೆ, ವಿದ್ಯೆಯನ್ನು ಆಶಿಸುವವನು ವಿದ್ಯೆಯನ್ನು ಪಡೆಯುತ್ತಾನೆ, ಸಂಸಾರದಲ್ಲಿ ಬಂಧಿತನಾದವನು ಬಂಧನದಿಂದ ಬಿಡುಗಡೆ ಹೊಂದುತ್ತಾನೆ.

*ವ್ಯಾಲವ್ಯಾಘ್ರಭಯಂ ನಾಸ್ತಿ ಚೋರವೃಶ್ಚಿಕಜಂ ಭಯಮ್ ।*
*ಅನುಕೂಲಾ ಭವೇದ್ಭಾರ್ಯಾ ಲೋಕೈಶ್ಚ ಪರಿಪೂಜ್ಯತೇ ।।188।।*

ವ್ಯಾಲ (ಹಾವು), ಹುಲಿಗಳಿಂದಲೂ, ಕಳ್ಳರಿಂದ ಮತ್ತು ಚೇಳಿನಿಂದ ಬರುವ ಭಯದಿಂದಲೂ ಬಿಡುಗಡೆ ಹೊಂದುತ್ತಾರೆ, ಪತ್ನಿಯೂ ಅನುಕೂಲಳಾಗುತ್ತಾಳೆ ಮತ್ತು ಎಲ್ಲಾ ಲೋಕಗಳಲ್ಲಿಯೂ ವಂದನೀಯನಾಗುತ್ತಾನೆ, ಪೂಜಿಸುತ್ತಾರೆ.

*ಸುಪುತ್ರಧನಧಾನ್ಯಾದೀನ್ ಪಶೂಂಶ್ಚ ವಿವಿಧಾನಪಿ ।*
*ಏತತ್ಸರ್ವಮವಾಪ್ನೋತಿ ಮತ್ಪ್ರಸಾದೇನ ನಿಶ್ಚಿತಮ್ ।।189।।*

ಸುಪುತ್ರರು, ಧನ, ಧಾನ್ಯಾದಿಗಳು, ಪಶುಃ (ಹಸು)ಗಳು, ವಿವಿಧ ರೀತಿಯ ವಸ್ತುಗಳು - ಇವೆಲ್ಲವನ್ನು ನನ್ನ ಪ್ರಸಾದದಿಂದ ನಿಶ್ಚಯವಾಗಿಯೂ ಪಡೆಯುತ್ತಾನೆ.

*ಜಲಸಂತರಣೇ ವಾSಪಿ ಪರ್ವತಾರೋಹಣೇ ತಥಾ ।*
*ವನೇSಪಿ ವಿಚರನ್ಮರ್ತ್ಯೋ ದುರ್ಗಮೇ ವಿಷಮೇ ಸ್ಥಿತಃ ॥190॥*

ನೀರಿನಲ್ಲಿ ದಾಟುವಾಗಲೂ ಅಥವಾ ಪರ್ವತವನ್ನು ಹತ್ತುವಾಗಲೂ, ಹಾಗೆಯೇ ಕಾಡಿನಲ್ಲಿ ನಡೆಯುತ್ತಿರುವಾಗ ಮನುಷ್ಯನು, ಗಮಿಸಲು ಕಷ್ಟವಾದ ಸ್ಥಿತಿಯಲ್ಲಿಯೂ

*ಬಿಲಪ್ರವೇಶನೇ ವಾSಪಿ ನಾರಸಿಂಹಮನುಸ್ಮರನ್ ।*
*ಬ್ರಹ್ಮಘ್ನಶ್ಚ ಕೃತಘ್ನಶ್ಚ ಭ್ರೂಣಹಾ ಗುರುತಲ್ಪಗಃ ॥191॥*

ಹಾಗೂ ಗುಹೆಯನ್ನು ಪ್ರವೇಶಿಸುವಾಗ ನರಸಿಂಹನನ್ನು ಸದಾ ಸ್ಮರಿಸುತ್ತಿರಬೇಕು ಮತ್ತು ಬ್ರಹ್ಮ ಹತ್ಯೆಯನ್ನು ಮಾಡಿದವನು, ಕೃತಘ್ನನಾದವನು, ಶಿಶುವಿನ ಭ್ರೂಣ ಹತ್ಯೆ ಮಾಡಿದವನು, ಗುರುವಿನ ಹಾಸಿಗೆಯ ಮೇಲೆ ಹೋದವನೂ -

*ಮುಚ್ಯತೇ ಸರ್ವಪಾಪೇಭ್ಯಃ ಕೃತಘ್ನಃ ಸ್ತ್ರೀವಿಘಾತಕಃ ।*
*ವೇದಾನಾಂ ದೂಷಕಶ್ಚಾಪಿ ಮಾತಾಪಿತ್ರೋರ್ವಿನಿಂದಕಃ ॥192॥*

ಕೃತಘ್ನನಾದವನು, ಸ್ತ್ರೀಯನ್ನು ಕೆಡಿಸಿದವನು, ವೇದಗಳನ್ನು ದೂಷಿಸುವವನು, ತಾಯಿ ತಂದೆಗಳನ್ನು ನಿಂದಿಸುವವನು - ಈ ಎಲ್ಲರೂ ಎಲ್ಲಾ ಪಾಪಗಳಿಂದ ಬಿಡಿಸಲ್ಪಡುತ್ತಾರೆ.

*ಅಸದ್ವಾದೀ ತಥಾ ಯಜ್ಞನಿಂದಕೋ ಲೋಕನಿಂದಕಃ ।*
*ಸ್ಮೃತ್ವಾ ವಕ್ತ್ರಂ ನೃಸಿಂಹಸ್ಯ ಮುಚ್ಯತೇ ಸರ್ವಕಿಲ್ಬಿಷೈಃ ॥193॥*

ಅಸತ್ತನ್ನೇ ವಾದಿಸುವವನು, ಹಾಗೆಯೇ ಯಜ್ಞಗಳನ್ನು ನಿಂದಿಸುವವನು, ಲೋಕನಿಂದೆಯನ್ನು ಮಾಡುವವನು, ತನ್ನ ಮುಖದಿಂದ ನರಸಿಂಹನನ್ನು ಸ್ಮರಿಸುವವನು, ಎಲ್ಲಾ ಪಾಪಗಳಿಂದ, ಎಲ್ಲಾ ದೂಷಣೆಗಳಿಂದ ಬಿಡಿಸಲ್ಪಡುತ್ತಾನೆ.

*ಕಿಮತ್ರ ಬಹುನೋಕ್ತೇನ ಸ್ಮೃತ್ವಾ ಮಾಂ ಶುದ್ಧಮಾನಸಃ ।*
*ಯತ್ರ ಯತ್ರ ಚರನ್ಮರ್ತ್ಯೋ ನೃಸಿಂಹಸ್ತತ್ರ ರಕ್ಷತಿ ॥194॥*

ಎಷ್ಟು ಇಲ್ಲಿ ಹೇಳಿದ್ದರಿಂದ ಏನು, ಶುದ್ಧ ಮನಸ್ಸಿನಿಂದ ನನ್ನನ್ನು ಸ್ಮರಿಸುವವನು ಎಲ್ಲೆಲ್ಲಿ ನಡೆಯುತ್ತಿರುವನೋ, ಅಲ್ಲಲ್ಲಿ ನರಸಿಂಹನು ರಕ್ಷಿಸುತ್ತಾನೆ.

*ಗಚ್ಛನ್ ತಿಷ್ಠನ್ ಸ್ವಪನ್ ಭುಂಜನ್ ಜಾಗ್ರನ್ನಪಿ ಹಸನ್ನಪಿ ।*
*ನೃಸಿಂಹೇತಿ ನೃಸಿಂಹೇತಿ ಸದಾ ಸಂಸ್ಮರತೇ ಚ ಯಃ ॥195॥*

ನಡೆಯುವಾಗ, ನಿಂತಿರುವಾಗ, ಇರುವಾಗ, ತಿನ್ನುವಾಗ, ಎಚ್ಚರವಾದಾಗ, ನಗುವಾಗ ಸದಾ ಯಾರು ನರಸಿಂಹ, ನರಸಿಂಹ ಎಂದು ಸ್ಮರಿಸುತ್ತಿರುತ್ತಾರೆಯೋ,

*ಪುಮಾನ್ ನ ಲಿಪ್ಯತೇ ಪಾಪೈರ್ಭುಕ್ತಿಂ ಮುಕ್ತಿಂ ಚ ವಿಂದತಿ ।*
*ನಾರೀ ಶುಭಮವಾಪ್ನೋತಿ ಸೌಭಾಗ್ಯಂ ಚ ಸುರೂಪತಾಮ್ ॥196॥*

ಅಂತಹ ಮನುಷ್ಯನನ್ನು ಪಾಪಗಳು ಅಂಟುವುದಿಲ್ಲ. ಭಕ್ತಿ, ಮುಕ್ತಿಯನ್ನು ಹೊಂದುತ್ತಾನೆ. ನಾರಿಯು ಶುಭವನ್ನು ಹೊಂದುತ್ತಾಳೆ, ಸೌಭಾಗ್ಯವನ್ನು ಸುರೂಪವನ್ನೂ ಹೊಂದುತ್ತಾಳೆ.

*ಭರ್ತೃಪ್ರಿಯತ್ವಂ ಲಭತೇ ನ ವೈಧವ್ಯಮವಾಪ್ನುಯಾತ್ ।*
*ನ ಸಪತ್ನೀ ಚ ಜನ್ಮಾಂತೇ ಸಮ್ಯಗ್ ಜ್ಞಾನಾನ್ವಿತಾ ಭವೇತ್ ॥197॥*

ತನ್ನ ಪತಿಯ ಪ್ರಿಯತೆಯನ್ನು ಪಡೆಯುತ್ತಾಳೆ ಮತ್ತು ವೈಧವ್ಯವನ್ನು ಪಡೆಯುವುದಿಲ್ಲ, ಆ ಪತ್ನಿಯು ಪತಿಯೊಡನೆ ಜನ್ಮದ ಕೊನೆಯಲ್ಲಿ ಸಂಯಕ್‌ಜ್ಞಾನ - ಆತ್ಮಜ್ಞಾನ - ಪರಮಾತ್ಮ ಜ್ಞಾನವನ್ನು ಹೊಂದುತ್ತಾಳೆ.

*ಭೂಮಿಪ್ರದಕ್ಷಿಣಾನ್ಮರ್ತ್ಯೋ ಯತ್ಫಲಂ ಲಭತೇ ಚಿರಾತ್ ।*
*ತತ್ಫಲಂ ಸಮವಾಪ್ನೋತಿ ನಾರಸಿಂಹ ಪ್ರದಕ್ಷಿಣಾತ್ ॥198॥*

ಭೂಮಿ ಪ್ರದಕ್ಷಿಣೆಯಿಂದ ಮನುಷ್ಯನು ಯಾವ ಫಲವನ್ನು ಕಾಲಕ್ರಮದಲ್ಲಿ ಹೊಂದುವನೋ ಅದೇ ಫಲವನ್ನು ನರಸಿಂಹನ ಪ್ರದಕ್ಷಿಣೆಯಿಂದ ಹೊಂದುತ್ತಾನೆ.

ಶ್ರೀ ಮಾರ್ಕಂಡೇಯ ಉವಾಚ ॥

ಶ್ರೀ ಮಾರ್ಕಂಡೇಯ ಋಷಿಯು ಹೇಳಿದರು,

*ಇತ್ಯುಕ್ತ್ವಾ ದೇವ ದೇವೇಶೋ ಲಕ್ಷ್ಮೀಮಾಲಿಂಗ್ಯ ಲೀಲಯಾ ।*
*ಪ್ರಹ್ಲಾದ ಸ್ಯಾಭಿಷೇಕಂ ತು ಬ್ರಹ್ಮಣೇ ಚೋಪದಿಷ್ಟವಾನ್ ॥199॥*

ಈ ರೀತಿ ಹೇಳಿದ ನಂತರ ದೇವ ದೇವೇಶನಾದ ನರಸಿಂಹನು ಲೀಲೆಯಿಂದ ಶ್ರೀ ಮಹಾಲಕ್ಷ್ಮಿಯನ್ನು ಆಲಿಂಗಿಸಿಕೊಂಡು, ಪ್ರಹ್ಲಾದನ ಅಭೀಷೇಕದ ವಿಚಾರವನ್ನು ಬ್ರಹ್ಮನಿಗೆ ಉಪದೇಶ ಮಾಡಿದನು,

*ಶ್ರೀನೃಸಿಂಹಪ್ರಸಾದೇನ ಲೋಕಾನಾಂ ಚ ಹಿತಾಯ ವೈ ।*
*ಸ್ವರೂಪಂ ದರ್ಶಯಾಮಾಸ ಪ್ರಕೃತಿಸ್ಥೋಽಭವತ್ತದಾ ॥200॥*

ಶ್ರೀ ನರಸಿಂಹನ ಪ್ರಸಾದದಿಂದ ಲೋಕಗಳ ಹಿತಕ್ಕಾಗಿ ತನ್ನ ರೂಪವನ್ನು ತೋರಿಸಿದನು ಮತ್ತು ಪ್ರಕೃತಿ ರೂಪವನ್ನು ಹೊಂದಿದನು.

*ಬ್ರಹ್ಮಾऽಪಿ ದೈತ್ಯರಾಜ್ಯೇ ತು ಪ್ರಹ್ಲಾದಮಭಿಷೇಚಯನ್ ।*
*ದೇವತಾಭಿಶ್ಚ ಸರ್ವಾಭಿಃ ಸತ್ಯಲೋಕಂ ಯಯೌ ಸ್ವಯಮ್ ।।201।।*

ಬ್ರಹ್ಮದೇವರಾದರೋ ಹಿರಣ್ಯಕಶಿಪುವಿನ ರಾಜ್ಯವನ್ನು ಪ್ರಹ್ಲಾದನಿಗೆ ಅಭಿಷೇಕ ಮಾಡಿದರು, ಎಲ್ಲಾ ದೇವತೆಗಳು ತಮ್ಮ ತಮ್ಮ ಸತ್ಯಲೋಕಗಳಿಗೆ ಹೋದರು.

*ಹಿರಣ್ಯಕಶಿಪೋರ್ಭೀತಃ ಪ್ರಾಬಲ್ಯಾಚ್ಚ ಶಚೀಪತಿಃ ।*
*ಸ್ವರ್ಗರಾಜ್ಯಾತ್ಪರಿಭ್ರಷ್ಟೋ ಯುಗಾನಾಮೇಕವಿಂಶತಿಃ ।।202।।*

ಹಿರಣ್ಯಕಶಿಪುವಿನಿಂದ ಅವನ ಪ್ರಾಬಲ್ಯದಿಂದ ಹೆದರಿದ ಮತ್ತು ಸ್ವರ್ಗ ರಾಜ್ಯದಿಂದ 21 ಯುಗಗಳ ಕಾಲ ಓಡಿಸಲ್ಪಟ್ಟ ಶಚೀಪತಿಯು (ದೇವೇಂದ್ರನು).

*ನೃಸಿಂಹೇನ ಹತೇ ದೈತ್ಯೇ ತದಾ ಸ್ವರ್ಗಮವಾಪ ಸಃ ।*
*ದಿಕ್ಪಾಲಾಶ್ಚ ಸುಸಂಪ್ರಾಪ್ತಾಃ ಸ್ವಂ ಸ್ವಂ ಸ್ಥಾನಮನುತ್ತಮಮ್ ।।203।।*

ಶ್ರೀ ನರಸಿಂಹನಿಂದ ಯಾವಾಗ ರಾಕ್ಷಸನು ಕೊಲ್ಲಲ್ಪಟ್ಟನೋ ಆಗ ಇಂದ್ರನು ಸ್ವರ್ಗಕ್ಕೆ ಹೋದನು. ದಿಕ್ಪಾಲಕರು ತಮ್ಮ ತಮ್ಮ ಉತ್ತಮವಾದ ಸ್ಥಾನಗಳನ್ನು ಪಡೆದರು.

*ಧರ್ಮೇ ಮತಿಃ ಸಮಸ್ತಾನಾಂ ಜನಾನಾಮನುಭವತ್ತದಾ ।*
*ಏತನ್ನಾಮಸಹಸ್ರಂ ತು ಬ್ರಹ್ಮಣಾ ನಿರ್ಮಿತಂ ಪುರಾ ।।204।।*

ಸಮಸ್ತ ಜನಗಳಲ್ಲಿ ಧರ್ಮದಲ್ಲಿ ಬುದ್ಧಿಯುಳ್ಳವರಾದರು, ಈ ಸಹಸ್ರನಾಮವಾದರೋ ಹಿಂದೆ ಬ್ರಹ್ಮದೇವರಿಂದ ನಿರ್ಮಿತವಾಯಿತು.

*ಪುತ್ರಾನಧ್ಯಾಪಯಾಮಾಸ ಸನಕಾದೀನ್ ಮಹಾಮತೀನ್ ।*
*ಊಚುಸ್ತೇ ತು ತತಃ ಸರ್ವೇ ಲೋಕಾನಾಂ ಹಿತಕಾಮ್ಯಯಾ ।।205।।*

ಮಹಾಮತಿಗಳಾದ ಮಕ್ಕಳಾದ ಸನಕಾದಿಗಳಿಗೆ ಇದನ್ನು ಹೇಳಿಕೊಟ್ಟರು, ಸಕಲ ಲೋಕದ ಹಿತವನ್ನು ಅಪೇಕ್ಷಿಸಿ ಅವರು ಬೇರೆಯವರಿಗೆ ಹೇಳಿದರು.

*ದೇವತಾ ಋಷಯಃ ಸಿದ್ಧಾಃ ಯಕ್ಷವಿದ್ಯಾಧರೋರಗಾಃ ।*
*ಗಂಧರ್ವಾಶ್ಚ ಮನುಷ್ಯಾಶ್ಚ ಇಹಾಮುತ್ರ ಫಲೈಷಿಣಃ ।।206।।*

ದೇವತೆಗಳು, ಋಷಿಗಳು, ಸಿದ್ಧರು, ಯಕ್ಷರು, ವಿದ್ಯಾಧರರು, ಉರಗರು,

ಗಂಧರ್ವರು, ಮನುಷ್ಯರು, ಇಹ - ಈ ಲೋಕದಲ್ಲಿಯು ಅಮುತ್ರ - ಮುಂದಿನ ಲೋಕದಲ್ಲಿಯೂ ಫಲಗಳನ್ನು ಅಪೇಕ್ಷಿಸುವವರುಗಳು -

*ಅಸ್ಯಸ್ತೋತ್ರಸ್ಯ ಪಠನಾದ್ವಿಶುದ್ಧಮನಸೋಽಭವನ್ ।*
*ಸನತ್ಕುಮಾರಾತ್ಸಂಪ್ರಾಪ ಭರದ್ವಾಜೋ ಮಹಾಮುನಿಃ ॥207॥*

ಈ ನರಸಿಂಹ ಸಹಸ್ರನಾಮ ಸ್ತೋತ್ರದ ಪಠನದಿಂದ ಪರಿಶುದ್ಧ ಮನಸ್ಸಿನವರಾದರು. ಸನತ್‌ಕುಮಾರರಿಂದ ಭರದ್ವಾಜ ಮಹಾಮುನಿಯೂ ಸಹ ವಿಶುದ್ಧ ಮನಸ್ಸನ್ನು ಪಡೆದರು.

*ತಸ್ಮಾದಾಂಗೀರಸಃ ಪ್ರಾಪ ತಸ್ಮಾತ್ ಪ್ರಾಪ ಮಹಾಕ್ರತುಃ ।*
*ಅವಾಪ ಭಾರ್ಗವಸ್ತಸ್ಮಾದಗ್ನಿಪುತ್ರಾಯ ಸೋಽಬ್ರವೀತ್ ॥208॥*

ಭರದ್ವಾಜರಿಂದ ಆಂಗೀರಸರು ಸಹಸ್ರನಾಮವನ್ನು ಪಡೆದರು, ಅವರಿಂದ ಮಹಾಕ್ರತುವು ಪಡೆದರು, ಅವರಿಂದ ಭಾರ್ಗವರು, ಅವರು ಅಗ್ನಿಪುತ್ರರಿಗೆ ಹೇಳಿದರು,

*ಜೈಮಿನಿಯಾಯ ಸ ಪ್ರಾಹ ಸೋಽಬ್ರವೀಚ್ಚ್ಯವನಾಯ ಚ ।*
*ತಸ್ಮಾದವಾಪ ಶಾಂಡಿಲ್ಯೋ ಗರ್ಗಾಯ ಪ್ರಾಹ ವೈ ಮುನಿಃ ॥209॥*

ಅಗ್ನಿಪುತ್ರರು ಜೈಮಿನಿಯವರಿಗೆ ಹೇಳಿದರು. ಅವರು ಚ್ಯವನರಿಗೂ, ಅವರಿಂದ ಶಾಂಡಿಲ್ಯರು ಪಡೆದರು. ಶಾಂಡಿಲ್ಯ ಋಷಿಗಳು ಗರ್ಗರಿಗೆ ಹೇಳಿದರು.

*ಮೃತ್ಯುಂಜಯಾಯ ಸ ಪ್ರಾಹ ಜಾತೂಕರ್ಣ್ಯಾಯ ಸಂಯಮೀ ।*
*ವಿಷ್ಣುವೃದ್ಧಾಯ ಸ ಪ್ರಾಹ ಸೋಽಪಿ ಬೋಧಾಯನಾಯ ಚ ॥210॥*

ಗರ್ಗರು ಮೃತ್ಯುಂಜಯರಿಗೆ ಹೇಳಿದರು, ಸಂಯುಮಿಗಳಾದ ಅವರು ಜಾತೂಕರ್ಣರಿಗೆ ಹೇಳಿದರು, ಅವರು ವಿಷ್ಣುವೃದ್ಧರಿಗೆ ಹೇಳಿದರು, ಅವರೂ (ವಿಷ್ಣುವೃದ್ಧರೂ) ಬೋಧಾಯನರಿಗೆ ಹೇಳಿದರು.

*ಕ್ರಮಾತ್ಸ ವಿಷ್ಣವೇ ಪ್ರಾಹ ಸ ಪ್ರಾಹೋದ್ದಾಮಕುಕ್ಷಯೇ ।*
*ನೃಸಿಂಹತೇಜಸ್ತಸ್ಮಾತ್ತು ಪ್ರಾಪ ಸಿದ್ಧಿಮವಾಪ ಚ ॥211॥*

ಕ್ರಮವಾಗಿ ವಿಷ್ಣುವಿಗೇ ಹೇಳಿದರು, ಅವರು ಉದ್ದಾಮ ಕುಕ್ಷಿಗೂ, ಅವರಿಂದ ನೃಸಿಂಹ ತೇಜರೂಪ ಪಡೆದರು ಮತ್ತು ಸಿದ್ಧಿಯನ್ನು ಪಡೆದರು.

*ಉಪದಿಷ್ಟೋಽಸ್ಮಿ ತೇನಾಹಮಿದಂ ನಾಮಸಾಹಸ್ರಕಮ್ ।*
*ತತ್ಪ್ರಸಾದಾದಮೃತ್ಯುರ್ಮೇ ಯಸ್ಮಾತ್ತಸ್ಮಾದ್ಭಯಂ ನ ಹಿ ॥212॥*

ಅವರಿಂದ ನಾನು ಸಹಸ್ರನಾಮವನ್ನು ಉಪದೇಶಿಸಲ್ಪಟ್ಟಿದ್ದೇನೆ. ಅವರ ಪ್ರಸಾದರಿಂದ ನನಗೆ (ಮಾರ್ಕಂಡೇಯ ಮುನಿಗಳಿಗೆ) ಅಮೃತ್ಯು. (ಮೃತ್ಯುವು ಇಲ್ಲ). ಆದ ಕಾರಣ ಆ ಮೃತ್ಯುವಿನಿಂದ ನನಗೆ ಭಯವಿಲ್ಲ.

*ಮಯಾ ಚ ಕಥಿತಂ ಸ್ತೋತ್ರಂ ನಾರಸಿಂಹಮಿದಂ ತವ ।*
*ತಾವತ್ತ್ವಂ ಹಿ ಶುಚಿರ್ಭೂತ್ವಾ ತಮಾರಾಧಯ ಶಾಶ್ವತಮ್ ॥213॥*

ಮತ್ತು ನನ್ನಿಂದ ಈ ನರಸಿಂಹ ಸ್ತೋತ್ರವು ನಿನಗೆ (ಶ್ರೀ ಪರಾಶರರಿಗೆ) ಹೇಳಲ್ಪಟ್ಟಿದೆ. ಆದ ಕಾರಣ ನೀನು ಶುಚಿರ್ಭೂತನಾಗಿ ಶಾಶ್ವತವಾದ ಆ ನರಸಿಂಹನನ್ನು ಆರಾಧಿಸು.

ಶ್ರೀ ಪರಾಶರ ಉವಾಚ ॥

ಶ್ರೀ ಪರಾಶರರು ಹೇಳಿದರು -

*ಸರ್ವಭೂತಾಶ್ರಯಂ ದೇವಂ ನೃಸಿಂಹಂ ಪರಮೇಶ್ವರಮ್ ।*
*ಮಹ್ಯಂ ಸಂದರ್ಶಯಾಮಾಸ ಮಾರ್ಕಂಡೇಯೋ ಮಹಾಮುನಿಃ ॥214॥*

ಸರ್ವಭೂತಗಳಿಗೂ ಆಶ್ರಯದಾತನಾದ ದೇವನಾದ ಪರಮೇಶ್ವರನಾದ ನರಸಿಂಹನನ್ನು ನನಗೆ (ಪರಾಶರರಿಗೆ) ಮಾರ್ಕಂಡೇಯ ಮಹಾಮುನಿಯು ಪೂರ್ಣವಾಗಿ ದರ್ಶನ ಮಾಡಿಸಿದರು.

*ಪ್ರಾಣತುಲ್ಯಮಿದಂ ಸ್ತೋತ್ರಂ ಗೋಪ್ಯಂ ಜಾಪ್ಯಂ ಶುಚಿವ್ರತೈಃ ।*
*ಕ್ಷಿಪ್ರಸಿದ್ಧಿಪ್ರದಂ ನೃಣಾಂ ದುರ್ಲಭಂ ಕಲಿತಾರಕಮ್ ॥215॥*

ಪ್ರಾಣಕ್ಕೆ ಸಮಾನವಾದುದು ಈ ನರಸಿಂಹ ಸಹಸ್ರನಾಮವು. ಇದನ್ನು ಗೋಪ್ಯವಾಗಿ (ಗುಟ್ಟಾಗಿಯೂ), ಶುಚಿಯಾಗಿಯೂ, ವ್ರತದ ಸಮಾನ ರೀತಿಯಲ್ಲಿ ಜಪವಾಗಿ ಮಾಡಬೇಕು. ಮನುಷ್ಯರಿಗೆ ಕ್ಷಿಪ್ರವಾಗಿ ಸಿದ್ಧಿಯನ್ನು ಕೊಡತಕ್ಕದ್ದು. ಲಭಿಸಲು ಸುಲಭ ಸಾಧ್ಯವಲ್ಲ. ಕಲಿಯಲ್ಲಿ ಸಂಸಾರ ಸಾಗರ / ಭವಸಾಗರವನ್ನು ತಾರಣ - ದಾಟಿಸುವ ನರಸಿಂಹನ ಮಹಾಸಹಸ್ರನಾಮ ಮಂತ್ರವೇ ಇದು.

ಇತಿ ಶ್ರೀ ಲೋಕಾಂಬಾ ಸಮೇತ ಶ್ರೀ
ಶೀಬೀ ಲಕ್ಷ್ಮೀನರಸಿಂಹಾರ್ಪಣಮಸ್ತು ॥

|| ಸರ್ವೇ ಜನಾಃ ಸುಖಿನೋ ಭವಂತು ||

|| ಸಮಸ್ತ ಸನ್ಮಂಗಳಾನಿ ಭವಂತು ||

ಯಸ್ಯ ಸ್ಮೃತ್ಯಾ ಚ ನಮೋಕ್ತ್ಯಾ ತಪಃ ಪೂಜಾ ಕ್ರಿಯಾದಿಷು /
ನ್ಯೂನ್ಯಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ /
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ /
ಯತ್ಕೃತಂ ತು ಮಯಾ ಪೂಜಾ ಪರಿಪೂರ್ಣಂ ತದಸ್ತು ಮೇ //

ಅನಯಾ ಸಹಸ್ರನಾಮ ಪಠನೇನ ಕಥನೇನ ಶ್ರವಣೇನ ಮನನೇನ ಭಾವರಚನೇನ ಯೇ ಯೇ ಫಲಾನಿ ಸಂಭವಿಷ್ಯಂತಿ ತತ್ಸರ್ವಂ ತ್ವತ್ಪಾದಯೋಃ ಶ್ರೀಮನ್ನಾರಾಯಣಾಯೇತಿ ಸಮರ್ಪಯಾಮಿ //

ಅನೇನ ಭಗವಾನ್ ಸರ್ವಾತ್ಮಕಃ ಸುಪ್ರೀತೋ ಸುಪ್ರಸನ್ನೋ ವರದೋ ಭವಂತು ಲೋಕಾಸ್ಸಮಸ್ತಾಃ ಸುಖಿನೋ ಭವಂತು.

ಮಧ್ಯೇ ಮಂತ್ರ ತಂತ್ರ ಸ್ವರವರ್ಣ ಲೋಪದೋಷ
ಪ್ರಾಯಶ್ಚಿತ್ತಾರ್ಥಂ ನಾಮತ್ರಯ ಮಂತ್ರ ಜಪಂ ಕರಿಷ್ಯೇ /
ಅಚ್ಯುತಾಯ ನಮಃ / ಅನಂತಾಯ ನಮಃ / ಗೋವಿಂದಾಯ ನಮಃ /
ಅಚ್ಯುತಾಯ ನಮಃ / ಅನಂತಾಯ ನಮಃ / ಗೋವಿಂದಾಯ ನಮಃ /
ಅಚ್ಯುತಾಯ ನಮಃ / ಅನಂತಾಯ ನಮಃ / ಗೋವಿಂದಾಯ ನಮಃ /
ಅಚ್ಯುತಾನಂತ ಗೋವಿಂದೇಭ್ಯೋ ನಮಃ //
ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾ
ಪ್ರಕೃತೇಃ ಸ್ವಭಾವಾತ್ ಕರೋಮಿ ಯದ್ಯತ್ ಸಕಲಂ ಪರಸ್ಮೈ
ಶ್ರೀಮನ್ನಾರಾಯಣಾಯೇತಿ ಸಮರ್ಪಯಾಮಿ

ಹರಿಃ ಓಂ ತತ್ ಸತ್

|| ಶ್ರೀ ಕೃಷ್ಣಾರ್ಪಣಮಸ್ತು ||

# ಶ್ರೀಮಚ್ಛಂಕರಾಚಾರ್ಯ ವಿರಚಿತ
# ಶ್ರೀ ಲಕ್ಷ್ಮೀನೃಸಿಂಹ ಕರಾವಲಂಬನ ಸ್ತೋತ್ರಮ್
# ಶ್ಲೋಕ, ಪ್ರತಿಪದಾರ್ಥ, ತಾತ್ಪರ್ಯಗಳು

ಶ್ರೀಮತ್ಪಯೋನಿಧಿನಿಕೇತನ ಚಕ್ರಪಾಣೇ
ಭೋಗಿಂದ್ರಭೋಗಿಫಣಿರಂಜಿತಪುಣ್ಯಮೂರ್ತೇ
ಯೋಗೀಶಶಾಶ್ವತಶರಣ್ಯಭವಾಬ್ಧಿಪೋತ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ||೧||

ಶ್ರೀಮತ್ - ಸಂಪತ್ತುಳ್ಳ, ಪ್ರಖ್ಯಾತವಾದ, ಸುಂದರ, ಸುದೈವವುಳ್ಳ, ಪಯೋನಿಧಿ - ಸಮುದ್ರದಲ್ಲಿ, ನಿಕೇತನ - ಅರಮನೆ, ವಾಸಸ್ಥಾನ, ಚಕ್ರಪಾಣೇ - ಚಕ್ರವನ್ನು ಕೈಯಲ್ಲಿ ಹಿಡಿದುಕೊಂಡಿರುವ, ಭೋಗೀಂದ್ರ - ಸುಖಗಳಲ್ಲೆಲ್ಲಾ ಹೆಚ್ಚಾದ ಸುಖಗಳನ್ನು ಕೊಡತಕ್ಕ, ಭೋಗಿ - ರಾಜ, ನಾಗರಹಾವಿನ ಹಾಸಿಗೆ, (ಆದಿಶೇಷನ ಹಾಸಿಗೆ), ಫಣಿರಂಜಿತ - ಹೆಡೆಗಳಿಂದ ಕೂಡಿ ಚೆನ್ನಾಗಿ ಕಾಣುತ್ತಿರುವ, ಪುಣ್ಯಮೂರ್ತೇ - ಪವಿತ್ರ, ಮಂಗಳಕರ, ಸುಂದರ, ಮಧುರ, ಪ್ರಿಯಕರವಾದ ಆಕಾರವುಳ್ಳ; ಯೋಗೀಶ - ಸಂನ್ಯಾಸಿ, ಭಕ್ತಿಯನ್ನು ಎಡೆಬಿಡದೇ ಆಚರಿಸತಕ್ಕವರಿಗೆ ಒಡೆಯನಾದ; ಶಾಶ್ವತ - ಚಿರಕಾಲ ಬಾಳುವ, ಕಳೆದು ಹೋಗದೇ ಇರುವ, ಶರಣ್ಯ - ರಕ್ಷಣೆ, ಆಶ್ರಯ ಪಡೆಯಲು ತಕ್ಕ ಸ್ಥಳವಾದ, ಭವಾಬ್ಧಿ ಪೋತ - ಸಂಸಾರ, ಕಣ್ಣಿಗೆ ಕಾಣುತ್ತಿರುವ ಪ್ರಪಂಚವೆಂಬ ಸಮುದ್ರದಿಂದ ಪವಿತ್ರಗೊಳಿಸತಕ್ಕ ಅಥವಾ ದಾಟಿಸತಕ್ಕವನಾದ; ಲಕ್ಷ್ಮೀನೃಸಿಂಹ - ಧನ, ಸೌಂದರ್ಯ, ಯಶಸ್ಸು ತೇಜಸ್ಸು ಕಾಂತಿಗಳಿಗೆ ದೇವತೆಯಾದ ಲಕ್ಷ್ಮಿಯಿಂದ ಕೂಡಿದ, ಮನುಷ್ಯ ದೇಹ ಮತ್ತು ಸಿಂಹದ ತಲೆಯಿಂದ ಕೂಡಿದ ನರಸಿಂಹ ಸ್ವಾಮಿಯೇ, ಹೇ - ಎಲೈ, ಮಮ - ನನಗೆ, ದೇಹಿ - ಕೊಡು, ದಯಪಾಲಿಸು, ಕರಾವಲಂಬಂ - ಕೈಗಳಿಗೆ, ಆಧಾರವನ್ನು ಕೋಲನ್ನು ಆಶ್ರಯವನ್ನು

ತಾತ್ಪರ್ಯ,

ಸಂಪತ್ತು, ಪ್ರಖ್ಯಾತಿ, ಸುದೈವಗಳಿಂದ ಕೂಡಿದ ಸಮುದ್ರದಲ್ಲಿರುವ ಅರಮನೆ, ವಾಸಸ್ಥಾನದಲ್ಲಿ ಕೈಯಲ್ಲಿ ಚಕ್ರವನ್ನು ಹಿಡಿದುಕೊಂಡು ಇರತಕ್ಕ; ಸುಖಗಳಲ್ಲೆಲ್ಲ ಹೆಚ್ಚಾದ ಸುಖವನ್ನು ಕೊಡತಕ್ಕ ಹೆಡೆಗಳಿಂದ ಕೂಡಿದ ಆದಿಶೇಷನ ಹಾಸಿಗೆಯಲ್ಲಿ ಇರುವ ಪವಿತ್ರವಾದ ಮಂಗಳಕರ ಸುಂದರ ಮಧುರ ಪ್ರಿಯಕರವಾದ ಆಕಾರವುಳ್ಳ; ಭಕ್ತಿಯನ್ನು ಬಿಡದೇ ಆಚರಿಸತಕ್ಕವರಿಗೆ ಒಡೆಯನಾದ; ಕಳೆದು ಹೋಗದೆ ಇರುವ ಆಶ್ರಯವನ್ನು ಕೊಡತಕ್ಕ ಸ್ಥಾನವಾದ; ಕಣ್ಣಿಗೆ ಕಾಣುವ ಪ್ರಪಂಚವೆಂಬ ಸಮುದ್ರದಿಂದ ದಾಟಿಸಿ ಮತ್ತು ಪವಿತ್ರಗೊಳಿಸಕ್ಕ; ಧನ ಸೌಂದರ್ಯ ಯಶಸ್ಸು ಕಾಂತಿಗಳಿಗೆ ದೇವತೆಯಾದ ಲಕ್ಷ್ಮಿಯಿಂದ ಕೂಡಿದ; ಮನುಷ್ಯನ

ಶರೀರ ಸಿಂಹದ ತಲೆಯಿರುವ ನರಸಿಂಹ ಸ್ವಾಮಿಯೇ! ಲಕ್ಷ್ಮೀ ನರಸಿಂಹ ಸ್ವಾಮಿಯೇ, ನನ್ನ ಕೈಗಳಿಗೆ ಆಧಾರ ಮತ್ತು ಆಶ್ರಯವಾದ ಕೋಲನ್ನು ಆಸರೆಯನ್ನು ಕೊಡು.

ಬ್ರಹ್ಮೇಂದ್ರರುದ್ರಮರುದರ್ಕಕಿರೀಟಕೋಟೀ
ಸಂಘಟ್ಟಿತಾಂಘ್ರಿಕಮಲಾಮಲಕಾಂತಿಕಾಂತ ।
ಲಕ್ಷ್ಮೀಲಸತ್ಕುಚಸರೋರುಹರಾಜಹಂಸ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥೨॥

ಬ್ರಹ್ಮೇಂದ್ರ ರುದ್ರಮರುದರ್ಕಕಿರೀಟಕೋಟೀ - ಬ್ರಹ್ಮ, ಇಂದ್ರ, ರುದ್ರ, ಮರುತ್ತು, ಸೂರ್ಯರುಗಳ, ಕಿರೀಟ - ಮುಕುಟಗಳಿಗೆ, ಕೋಟಿ - ಅಧಿಕವಾದ, ಮುಕ್ತಾಯ ಅಥವಾ ತುದಿಯಂತಿರುವ; ಸಂಘಟ್ಟಿತ - ಸೇರಲ್ಪಟ್ಟ, ಅಂಘ್ರಿ - ಪಾದಗಳು, ಕಮಲ - ಕಮಲದಂತಿರುವ, ಅಮಲ - ನಿರ್ಮಲ, ಹೊಳೆಯುವ, ಕಲಂಕವಿಲ್ಲದ, ಕಾಂತಿ - ತೇಜಸ್ಸುಗಳಿಗೆ, ಕಾಂತ - ಪತಿಯಂತಿರುವ; ಲಕ್ಷ್ಮೀ - ಲಕ್ಷ್ಮಿಯ, ಲಸತ್ - ಪ್ರಕಾಶಿಸುವ, ಕುಚ - ಸ್ತನಗಳಿಗೆ, ಸರೋರುಹ - ಸರೋವರದಲ್ಲಿ ಬಂದಿರುವ, ರಾಜಹಂಸ - ರಾಜಹಂಸ - ಪತಿಯಂತಿರುವ; ಲಕ್ಷ್ಮೀ ನೃಸಿಂಹ ಮಮದೇಹಿ ಕರಾವಲಂಬಂ. - (ಮೇಲಿನ ಶ್ಲೋಕದಂತೆಯೇ ಅರ್ಥ.)

ಬ್ರಹ್ಮ, ಇಂದ್ರ, ರುದ್ರ, ಮರುತ್ತುಗಳು ಸೂರ್ಯ ಇವರುಗಳ ಕಿರೀಟಕ್ಕೆ ತುಟ್ಟ ತುದಿಯಲ್ಲಿರುವ; ಇವರುಗಳೆಲ್ಲರೂ ಸೇರಿರುವ ಪಾದಗಳ ಅಡಿಯಲ್ಲಿ ಬಂದಿರುವ ನಿರ್ಮಲವಾದ ತೇಜಸ್ಸುಗಳಿಗೆ ಪತಿಯಂತಿರುವ, ಲಕ್ಷ್ಮಿಯ ತೇಜಸ್ಸುಳ್ಳ ಸ್ತನಗಳೆಂಬ ಸರೋವರದಲ್ಲಿ ಬೆಳೆದಿರುವ ಹಂಸಗಳಿಗೆಲ್ಲ ರಾಜನಂತಿರುವ, ಲಕ್ಷ್ಮೀ ನರಸಿಂಹ ಸ್ವಾಮಿಯೇ ನನಗೆ ಆಸರೆಯನ್ನು ಕೊಡು!

ತಾತ್ಪರ್ಯ -

ಬ್ರಹ್ಮ, ರುದ್ರ, ಇಂದ್ರ, ಮರುತ್ತು, ಸೂರ್ಯ ಇವರುಗಳು ದೇವತೆಗಳಲ್ಲಿ ಬಹು ಮುಖ್ಯವಾದವರು. ಚತುರ್ಮುಖ ಬ್ರಹ್ಮ, ಏಕಾದಶ ರುದ್ರರು, ದೇವತೆಗಳ ರಾಜನಾದ ಇಂದ್ರ, ೪೯ ಮರುತ್ತುಗಳು, ದ್ವಾದಶಾದಿತ್ಯರು ಇವರೆಲ್ಲರೂ ಒಂದೇ ಸಲ ಒಟ್ಟಿಗೆ ಸೇರಿದ್ದಾರೆ. ನರಸಿಂಹ ಸ್ವಾಮಿಯ ಪಾದದಲ್ಲಿ ಸೇರಿದ್ದಾರೆ. ಪಾದಗಳು ಕಮಲೋಪಾದಿಯಲ್ಲಿವೆ. ಇವುಗಳಲ್ಲಿ ಕಿಂಚಿತ್ತೂ ದೂಷಿತವಾದ ವಸ್ತು ಇಲ್ಲ. ಪಾದಗಳು ನಿರ್ಮಲವಾಗಿ ಹೊಳೆಯುತ್ತಿವೆ. ಇಂತಹ ಪಾದಗಳಿರುವ ನರಸಿಂಹ ಸ್ವಾಮಿಯನ್ನು ಪ್ರಾರ್ಥಿಸುತ್ತಿದ್ದೇನೆ. ಲಕ್ಷ್ಮೀ ದೇವಿಯ ಕುಚದ್ವಯವು ಉನ್ನತವಾದ್ದು. ಸರೋವರದಲ್ಲಿ ಬಂದಿರುವ ಇವುಗಳಿಗೆ ಹಂಸ ಪಕ್ಷಿಗಳಿಗೆ ರಾಜನಂತಿರುವ ಲಕ್ಷ್ಮೀನರಸಿಂಹ ಸ್ವಾಮಿಯೇ! ನನಗೆ ನೀನು ಆಸರೆಯನ್ನು ಕೊಡು!

ಸಂಸಾರ ಘೋರಗಹನೇ ಚರತೋ ಮುರಾರೇ
ಮಾರೋಗ್ರಭೀಕರಮೃಗಪ್ರವರಾರ್ದಿತಸ್ಯ
ಮಾತ್ಸರ್ಯದುಸ್ಸಹನಿದಾಘನಿಪೀಡಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ||೩||

ಸಂಸಾರ - ಜಗತ್ತು, ಪ್ರಪಂಚ, ಐಹಿಕ ಜೀವನದಲ್ಲಿ, ಘೋರ - ಭಯಂಕರ, ಅತಿ ದುಷ್ಟವಾದ, ಗಹನೇ - ಅರಣ್ಯ, ಆಳವಾದ, ದುರ್ಗಮವಾದ; ಚರತೋ - ಅಡ್ಡಾಡು, ಚಲಿಸುತ್ತಿರುವ, ಮುರಾರೇ - ಮುರನಿಗೆ ಶತೃವಾದ ಮುರಾರಿಯೇ! ಮಾರ - ಮನ್ಮಥ, ಉಗ್ರ - ಕೋಪವುಳ್ಳ, ಭೀಕರ - ಭಯವುಂಟುಮಾಡುವ, ಮೃಗ - ಪ್ರಾಣಿ, ಪ್ರವರಾರ್ದಿತಸ್ಯ - ಪೀಡಿಸಲ್ಪಟ್ಟ; ಮಾತ್ಸರ್ಯ - ಹೊಟ್ಟೆಕಿಚ್ಚು, ವೈರತ್ವ, ದುಸ್ಸಹ - ಸಹಿಸಲಸಾಧ್ಯವಾದ, ನಿಧಾಘನಿಪೀಡಿತಸ್ಯ - ಕಾಡುಮೃಗಗಳಿಂದ ಹಿಂಸಿಸಲ್ಪಟ್ಟ; ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ.

ಮುರನೆಂಬುವನ ಶತೃವಾದ ಮುರಾರಿಯೇ! ಲಕ್ಷ್ಮೀ ನರಸಿಂಹ ಸ್ವಾಮಿಯೇ! ಅತಿ ದಟ್ಟವಾದ ದಾರಿಗಳೇ ಕಾಣದಿರುವ ಭಯವನ್ನು ಹುಟ್ಟಿಸುವ ಈ ಪ್ರಪಂಚದಲ್ಲಿ ನಾನು ಓಡಾಡುತ್ತಿದ್ದೇನೆ. ಉಗ್ರ ಅಂದರೆ ಕೋಪವನ್ನು ಹೆದರಿಕೆಯನ್ನು ಹುಟ್ಟಿಸುವ ಪ್ರಾಣಿಗಳ ಹಾಗೆ ಈ ಮನ್ಮಥ ಅಂದರೆ ಆಸೆಯಿಂದ ಪೀಡಿಸಲ್ಪಡುತ್ತಿದ್ದೇನೆ. ಮನ್ಮಥನಿಂದ ಮತ್ತು ಹೊಟ್ಟೆ ಕಿಚ್ಚು ಎಂಬುದರಿಂದ ಸಹಿಸಲಾರದಷ್ಟು ತೊಂದರೆಯಾಗುತ್ತಿದೆ. ನನಗೆ, ಇಂತಹ ನನ್ನ ಕೈಗಳಿಗೆ ನೀನು ಆಸರೆಯನ್ನು ಕೊಡು!

**ತಾತ್ಪರ್ಯ -**
ಈ ಪ್ರಪಂಚ, ಮನ್ಮಥ, ಮಾತ್ಸರ್ಯಗಳಲ್ಲಿ ಸಿಕ್ಕಿರುವ ನನಗೆ ಆಸರೆಯನ್ನು ಕೊಡು.

ಸಂಸಾರಕೂಪಮತಿಘೋರಮಗಾಧಮೂಲಂ
ಸಂಪ್ರಾಪ್ಯ ದುಃಖಶತಸರ್ಪಸಮಾಕುಲಸ್ಯ
ದೀನಸ್ಯ ದೇವ ಕೃಪಣಾಪದಮಾಗತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ||೪||

ಸಂಸಾರ - ಜಗತ್ತು / ಐಹಿಕ ಜೀವನವು, ಕೂಪಂ - ಭಾವಿಯು, ಅತಿ ಘೋರಂ - ಬಹಳ ಭಯವನ್ನುಂಟುಮಾಡತಕ್ಕದ್ದು, ಅಗಾಧ ಮೂಲಂ - ಬಹಳ ಹಿಂದಿನದು / ತುಂಬ ಹಿಂದೆ ಶುರುವಾದ್ದು, ಮೇರೆಯಿಲ್ಲದ; ಸಂಪ್ರಾಪ್ಯ - ಪಡೆದು ಅಥವಾ ಹೊಂದಿ, ದುಃಖ - ದುಃಖ, ಸಂಕಟ, ಶತ - ನೂರಾರು / ಎಣಿಸಲಾದಷ್ಟು, ಸರ್ಪ - ಹಾವುಗಳು,

ಅಂದರೆ ವಿಷದಿಂದ ಕೂಡಿದ ಉದ್ಬುದ್ಧವಾದ ಸರಣಿಗಳು. ಸಮಾಕುಲಸ್ಯ - ಬಂದು ಸೇರಿರುವಂಥವನು, ಇನ್ನೊಬ್ಬರು ನೋಡಿದರೆ ಅಯ್ಯೋ ಎನ್ನುವಂಥ ಸ್ಥಿತಿಯಲ್ಲಿರುವವನಾದವನು, ದೇವ - ಎಲೈ ಸ್ವಾಮಿಯೇ! ಕೃಪಣಾಪದಂ - ಸಹಾಯವಿಲ್ಲದ, ಅವಿವೇಕಿ ನೀಚ, ದುಷ್ಟನ ಸ್ಥಿತಿಗೆ, ಆಗತಸ್ಯ - ಬಂದಿರುವಂಥವನಾದ, (ನನಗೆ) ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ.

ಸ್ವಾಮಿಯಾದ ಲಕ್ಷ್ಮೀನರಸಿಂಹನೇ, ಐಹಿಕ ಜೀವನವೆಂಬ ದೊಡ್ಡ ಭಾವಿಯಲ್ಲಿ ಬಿದ್ದಿದ್ದೇನೆ. ಈ ಭಾವಿಯು ಬಹಳ ಹೆದರಿಕೆಯನ್ನು ಉಂಟುಮಾಡುತ್ತಿದೆ. ಇದು ಎಷ್ಟು ಹಿಂದಿನಿಂದ ಇದೆ ಎಂಬುದು ಗೊತ್ತಿಲ್ಲ. ಬಹಳ ಹಿಂದಿನದು, ಈಗ ನಾನು ಇದರಲ್ಲಿ ಇದ್ದೇನೆ. (ಇದನ್ನು ಪಡೆದಿದ್ದೇನೆ.) ಇದು ಬಹಳ ದುಃಖಮಯವಾದುದು, ಎಣಿಸಲಾರದಷ್ಟು ವಿಷವುಳ್ಳ ಹಾವುಗಳ ಹಾಗೆ ಇದೆ. ಇದನ್ನು ನಾನು ಹೊಂದಿದ್ದೇನೆ. ಅವೇ ನನಗೆ ಸೇರಿಕೊಂಡಿವೆ. ನಾನು ಬಹಳ ಅವಿವೇಕಿ, ನೀಚ, ದುಷ್ಟ, ಅಸಹಾಯಕನು. ಈ ಸಂಸಾರದಲ್ಲಿ ಇಂಥ ಸ್ಥಿತಿಗೆ ಬಂದಿರುತ್ತೇನೆ. ಯಾರು ನೋಡಿದರೂ ಅಯ್ಯೋ ಪಾಪ ಅನ್ನುವ ಸ್ಥಿತಿಯಲ್ಲಿರುತ್ತೇನೆ. ಇಂಥ ನನಗೆ ನೀನು ಆಸರೆಯಾಗಿ ಬಂದು ನಿನ್ನ ಕೈಗಳನ್ನು ಕೊಡು. ನನ್ನನ್ನು ಬಿಡುಗಡೆ ಮಾಡಿ ಉದ್ಧಾರಮಾಡು.

ಸಂಸಾರಸಾಗರವಿಶಾಲಕರಾಳಕಾಲ
ನಕ್ರಗ್ರಹಗ್ರಸನನಿಗ್ರಹವಿಗ್ರಹಸ್ಯ
ವ್ಯಗ್ರಸ್ಯ ರಾಗರಸನೋರ್ಮಿನಿಪೀಡಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ||೫||

ಸಂಸಾರ - ಜಗತ್ತು, ಐಹಿಕ ಪ್ರಪಂಚವು, ಸಾಗರ - ಸಮುದ್ರದಷ್ಟು, ವಿಶಾಲ - ದೊಡ್ಡದಾದ್ದು, (ಅಳೆಯಲಸಾಧ್ಯ), ಕರಾಳ - ವಿಷಪೂರಿತವಾದ್ದು, ಕಾಲ - ಕೊನೆಯಿಲ್ಲದ್ದು; ನಕ್ರ - ಮೊಸಳೆಗಳಿಂದ, ಗ್ರಹ - ಆವರಿಸಲ್ಪಟ್ಟು, ಗ್ರಸನ - ತಿನ್ನುವುದು / ನುಂಗುವುದು, ಹಿಡಿಯುವುದು, ನಿಗ್ರಹ - ಅಧೀನದಲ್ಲಿ ಸಿಕ್ಕಿಕೊಂಡು, ವಿಗ್ರಹಸ್ಯ - ಜಗಳದಲ್ಲಿ ಸಿಕ್ಕಿಕೊಂಡವನಾದ ನನಗೆ; ವ್ಯಗ್ರಸ್ಯ - ದುಃಖ / ಗೊಂದಲದಲ್ಲಿ ಬಿದ್ದಿರುವ; ರಾಗ ರಸನಾ- ಸಿಟ್ಟು, ಆಸೆ, ಮೊದಲಾದುವುಗಳು; ಉರ್ಮಿನಿಪೀಡಿತಸ್ಯ ಮೊದಲಾದುವುಗಳಿಂದ ಹಿಂಸಿಸಲ್ಪಟ್ಟ, ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ.

ಹೇ ಲಕ್ಷ್ಮೀನರಸಿಂಹ ಸ್ವಾಮಿಯೆ, ಪ್ರಪಂಚವು ದೊಡ್ಡ ಸಮುದ್ರದಂತಿದೆ. ಬಹು ದೊಡ್ಡದು ಉದ್ದ ಅಗಲ ತುದಿ, ಮೊದಲೇ ಗೊತ್ತಾಗುತ್ತಿಲ್ಲ. ಬಹಳ ಕಷ್ಟಗಳಿಂದ ಕೂಡಿದ್ದು. ಈ ಕಾಲನ ಮಹಿಮೆಯಿಂದ ಯಾವಾಗ ಶುರುವಾಯಿತು ಎಲ್ಲಿಯವರೆಗೆ ಇದೆ, ಎಂದಿಗೆ ಕೊನೆಯಾಗುತ್ತದೆ ಎಂದು ತಿಳಿಯುವುದೇ ಇಲ್ಲ. ಇಲ್ಲಿ ಇಂಥ ಸಮುದ್ರದಲ್ಲಿ

ಕಷ್ಟ ಸುಖ ದುಃಖಗಳೆಂಬ ಮೊಸಳೆಗಳಿಗೆ ಮಿತಿಯೇ ಇಲ್ಲ. ಇವುಗಳು ಸದಾ ಆವರಿಸಿಕೊಂಡಿವೆ. ನನ್ನನ್ನು ತಿನ್ನುತ್ತಿವೆ. ಹಿಡಿದು ನುಂಗುತ್ತಿವೆ. ಇಂಥ ದುಃಖಗಳಲ್ಲಿ ಬಿದ್ದಿರುವ ನನಗೆ ಆಸೆ, ಕೋಪ, ಮೋಹ, ಮದ, ಮಾತ್ಸರ್ಯ, ಲೋಭಗಳೇ ಯಾವಾಗಲೂ ಪೀಡಿಸುತ್ತಿವೆ. ಇಂಥ ನನ್ನನ್ನು ನೀನು ಕಾಪಾಡು.

ಸಂಸಾರವೃಕ್ಷಮಘಬೀಜಮನಂತಕರ್ಮ
ಶಾಖಾಶತಂ ಕರಣಪತ್ರಮನಂಗಪುಷ್ಪಂ ।
ಆರುಹ್ಯ ದುಃಖ ಫಲಿತಂ ಪತತೋ ದಯಾಳೋ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ।।೬।।

ಸಂಸಾರ - ಜಗತ್ತು ಎಂಬುದೇ, ವೃಕ್ಷಂ - ಮರವು, ಅಘ - ಪಾಪ, ದುಃಖಗಳೇ, ಬೀಜಂ - ಬೀಜಗಳು; ಅನಂತ - ಕೊನೆ ಮೊದಲಿಲ್ಲದ, ಕರ್ಮ - ಕರ್ತವ್ಯಗಳು, ಕೆಲಸಗಳು, ಶಾಖಾ - ಕೊಂಬೆಗಳು, ಶತಂ - ನೂರಾರು, ಎಣಿಸಲಾರದಷ್ಟು; ಕರಣ - ಕಾರ್ಯ, ಉಪಕರಣ, ಸಾಧನಗಳೇ, ಪತ್ರಂ - ಎಲೆಗಳು, ಅನಂಗ - ಮನ್ಮಥ (ಶರೀರವಿಲ್ಲದವನು), ಪುಷ್ಪಂ - ಹೂವುಗಳು, ಆರುಹ್ಯ - ಹತ್ತಿ, ಏರಿ, ದುಃಖ ಫಲಿತಂ - ದುಃಖವೆಂಬ ಹಣ್ಣುಗಳಿಂದ ಕೂಡಿದ ಮರ, ಪತತಃ - ಬೀಳುತ್ತಿರುವ (ನನಗೆ), ದಯಾಳೋ - ದಯೆಯಿಂದ ಕೂಡಿದ, ಲಕ್ಷ್ಮೀ ನೃಸಿಂಹ ಮಮ ದೇಹಿ ಕರಾವಲಂಬಂ.

ಹೇ ದಯಾಮಯನಾದ ಲಕ್ಷ್ಮೀ ನರಸಿಂಹ ಸ್ವಾಮಿಯೇ, ನಾನಿರುವುದು ಈ ಸಂಸಾರದಲ್ಲಿ. ಇದರಲ್ಲಿ ಸಿಕ್ಕಿಕೊಂಡಿದ್ದೇನೆ. ಈಗ ಬೀಳುತ್ತಿದ್ದೀನಿ, ಈ ಸಂಸಾರವು ಒಂದು ಮರದ ಹಾಗೆ ಇದೆ.

ಈ ಪ್ರಪಂಚಕ್ಕೆ ತುದಿ ಮೊದಲಿಲ್ಲ. ಯಾವಾಗ ಶುರುವಾಯಿತು ಎಂದಿಗೆ ಮುಗಿಯುತ್ತೆ ಎಂಬುದು ತಿಳಿಯಲಸಾಧ್ಯ. ಈ ಪ್ರಪಂಚವೇ ಮರ, ಪಾಪಗಳು ದುಃಖಗಳು ಇದಕ್ಕೆ ಬೀಜ. ಈ ಬೀಜದಿಂದ ಮರ ಬೆಳೆಯುತ್ತಿದೆ. ಕರ್ತವ್ಯಗಳು, ಕೆಲಸಗಳು ಇವೇ ಕೊಂಬೆಗಳು. ಇವುಗಳು ಲೆಕ್ಕವಿಲ್ಲದಷ್ಟು. ಇದನ್ನು ಸಾಧಿಸಿಕೊಳ್ಳಲು ಮಾಡುವ ಪ್ರಯತ್ನಗಳೇ ಎಲೆಗಳು.

ಇದರಲ್ಲಿ ಬರುವ ಮನ್ಮಥ, ಅರಿಷಡ್ವರ್ಗ, ಕಾಮ, ಕ್ರೋಧ, ಲೋಭ, ಮದ, ಮೋಹ, ಮಾತ್ಸರ್ಯಗಳೇ ಹೂವುಗಳು. ಇವುಗಳಿಂದ ಬರತಕ್ಕ ದುಃಖವೇ ಹಣ್ಣುಗಳು, ಎಂದ ಮೇಲೆ ಫಲಗಳಿಗೆ ಕಡಿಮೆಯೇ ಇಲ್ಲ. ಇಂತಹ ಮರವನ್ನು ಹತ್ತಿ, ಫಲಗಳನ್ನು ಅನುಭವಿಸುತ್ತಾ ಬೀಳುತ್ತಿದ್ದೀನಿ. ಸ್ವಾಮಿಯೇ, ದಯಾಳುವೇ, ನನ್ನನ್ನು ಆಸರೆ ಕೊಟ್ಟು ಕಾಪಾಡು.

ಸಂಸಾರಸರ್ಪಘನವಕ್ತ್ರಭಯೋಗ್ರತೀವ್ರ
ದಂಷ್ಟ್ರಾಕರಾಳವಿಷದಗ್ಧವಿನಷ್ಟಮೂರ್ತೇ ।
ನಾಗಾರಿವಾಹನ ಸುಧಾಬ್ಧಿ ನಿವಾಸಶೌರೇ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥೭॥

ಸಂಸಾರ - ಈ ಜಗತ್ತು, ಸರ್ಪ - ಹೆಡೆಯುಳ್ಳ ಹಾವು, ಘನ - ಕಠಿಣವಾದ, ದೊಡ್ಡದಾದ, ವಕ್ತ್ರ - ಬಾಯಿ, ಭಯ - ಹೆದರಿಕೆ, ಉಗ್ರ - ಹೆಚ್ಚಾದ, ಕಠಿಣವಾದ, ತೀವ್ರ - ಅತಿಯಾದ, ದಂಷ್ಟ್ರಾ - ಕೋರೆದಾಡೆಗಳು, ಕರಾಳ - ಭಯಂಕರವಾದ, ವಿಷ - ವಿಷದಿಂದ, ದಗ್ಧ - ಸುಟ್ಟು, ಪೀಡಿಸಲ್ಪಟ್ಟ, ವಿನಷ್ಟ - ನಶ್ವರವಲ್ಲದ, ಮೂರ್ತೇ - ಮೂರ್ತಿಯೇ, ನಾಗ - ಸರ್ಪದ, ಅರಿ - ಶತ್ರುವನ್ನೇ, ವಾಹನ - ವಾಹನ ಮಾಡಿಕೊಂಡಿರುವ (ಗರುಡ ವಾಹನ), ಸುಧಾ - ಅಮೃತ, ಅಬ್ಧಿ - ಸಮುದ್ರದಲ್ಲಿರುವ, ನಿವಾಸ - ಮನೆಯಲ್ಲಿರತಕ್ಕ, ಶೌರೇ - ವಿಷ್ಣು, ಕೃಷ್ಣನೇ, ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ.

ಹೇ, ನಶ್ವರವಿಲ್ಲದ ಪರಮಾತ್ಮನೇ, ಗರುಡವಾಹನನಾದ, ಅಮೃತ ಸಮುದ್ರದಲ್ಲಿರುವ ಮನೆಯಲ್ಲಿರುವ ವಿಷ್ಣುವೇ, ಲಕ್ಷ್ಮೀ ನರಸಿಂಹನೇ, ನನಗೆ ಆಸರೆಯನ್ನ ಕೊಡು.

ಈ ಪ್ರಪಂಚವು ಅನೇಕ ಹೆಡೆಯುಳ್ಳ ಸರ್ಪವು, ಭಯಂಕರವಾದ ಬಾಯಿ ಉಳ್ಳದ್ದು. ಅತಿ ಹೆಚ್ಚು ಹೆದರಿಕೆಯುಂಟು ಮಾಡುವ ಕೋರೆದಾಡೆಗಳು ಉಳ್ಳದ್ದು. ಇಂತಹ ಹಾವಿನ ಬಾಯಿಯಲ್ಲಿ ಸಿಕ್ಕಿ ಸುಟ್ಟು ಹೋಗುತ್ತಿರುವ ನನ್ನನ್ನ ಕಾಪಾಡು.

ಸಂಸಾರದಾವದಹನಾತುರಭೀಕರೋರು
ಜ್ವಾಲಾವಳೀಭಿರತಿದಗ್ಧತನೂರುಹಸ್ಯ
ತ್ವತ್ಪಾದಪದ್ಮಸರಸೀ ಶರಣಾಗತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥೮॥

ಸಂಸಾರ - ಪ್ರಪಂಚವೆಂಬ, ದಾವ - ಕಾಡಿನಲ್ಲಿರುವ ಬೆಂಕಿಯಿಂದ, ದಹನ - ಸುಡಲ್ಪಟ್ಟು, ಆತುರ - ತೊಂದರೆಗೊಳಗಾಗಿರುವ, ಭೀಕರ - ಭಯಂಕರವಾದ, ಊರು - ದೇಹವುಳ್ಳ, ಜ್ವಾಲಾವಳೀಭಿಃ - ಬೆಂಕಿಗಳ ಗುಂಪಿನಿಂದ, ಅತಿ ದಗ್ಧ - ಬಹಳ ಸುಡಲ್ಪಟ್ಟ, ತನೂರುಹಸ್ಯ - ರೋಮಗಳು, ತ್ವತ್ - ನಿನ್ನ, ಪಾದ - ಪಾದ, ಪದ್ಮ - ಕಮಲ, ಸರಸೀ - ಸರೋವರದಲ್ಲಿ, ಶರಣಾಗತಸ್ಯ - ರಕ್ಷಣೆಗಾಗಿ ಬಂದಿರುವ, ಲಕ್ಷ್ಮೀ ನೃಸಿಂಹ ಮಮ ದೇಹಿ ಕರಾವಲಂಬಂ.

ಹೇ ಲಕ್ಷ್ಮೀ ನರಸಿಂಹ ಸ್ವಾಮಿಯೇ, ಈ ಸಂಸಾರವೇ ನನಗೆ ದೊಡ್ಡ ಕಾಡಾಗಿದೆ. ಈ ಕಾಡಿನಲ್ಲಿ ಬೆಂಕಿಗಳು ಹತ್ತಿ ಉರಿಯುತ್ತಿವೆ. ನಾನು ಇಲ್ಲಿ ಸಿಕ್ಕಿ ಕೊಂಡು ಅತಿಯಾಗಿ ಸುಡಲ್ಪಡುತ್ತಿದ್ದೇನೆ. ಬೆಂಕಿಗಳ ಜ್ವಾಲೆಗಳು ಗುಂಪು ಗುಂಪಾಗಿ ಬರುತ್ತಿವೆ. ನನಗೆ ಬೇರೆ ಏನು ತೋರದೆ ನಿನ್ನ ಪಾದಗಳಲ್ಲಿ ಬಿದ್ದಿದ್ದೇನೆ. ಈ ನಿನ್ನ ಪಾದಗಳು ಕಮಲಗಳು, ಈ ಪಾದಗಳೇ ದೊಡ್ಡ ಎಣೆಯಿಲ್ಲದ ಸರೋವರಗಳು. ಇಂತಹ ದೊಡ್ಡ ಬೆಂಕಿಯನ್ನು ಆರಿಸಬಲ್ಲದೆಂದು ನನ್ನ ನಂಬಿಕೆ. ಆದರಿಂದ ನೀನು ನನ್ನನ್ನು ಕೈ ಹಿಡಿದು ಎತ್ತಿ ಇಂತಹ ಬೆಂಕಿಯಿಂದ ರಕ್ಷಿಸು.

ಸಂಸಾರಜಾಲ ಪತಿತಸ್ಯ ಜಗನ್ನಿವಾಸ
ಸರ್ವೇಂದ್ರಿಯಾರ್ಥ ಬದಿಶಾರ್ಥ ಝಷೋಪಮಸ್ಯ ।
ಪ್ರೋತ್ಖಂಡಿತ ಪ್ರಚುರತಾಲುಕ ಮಸ್ತಕಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕೃಪಾವಲಂಬಮ್ ॥೯॥

ಸಂಸಾರ - ಈ ಜಗತ್ತು, ಐಹಿಕ ಜೀವನದ, ಜಾಲ - ಬಲೆಯಲ್ಲಿ (ಜೇಡ ಹುಳುವಿನ ಬಲೆಯೋಪಾದಿಯಲ್ಲಿ), ಪತಿತಸ್ಯ - ಬಿದ್ದಿರುವ, ಬಿದ್ದು ಸಿಕ್ಕಿ ಕೊಂಡಿರುವ, ಜಗನ್ನಿವಾಸ - ಪ್ರಪಂಚವನ್ನೇ ಮನೆ ಮಾಡಿಕೊಂಡಿರುವ ಪರಮಾತ್ಮನೇ, ಸರ್ವ - ಎಲ್ಲ, ಇಂದ್ರಿಯಾರ್ಥ - ಇಂದ್ರಿಯಗಳಿಗೋಸ್ಕರ, ಬದಿಶಾರ್ಥ - ಸೊರಗುವುದರ, ಝಷೋಪಮಸ್ಯ - ಆಹಾರದೋಪಾದಿಯಂತಿರುವ, ಪ್ರೋತ್ಖಂಡಿತ - ಅತಿಯಾಗಿ ನಿರಾಸೆ ಹೊಂದಿದ ಅಥವಾ ಅತಿಯಾಗಿ ನಾಶಮಾಡಲ್ಪಟ್ಟ, ಪ್ರಚುರ - ಶರೀರದ ಗುಂಪು, ತಾಲುಕ - ಗಂಟಲು / ಕಿರು ನಾಲಿಗೆ, ಮಸ್ತಕಸ್ಯ - ತಲೆ, ಲಕ್ಷ್ಮೀ ನೃಸಿಂಹ ಮಮ ದೇಹಿ ಕರಾವದಂಬಂ.

ಹೇ ಲಕ್ಷ್ಮೀ ನರಸಿಂಹ ಸ್ವಾಮಿಯೇ, ಜಗತ್ತನ್ನೇ ವಾಸಸ್ಥಾನವಾಗಿ ಮಾಡಿಕೊಂಡಿರುವ ಪರಮಾತ್ಮನೇ, ಈ ಸಂಸಾರವು ದೊಡ್ಡ ಜೇಡರ ಬಲೆಯಂತಿದೆ, ಹೇಗೆ ಹೋದರೂ ಬಿಡಿಸಿಕೊಂಡು ಬರಲು ದಾರಿಯೇ ಸಿಕ್ಕುತ್ತಿಲ್ಲ. ಒಂದು ದುಃಖದಿಂದ ಪಾರಾದರೆ, ಇನ್ನೊಂದು ಸುಖದ ರೂಪದಿಂದ ಕಾಣಿಸಿಕೊಂಡು ದುಃಖವಾಗಿಯೇ ಪರಿಣಮಿಸುತ್ತೆ. ಈ ದುಃಖಗಳ ಸರಪಣಿಗೆ ಕೊನೆಯೇ ಇಲ್ಲ.

ಈ ದುಃಖದಲ್ಲಿ ಬಿದ್ದು ಬಿದ್ದು ಎಲ್ಲ ಕೈ ಕಾಲು, ಶರೀರ, ಮನಸ್ಸು, ಬುದ್ಧಿ ಎಲ್ಲವೂ ದುರ್ಬಲವಾಗುತ್ತಿವೆ. ಈಗ ನಿನ್ನನ್ನ ಬಿಟ್ಟರೆ ಬೇರೆ ಯಾರು ಕಾಪಾಡುತ್ತಾರೆ. ಹೇ ನರಸಿಂಹ ಸ್ವಾಮಿಯೇ, ದಯಮಾಡಿ ನನ್ನನ್ನ ಉದ್ಧಾರಮಾಡು, ಈ ಶರೀರವು ತೀರ ಕ್ಷೀಣವಾಗಿ, ಬುದ್ಧಿ, ಮನಸ್ಸುಗಳು ವಿಕಲ್ಪವಾಗುವ ಮೊದಲೇ ನನ್ನನ್ನ ಕಾಪಾಡು. ಈ ಸಂಸಾರ ಮೋಹದಿಂದ ಪಾರುಮಾಡು.

ಸಂಸಾರ ಭೀಕರ ಕರೀಂದ್ರ ಕರಾಭಿಘಾತ
ನಿಷ್ಪಿಷ್ಟಮರ್ಮವಪುಷಸ್ಯ ಕಲಾರ್ತಿನಾಶ ।
ಪ್ರಾಣಪ್ರಯಾಣ ಭವ ಭೀತಿ ಸಮಾಕುಲಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥೧೦॥

ಸಂಸಾರ - ಈ ಜಗತ್ತು, ಭೀಕರ - ಹೆದರಿಕೆ ಹುಟ್ಟಿಸುವಂತಹದು, ಕರೀಂದ್ರ - ಆನೆಗಳಲ್ಲೆಲ್ಲ ದೊಡ್ಡ ಆನೆಯು, ಕರಾಭಿಘಾತ - ಕೈ ಹೊಡೆತದಿಂದ ಸಂಪೂರ್ಣ ನಾಶವಾಗಿರುವ, ನಿಷ್ಪಿಷ್ಟ - ಕ್ಷೀಣವಾಗಿರುವ ಚೂರು ಚೂರಾಗಿರುವ, ಮರ್ಮ - ತಿಳಿಯದೆ / ಗೊತ್ತಾಗದೇ, ವಪುಷಃ - ಶರೀರವುಳ್ಳ, ಸಕಲಾರ್ತಿನಾಶ - ಎಲ್ಲ ಕಷ್ಟಗಳನ್ನ ನಾಶಮಾಡುವ, ಪ್ರಾಣ ಪ್ರಯಾಣ - ಪ್ರಾಣಗಳು ದೇಹವನ್ನು ಬಿಡುವ ಕ್ಷಣದಲ್ಲಿ, ಭವ - ಪ್ರಪಂಚವನ್ನು ಬಿಡಬೇಕೆಂಬ, ಭೀತಿ - ಹೆದರಿಕೆ, ಸಮಾಕುಲಸ್ಯ - ಹೊಂದಿರುವ, ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ.

ಎಲೈ ಲಕ್ಷ್ಮೀನರಸಿಂಹ ಸ್ವಾಮಿಯೇ, ಈ ಪ್ರಪಂಚವೇ ಹೆದರಿಸುವಂತಹದು, ಪ್ರಾಣಿಗಳಲ್ಲಿ ದೊಡ್ಡದು ಆನೆ. ಆನೆಗಳಿಗೆಲ್ಲ ಆನೆಯಂತಿರುವ ಈ ಪ್ರಪಂಚವೇ ಹೆದರಿಸುತ್ತಿದೆ. ಈ ಆನೆಯ ಕೈಗೆ ಸಿಕ್ಕಿ ಹೊಡೆದಾಡುತ್ತಿದ್ದೇನೆ. ನನ್ನ ಶರೀರದ ಎಲ್ಲ ಭಾಗಗಳೂ ಪುಡಿ ಪುಡಿಯಾಗಿವೆ. ಹೇಗೆ ಶಕ್ತಿ ಹೋಗುತ್ತಿದೆ ಎಂಬುದೇ ತಿಳಿಯುತ್ತಿಲ್ಲ. ನನಗೆ, ತರಹ ತರಹದ ಶಕ್ತಿ ಯುಕ್ತಿ ಎಲ್ಲ ಹೋಗಿವೆ. ಪ್ರಾಣಗಳು ಬೇರೆ ಶರೀರದಿಂದ ಹೋಗಲು ಸಿದ್ಧವಾಗುತ್ತಿವೆ. ಈ ಪ್ರಪಂಚದೊಂದಿಗೆ ನಾನು ಅಂಟಿಕೊಂಡು ಸೇರಿ ಹೋಗಿದ್ದೀನೆ. ಪ್ರತಿ ವಸ್ತುವೂ ನನ್ನದೇ ಆಗಿ ಹೋಗಿದೆ. ಇವನ್ನ ಬಿಟ್ಟು ಹೊಗಬೇಕಲ್ಲ ಎಂಬ ಹೆದರಿಕೆಯು ಬೆಳೆಯುತ್ತಿದೆ. ಇಂತಹ ದುಃಖದಲ್ಲಿ ಹೆದರಿಕೆಯಲ್ಲಿರುವ ನನ್ನನ್ನ ಕೈ ಕೊಟ್ಟು ಉದ್ಧಾರ ಮಾಡು. ನಿನ್ನ ಬಿಟ್ಟರೆ ಯಾರಿದ್ದಾರೆ ?

ಅಂಧಸ್ಯ ಮೇ ಹೃತವಿವೇಕ ಮಹಾಧನಸ್ಯ
ಚೋರೈಃ ಪ್ರಭೋ ಬಲಿಭಿರಿಂದ್ರಿಯನಾಮಧೇಯೈಃ ।
ಮೋಹಾಂಧಕಾರಕುಹರೇ ವಿನಿಪಾತಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥೧೧॥

ಅಂಧಸ್ಯ - ಕುರುಡನಾದವನು, ಇಂತಹವನನ್ನು, ಮೇ - ನನ್ನ, ಹೃತ ವಿವೇಕ - ಇದು ಸರಿ, ಇದು ತಪ್ಪು ಎಂಬುದನ್ನು ನಿರ್ಧರಿಸುವ ಶಕ್ತಿಯನ್ನು ಕಳೆದುಕೊಂಡಿರುವ, ಮಹಾಧನಸ್ಯ - ಉತ್ತಮವಾದ ಧನವನ್ನು (ಕಳೆದುಕೊಂಡವನ), ಚೋರೈಃ - ಕಳ್ಳರಿಂದ (ದರೋಡೆಕಾರರಿಂದ), ಪ್ರಭೋ - ದೇವರೇ, ಬಲಿಭಿಃ - ಬಲಶಾಲಿಯಾದ,

ಇಂದ್ರಿಯನಾಮಧೇಯ್ಯೆಃ - ಇಂದ್ರಿಯಗಳೆಂಬ ಶರೀರದ ಭಾಗಗಳಿಂದ, ಮೋಹ - ಭ್ರಮೆ, ಮಾಯೆ ಎಂಬ, ಅಂಧಕಾರ - ಕತ್ತಲಲ್ಲಿ, ಅಜ್ಞಾನದಲ್ಲಿ, ಕುಹರೇ - ಗುಹೆಯಲ್ಲಿ, ವಿನಿಪಾತಿತಸ್ಯ - ಬಿದ್ದು ಹೋಗಿರುವ, ಮುಳುಗಿ ಹೋಗಿರುವ, ಲಕ್ಷ್ಮೀ ನೃಸಿಂಹ ಮಮ ದೇಹಿ ಕರಾವಲಂಬಂ.

ಲಕ್ಷ್ಮೀ ನರಸಿಂಹನೇ, ಪರಮಾತ್ಮನೇ, ನನ್ನಲ್ಲಿ ಏನೇನೋ ಧನ ಸಂಪತ್ತು ಇದ್ದವು. ಇವು ನನ್ನಲ್ಲಿಯೇ ಇದ್ದವು. ಶರೀರದಲ್ಲಿರುವ ಅಂಗಾಂಗಗಳು, ಇಂದ್ರಿಯಗಳು, ಕೆಲಸ ಮಾಡತಕ್ಕವುಗಳು ಮತ್ತು ಜ್ಞಾನ ಕೊಡತಕ್ಕವುಗಳು ಎಲ್ಲಾ ಇದ್ದವು.

ಒಂದು ಕಾಲದಲ್ಲಿ ಇವು ನನಗೆ ಇದು ಸರಿ, ಇದು ತಪ್ಪು, ಇದನ್ನು ಮಾಡಬೇಕು ಇದನ್ನು ಮಾಡಬಾರದು ಎಂಬ ನಿರ್ಧಾರಕ್ಕೆ ಬರಲು ಸಹಾಯವಾಗುತ್ತಿದ್ದವು. ಈ ಪ್ರಪಂಚಕ್ಕೆ ಬಂದ ಮೇಲೆ ನಾನು, ನನ್ನದು, ನನಗೆ ಬೇಕು, ಎನ್ನುವ ಭಾವನೆ ಸಿಕ್ಕಿದ ಹಾಗೆ ಹೆಚ್ಚಾಯಿತು. ಬರುಬರುತ್ತ ಈ ವಿವೇಚನಾಶಕ್ತಿಯೇ ಕಳೆದುಹೋಯಿತು. ನನ್ನ ಮುಖ್ಯವಾದ ಸಂಪತ್ತು ಹೋಯಿತು. ಈ ಇಂದ್ರಿಯಗಳೆಂಬ ಕಳ್ಳರು ಬಂದು ಪ್ರಪಂಚದಲ್ಲಿ ಸೇರಿ ಹೋಗಿ ನನ್ನ ಸಂಪತ್ತನ್ನು ತೆಗೆದು ಕೊಂಡು ಹೋದರು. ಈಗ ನಾನು ವಿವೇಕವಿಲ್ಲದೆ ಕುರುಡನಾಗಿದ್ದೇನೆ. ಈ ಮೋಹ, ಮಾಯೆ ಎಂಬ ಕತ್ತಲಲ್ಲಿ ಸಿಕ್ಕಿ ಕೊಂಡಿರುತ್ತೇನೆ. ನಿನ್ನ ಬಿಟ್ಟರೆ ನನಗೆ ಯಾರು ಇದ್ದಾರೆ. ಇದೊಂದು ವಿವೇಕವಾದರೂ ಉಳಿಯುತ್ತಿಲ್ಲ. ಲಕ್ಷ್ಮೀನರಸಿಂಹ ನನ್ನ ಕೂಗನ್ನು ಕೇಳಿ ನನ್ನನ್ನು ಉದ್ಧರಿಸುತ್ತೀಯೋ ಇಲ್ಲವೋ ಏನೋ ಯಾರಿಗೆ ಗೊತ್ತು. ಪರಮೇಶ್ವರ, ನನ್ನನ್ನ ಕಾಪಾಡು. ಈ ಸಂಸಾರ ಗೊಂದಲದಿಂದ ಭವ ಬಂಧನದಿಂದ ಪಾರು ಮಾಡು. ನನ್ನ ಕೈ ಬಿಡಬೇಡ, ಹೇ ನರಸಿಂಹ ಸ್ವಾಮಿ, ಕೈ ಬಿಡಬೇಡ. ಯಾವ ರೀತಿ ನಿನ್ನ ಬೇಡಲಿ, ಎಷ್ಟು ಕಾಲ ಬೇಡಲಿ, ಹೇಗೆ ಬೇಡಲಿ, ಇದನ್ನು ನೀನೇ ದಯಪಾಲಿಸು.....

ಲಕ್ಷ್ಮೀಪತೇ ಕಮಲನಾಭ ಸುರೇಶವಿಷ್ಣೋ
ವೈಕುಂಠ ಕೃಷ್ಣ ಮಧುಸೂದನ ಪುಷ್ಕರಾಕ್ಷ ।
ಬ್ರಹ್ಮಣ್ಯ ಕೇಶವ ಜನಾರ್ದನ ವಾಸುದೇವ
ದೇವೇಶ ದೇಹಿ ಕೃಪಣಸ್ಯ ಕರಾವಲಂಬಮ್ ॥೧೨॥

ಲಕ್ಷ್ಮೀಪತೇ - ಲಕ್ಷ್ಮೀ ದೇವಿಯ ಪತಿಯಾದ ಮಹಾವಿಷ್ಣುವೇ, ಕಮಲನಾಭ - ಹೊಕ್ಕಳಲ್ಲಿ ಕಮಲವುಳ್ಳ ಶ್ರೀ ಮಹಾವಿಷ್ಣುವೇ, ಸುರೇಶ - ದೇವತೆಗಳಿಗೆಲ್ಲ ಒಡೆಯನಾದ ವಿಷ್ಣುವೇ, ವಿಷ್ಣು - ಪರಮಾತ್ಮನೇ, ವೈಕುಂಠ - ವೈಕುಂಠದಲ್ಲಿರುವ ಶ್ರೀ ಮನ್ನಾರಾಯಣನೇ, ಕೃಷ್ಣ - ಹೇ ಕೃಷ್ಣ ಪರಮಾತ್ಮನೇ, ಮಧುಸೂಧನ - ಮಧುವನ್ನು ಕೊಂದ ಪರಮೇಶ್ವರನೇ, ಪುಷ್ಕರಾಕ್ಷ - ಕಮಲದಂತಹ ಕಣ್ಣುಳ್ಳವನೇ, ಬ್ರಹ್ಮಣ್ಯ - ಬ್ರಹ್ಮನ ಪಿತನಾದ ಮಹಾವಿಷ್ಣುವೇ,

ಕೇಶವ - ವಿಷ್ಣುವೇ ಇಂದ್ರಿಯಗಳ ಒಡೆಯನೇ, ಜನಾರ್ದನ - ಜನಾರ್ದನನೇ, ವಾಸುದೇವ - ವಸುದೇವನ ಮಗನಾದ ವಾಸುದೇವನೇ, ದೇವೇಶ - ದೇವತೆಗಳ ಒಡೆಯನೇ, ದೇಹಿ - ಕೊಡು, ಕೃಪಣಸ್ಯ - ಅನಾಥ, ದುರ್ಬಲ, ಸಹಾಯವಿಲ್ಲದ ಅವಿವೇಕಿಯಾದ ಬುದ್ಧಿಯಿಲ್ಲದ ನೀಚನಾದ ದುಷ್ಟನಾದ (ನನಗೆ), ಕರಾವಲಂಬಂ - ಹಿಡಿದು ಕೊಳ್ಳಲು ಆಸರೆ ಹೊಂದಲು ನಿನ್ನ ಕೈಗಳನ್ನು,

ಪರಮೇಶ್ವರ, ದಯಾಳೋ ನಾನು ಯಾರು ? ನನಗೆ ವಿವೇಕವೇ ಇಲ್ಲ. ಬಲವೇ ಇಲ್ಲ. ಸಂಸಾರದಲ್ಲಿ ಸಿಕ್ಕಿ ತೊಳಲಿ ನೀಚನಾಗಿದ್ದೇನೆ. ಬುದ್ಧಿಯಿಲ್ಲ, ವಿವೇಚನೆಯೇ ಇಲ್ಲ. ಅಧಮರಲ್ಲಿ ಕೊನೆಯವನು, ಯಾವ ರೀತಿ ನೋಡಿದರೂ ನನಗಿಂತ ಕೆಳಮಟ್ಟದವರೇ ಇಲ್ಲ. ನಾನೇ ಎಲ್ಲ ರೀತಿಯಲ್ಲಿಯೂ ಉಪಯೋಗಕ್ಕೆ ಬಾರದವನು. ನನಗಿಂತ ಕೆಟ್ಟವರು ಇಲ್ಲ. ಕ್ಷೀಣ ಸ್ಥಿತಿಯವರೂ ಇಲ್ಲ, ಕೃಪಣರೂ ಇಲ್ಲ. ಇಂಥ ನಾನು ಬಡವ. ಎಲ್ಲ ಇದ್ದ ಆಸ್ತಿಗಳನ್ನು ಕಳೆದುಕೊಂಡು ಈಗ ಕ್ಷೀಣ ಸ್ಥಿತಿಯಲ್ಲಿದ್ದೇನೆ, ಕತ್ತಲಲ್ಲಿ ಬಿದ್ದಿದ್ದೇನೆ. ನಿನ್ನ ಏನೆಂದು ಕರೆಯಲಿ, ಏನೆಂದು ಕರೆದರೆ ನನ್ನ ಕೂಗು ನಿನ್ನನ್ನು ಮುಟ್ಟುತ್ತದೆ. ತಿಳಿಯದೆ ಬಂದ ಹಾಗೆ ನಿನ್ನ ಕರೆಯುತ್ತಿದ್ದೇನೆ. ಅದು ಸರಿಯೋ ತಪ್ಪೋ! ನಿನಗೆ ಸೇರುತ್ತೋ ಇಲ್ಲವೊ! ಗೊತ್ತಿಲ್ಲ. ನನಗೆ ಬೇರೆ ಏನೂ ತಿಳಿಯದಿದ್ದರಿಂದ ನಾನು ಮಾಡುವುದು ಹೀಗೆಯೇ, ಹೀಗೆಯೇ!

ನೀನು ಲಕ್ಷ್ಮೀಪತೇ, ಹೇ ಲಕ್ಷ್ಮಿದೇವಿಯ ಪತಿಯಾದ ಮಹಾವಿಷ್ಣುವೇ, ನನ್ನ ಕಾಪಾಡು. ಬ್ರಹ್ಮನನ್ನ ನಾಭಿಕಮಲದಲ್ಲಿ ಇಟ್ಟಿರುವ ಮಹಾವಿಷ್ಣುವೇ, ನನ್ನ ಕಡೆ ನೋಡು. ದೇವತೆಗಳ ಒಡೆಯನಾದ ನಾರಾಯಣನೇ ಕಾಪಾಡು, ಮಹಾವಿಷ್ಣುವೇ ನನ್ನ ನೋಡು.

ವೈಕುಂಠದಲ್ಲಿ ಕ್ಷೀರಸಾಗರದಲ್ಲಿರುವ ನಾರಾಯಣನೇ ನನ್ನ ಕೂಗು ಕೇಳುವುದೇ ನಿನಗೇ!

ಕೃಷ್ಣ ಪರಮಾತ್ಮನೇ ನೀನೆಲ್ಲಿರುವೇ., ನನಗೆ ತೋರುವುದೇ ಇಲ್ಲವಲ್ಲ. ಮಧುವೆಂಬ ರಾಕ್ಷಸನ ಪುಣ್ಯವೆಷ್ಟು ನೀನೇ ಹೋಗಿ ಅವನನ್ನು ಸಂಹರಿಸಿದೆಯಲ್ಲ. ನಿನಗೆ ಕಾಲವಿತ್ತೇ, ಅವಕಾಶವಿತ್ತೇ.

ಕಮಲದಂತೆ ಕಣ್ಣಿರುವ ನಾರಾಯಣನೇ ನನಗೇಕೆ ನೀನು ಕಾಣುತ್ತಿಲ್ಲ. ಎಲ್ಲಿದ್ದೀಯೇ ಬ್ರಹ್ಮನೇ ದೊಡ್ಡ ದೇವರು, ಪ್ರಪಂಚವನ್ನು ಮಾಡುವವನು, ಇಂತಹ ಸಂಸಾರ ಮಾಡುವವನು, ಅವನಿಗೆ ನೀನು ತಂದೆಯಂತೆ. ನೀನು ಹೇಗಿರಬೇಕು, ನೀನೆಷ್ಟು ಚತುರನಿರಬೇಕು, ನನ್ನನ್ನೇಕೆ ಹೀಗೆ ತೊಳಲಿಸುತ್ತಿರುವೇ, ಕೇಶವನೇ ಕಾಪಾಡು. ಜನಾರ್ದನನೇ ನನ್ನ ಕಡೆ ನೋಡು, ವಸುದೇವನ ಪುತ್ರನಾದ ವಾಸುದೇವನೇ, ನನ್ನ ನೋಡಿ ಕಾಪಾಡು. ದೇವತೆಗಳ ರಾಜನೇ ಬಾ, ನಿನ್ನ ಕೈಗಳಿಂದ ನನ್ನನ್ನ ಮೇಲೆತ್ತು, ಇಲ್ಲದಿದ್ದರೆ ನಿನ್ನ ಕೈಗಳನ್ನು ತೋರಿಸು, ನಾನು ಅದನ್ನ ಆಸರೆಯಾಗಿ ಹಿಡಿದು ಕೊಳ್ಳುವೇ.

ಸಂಸಾರಸಾಗರನಿಮಜ್ಜನಮುಹ್ಯಮಾನಂ
ದೀನಂ ವಿಲೋಕಯ ವಿಭೋ ಕರುಣಾನಿಧೇ ಮಾಂ ।
ಪ್ರಹ್ಲಾದಖೇದಪರಿಹಾರ ಕೃತಾವತಾರ
ಲಕ್ಷ್ಮಿನೃಸಿಂಹ ಮಮ ದೇಹಿ ಕರಾವಲಂಬಮ್ ॥೧೩॥

ಸಂಸಾರ - ಈ ಪ್ರಪಂಚವೆಂಬ, ಸಾಗರ - ಸಮುದ್ರದಲ್ಲಿ, ನಿಮಜ್ಜನ - ಮುಳುಗು ಹಾಕುವುದು, ಸ್ನಾನ ಮಾಡುವುದು ಇದರಲ್ಲಿ, ಮುಹ್ಯಮಾನಂ - ಎಚ್ಚರ ತಪ್ಪಿರುವ, ಅಡ್ಡದಾರಿ ಹಿಡಿದಿರುವ, ದೀನಂ - ದುಃಖದಲ್ಲಿರುವ / ಹೀನ ಸ್ಥಿತಿಯಲ್ಲಿರುವವನನ್ನು, ವಿಲೋಕಯ - ನೋಡು, ವಿಭೋ - ಸರ್ವವ್ಯಾಪಿಯಾದ, ಪರಮಾತ್ಮನೇ, ಕರುಣಾನಿಧೇ - ಕರುಣೆ, ದಯೆಯನ್ನು ಕೊಡತಕ್ಕವನೇ (ದಯಾಸಮುದ್ರನೇ), ಮಾಂ - ನನ್ನನ್ನು, ಪ್ರಹ್ಲಾದ - ಪ್ರಹ್ಲಾದನ, ಖೇದ - ದುಃಖಗಳನ್ನು, ಪರಿಹಾರ - ಹೋಗಲಾಡಿಸಲು, ಕೃತ - ಮಾಡಲ್ಪಟ್ಟ, ಅವತಾರ - ಅವತಾರವಾದ, ಲಕ್ಷ್ಮೀನರಸಿಂಹ - ಲಕ್ಷ್ಮೀ ನರಸಿಂಹ, ಮಮ - ನನಗೆ, ದೇಹಿ - ಕೊಡು, ಕರಾವಲಂಬಂ - ಕೈ, ಆಸರೆಯನ್ನು.

ಸರ್ವವ್ಯಾಪಿಯಾದ ಪರಮಾತ್ಮನೇ, ಈ ಸಂಸಾರ ಪ್ರಪಂಚವೆಂಬ ದೊಡ್ಡ ಸಮುದ್ರದಲ್ಲಿ ನಾನು ಬಿದ್ದಿದ್ದೇನೆ, ಕಷ್ಟ ಸುಖಗಳಲ್ಲಿ ಮುಳುಗಿ ಹೋಗಿದ್ದೇನೆ. ಹೀಗೆ ಇರುವಲ್ಲಿ ಯಾವ ರೀತಿ ನಾನು ಇದನ್ನು ಹೋಗಲಾಡಿಸಿಕೊಳ್ಳಬೇಕೋ ತೋರುತ್ತಿಲ್ಲ. ಅತಿ ಕ್ಷೀಣ ಸ್ಥಿತಿಯಲ್ಲಿರುತ್ತೇನೆ, ವಿವೇಕವೇ ಹೋಗಿ ದೀನ ಸ್ಥಿತಿಗೆ ಬಂದಿರುತ್ತೀನಿ. ಇಂತಹ ನನ್ನನ್ನು ಒಂದು ಸಾರಿಯಾದರೂ ನೋಡು, ನೀನು ಯಾವ ರೀತಿ ನೋಡಿದರೂ ಸರಿಯೇ, ಒಟ್ಟಿನಲ್ಲಿ ನೋಡು. ನೀನು ದಯೆಯ ಸಮುದ್ರ, ಅಷ್ಟು ದೊಡ್ಡ ಸಮುದ್ರದಲ್ಲಿ ಒಂದು ತೊಟ್ಟು ನೀರು (ದಯೆ, ಕರುಣೆ) ನನ್ನ ಮೇಲೆ ಅಥವಾ ನನ್ನ ಕಡೆಗಾದರೂ ಬಂದರೆ ನಾನು ಎಷ್ಟೋ ಪುಣ್ಯವಂತ. ಪ್ರಹ್ಲಾದನ ದುಃಖಗಳನ್ನು ಹೋಗಲಾಡಿಸಲು ನೀನು ದೊಡ್ಡ ಅವತಾರ ಮಾಡಿದೆ. ನನಗಾಗಿ ನೀನು ಅವತರಿಸಬೇಕಾಗಿಲ್ಲ, ಯಾವ ರೀತಿ ನೀನು ನನ್ನ ಉದ್ಧರಿಸಿದರೂ ಸರಿಯೇ, ನನಗೆ ಒಂದು ಸಾರಿಯಾದರೂ ಈ ಪ್ರಪಂಚದಿಂದ ಬಿಡುಗಡೆ ಮಾಡು. ಈ ಪಾಪಗಳು ಹೊರಟುಹೋಗಲಿ, ಹೇ ದಯಾನಿಧೇ, ಕರುಣಾಸಾಗರನೇ, ಕಾಪಾಡು. ಎಲ್ಲಿರುವೆ, ಏಕೆ ತಡಮಾಡುತ್ತಿರುವೆ, ಬೇಗ ಬಾ!

ಬದ್ಧ್ವಾ ಗಲೇ ಯಮಭಟಾ ಬಹುತರ್ಜಯಂತಃ
ಕರ್ಷಂತಿ ಯತ್ರ ಭವಪಾಶಶತೈರ್ಯುತಂ ಮಾಂ ।
ಏಕಾಕಿನಂ ಪರವಶಂ ಚಕಿತಂ ದಯಾಳೋ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥೧೪॥

ಬದ್ಧಾ - ಕಟ್ಟಿಕೊಂಡು, ಗಲೇ - ಗಂಟಲಲ್ಲಿ, ಯಮಭಟಾಃ - ಯಮ ಭಟರುಗಳು, ಬಹು - ಅತಿಯಾಗಿ, ತರ್ಜಯಂತಃ - ಅಂಜಿಸುತ್ತಾ, ಹೆದರಿಸುತ್ತಾ, ನಿಂದಿಸುತ್ತಾ, ಬಯ್ಯುತ್ತಾ, ಕರ್ಷಂತಿ - ಎಳೆಯುತ್ತಿದ್ದಾರೆ, ಯತ್ರ - ಎಲ್ಲಿ, ಭವ - ಈ ಸಂಸಾರದಲ್ಲಿ, ಪಾಶ ಶತೈರ್ಯುತಂ - ನೂರಾರು ಸರಪಣಿಗಳಿಂದ ಕೂಡಿದ, ಏಕಾಕಿನಂ - ನನ್ನನ್ನು ಒಬ್ಬನನ್ನೇ ಮಾಡಿ, ಪರವಶಂ - ಬೇರೆಯವರ ಕೈಗೆ ಸಿಕ್ಕಿಕೊಂಡು ಇರುವ ನನ್ನನ್ನು, ಚಕಿತಂ - ನಡುಗುತ್ತಿರುವ, ಗಾಬರಿಗೊಂಡ, ಆಶ್ಚರ್ಯ ಹೊಂದಿದ, ದಯಾಳೋ - ದಯೆಯಿಂದ ಕೂಡಿದ, ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ.

ಹೇ ದಯಾವಂತನಾದ ನರಸಿಂಹ ಸ್ವಾಮಿಯೇ, ಈ ಸಂಸಾರದಲ್ಲಿ ಸಿಕ್ಕಿಕೊಂಡು ಮುಳುಗುತ್ತಿದ್ದೇನೆ. ಇದರಿಂದ ನೀನು ಬಿಡಿಸುವ ಬದಲು ಯಮ ಭಟರುಗಳು ಬಂದು ನನ್ನನ್ನು ಎಳೆಯುತ್ತಿದ್ದಾರೆ. ಅನೇಕ ಸರಪಣಿಗಳಿಂದ ನನ್ನ ಗಂಟಲು ಕಟ್ಟುವ ಹಾಗೆ ಮಾಡಿ ಎಳೆಯುತ್ತಿದ್ದಾರೆ. ನಿನ್ನನ್ನು ಕೂಗಲು ಸಹ ಆಗುತ್ತಿಲ್ಲ. ಇಷ್ಟು ದೊಡ್ಡ ಪ್ರಪಂಚ, ಜನ ಸಮೂಹ, ವಸ್ತುಗಳು ನನ್ನ ಸುತ್ತಲು ಇದ್ದರೂ ಇವರುಗಳ ಎಳೆತದಿಂದ ನಾನು ಒಂಟಿಯಾಗಿದ್ದೀನಿ. ಅಸಹಾಯಕನಾಗಿದ್ದೀನಿ. ಹೆದರಿಕೆಯಾಗುತ್ತಿದೆ, ನಡುಗುತ್ತಿದ್ದೇನೆ, ಏನೂ ತೋರುತ್ತಿಲ್ಲ. ದಯಾಮಯನಾದ ಲಕ್ಷ್ಮೀನರಸಿಂಹ ಸ್ವಾಮಿಯೇ, ನನ್ನನ್ನು ಕಾಪಾಡು, ನನ್ನನ್ನು ಉದ್ಧಾರ ಮಾಡು. ನಿನ್ನ ಬಿಟ್ಟರೆ ಯಾರೂ ಗತಿಯಿಲ್ಲಾ.

ಏಕೇನ ಚಕ್ರಮಪರೇಣ ಕರೇನ ಶಂಖಂ
ಅನ್ಯೇನ ಸಿಂಧುತನಯಾಮವಲಂಬ್ಯ ತಿಷ್ಠನ್ ।
ವಾಮೇತರೇಣ ವರದಾಭಯ ಪದ್ಮ ಚಿಹ್ನಂ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ||೧೫||

ಏಕೇನ - ಒಂದು ಕೈಯಲ್ಲಿ, ಚಕ್ರಂ - ಚಕ್ರವನ್ನು, ಅಪರೇಣ - ಇನ್ನೊಂದು ಕೈಯಲ್ಲಿ, ಶಂಖಂ - ಶಂಖವನ್ನು, ಅನ್ಯೇನ - ಮತ್ತೊಂದು ಕೈಯಲ್ಲಿ, ಸಿಂಧುತನಯಾಂ - ಸಮುದ್ರ ರಾಜನ ಮಗಳಾದ ಲಕ್ಷ್ಮೀದೇವಿಯನ್ನು, ಅವಲಂಬ್ಯ - ಆಧಾರವಾಗಿಟ್ಟುಕೊಂಡು, ತಿಷ್ಠನ್ - ನಿಂತಿರುವ, ವಾಮೇತರೇಣ - ಬಲದಲ್ಲಿರುವ ಇನ್ನೊಂದು ಕೈಯಲ್ಲಿ, ವರದಾಭಯ ಪದ್ಮ ಚಿಹ್ನಂ - ವರಗಳನ್ನು ಕೊಡಲು, ಹೆದರಿಕೆಯನ್ನು ಹೋಗಲಾಡಿಸುವ ಕಮಲದ ಗುರುತನ್ನು ತೋರಿಸುತ್ತ, (ಇರತಕ್ಕ), ಲಕ್ಷ್ಮೀ ನೃಸಿಂಹ ಮಮ ದೇಹಿ ಕರಾವಲಂಬಂ.

ಹೇ ಲಕ್ಷ್ಮೀನರಸಿಂಹ ಸ್ವಾಮಿಯೇ, ನನ್ನ ಸಂಕಟವನ್ನು ಹೋಗಲಾಡಿಸಲು ನೀನು ಮನಸ್ಸು ಮಾಡಿದರೆ ಏನು ಕಷ್ಟ. ಅವುಗಳನ್ನು ನಿವಾರಿಸಲು ಸಿದ್ಧನಾಗಿಯೆ ಇದ್ದೀಯೇ! ಒಂದು ಕೈಯಲ್ಲಿ ಚಕ್ರವನ್ನೂ, ಇನ್ನೊಂದು ಕೈಯಲ್ಲಿ ಶಂಖವನ್ನೂ ಮತ್ತೊಂದು ಕೈಯಲ್ಲಿ ಲಕ್ಷ್ಮಿಯನ್ನು ಹಿಡಿದುಕೊಂಡು, ನಾಲ್ಕನೇ ಕೈಯಲ್ಲಿ ವರವನ್ನು ಕೊಟ್ಟು ಭಯವನ್ನು

ಹೋಗಲಾಡಿಸುತ್ತೀನಿ ಎಂದು ಕಮಲದ ಗುರುತನ್ನು ತೋರಿಸುತ್ತಿದ್ದೀಯೆ, ಇದಕ್ಕಿಂತ ಹೆಚ್ಚು ತಯಾರಾಗಬೇಕಾದ್ದೇನಿದೆ. ನನ್ನ ಕಷ್ಟಗಳು ಏನು ಮಹಾ! ಪ್ರಪಂಚದ ಜೀವ ಕೋಟಿಗಳಿಗೇ ನೀ ಉದ್ಧಾರ ಮಾಡಲು ನಿಂತಿರುವ ನಿನಗೆ ನಾನು, ನನ್ನ ಪ್ರಾರ್ಥನೆ ಏನು ಮಹಾ! ನನ್ನ ಕೂಗು ಕೋಟ್ಯಾಂತರ ಕೂಗುಗಳಲ್ಲಿ ನಿನಗೆ ಹೇಗೆ ಮುಟ್ಟಬೇಕು. ನಾನು ಯಾವ ರೀತಿ ನಿನ್ನನ್ನು ಕರೆಯಬೇಕು, ಅದು ನಿನಗೇ ಗೊತ್ತು. ನೀನೇ ನನಗೆ ದಾರಿ ತೋರಿಸುತ್ತಿದ್ದೀಯೆ, ಇದರಲ್ಲಿ ನನಗೆ ಸಂಶಯವಿಲ್ಲ! ಹೇ ಲಕ್ಷ್ಮೀನರಸಿಂಹ, ನನ್ನನ್ನು ಉದ್ಧರಿಸು!

ಪ್ರಹ್ಲಾದ ನಾರದ ಪರಾಶರ ಪುಂಡರೀಕ
ವ್ಯಾಸಾದಿ ಭಾಗವತ ಪುಂಗವ ಹೃನ್ನಿವಾಸ ।
ಭಕ್ತಾನುರಕ್ತ ಪರಿಪಾಲನಪಾರಿಜಾತ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥೧೬॥

ಪ್ರಹ್ಲಾದ - ಹಿರಣ್ಯ ಕಶಿಪುವಿನ ಮಗ ಪ್ರಹ್ಲಾದ, ನಾರದ, ಪರಾಶರ, ಪುಂಡರೀಕ, ವ್ಯಾಸಾದಿ - ವ್ಯಾಸರೇ ಮೊದಲಾದ, ಭಾಗವತ - ಪರಮಾತ್ಮನ ಭಕ್ತರುಗಳು, ಪುಂಗವ - ಶ್ರೇಷ್ಠ, ಹೃನ್ನಿವಾಸ - ಹೃದಯದಲ್ಲಿರುವವನೇ, ಭಕ್ತಾನುರಕ್ತ - ಭಕ್ತರಲ್ಲಿ ಸೇರಿ ಹೋಗಿರುವ, ಪರಿಪಾಲನ - ಕಾಪಾಡುವುದರಲ್ಲಿ, ಪಾರಿಜಾತ - ಪಾರಿಜಾತದಂತಿರುವವವನೇ, ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ.

ಹೇ ಲಕ್ಷ್ಮೀನರಸಿಂಹ ಸ್ವಾಮಿಯೇ, ನೀನು ಭಕ್ತರ ಸುಖ ದುಃಖಗಳಲ್ಲಿ ಸೇರಿ ಹೋಗಿದ್ದೀಯೆ, ಭಕ್ತರ ಇಷ್ಟಗಳನ್ನು ಕೊಡತಕ್ಕ ಕಲ್ಪವೃಕ್ಷವಾಗಿರುವೆ. ಪ್ರಹ್ಲಾದ, ನಾರದ, ಪರಾಶರ, ಪುಂಡರೀಕ, ವ್ಯಾಸರೇ ಮೊದಲಾದ ಭಕ್ತರ ಸರಣಿಗೆ ಎಣೆಯೇ ಇಲ್ಲ. ಅಂತಹವರ ಹೃದಯದಲ್ಲಿ ವಾಸಮಾಡುತ್ತಿದ್ದೀಯೆ, ನನಗೆ ಆಸರೆಯನ್ನು ಕೊಡು.

ಲಕ್ಷ್ಮೀನೃಸಿಂಹ ಚರಣಾಬ್ಜ ಮಧುವ್ರತೇನ
ಸ್ತೋತ್ರಂ ಕೃತಂ ಶುಭಕರಂ ಭುವಿ ಶಂಕರೇಣ
ಯೇ ತತ್ಪಠಂತಿ ಮನುಜಾ ಹರಿಭಕ್ತಿಯುಕ್ತಾಃ
ತೇ ಯಾಂತಿ ತತ್ಪದಸರೋಜಮಖಂಡರೂಪಮ್ ॥೧೭॥

ಲಕ್ಷ್ಮೀನೃಸಿಂಹ - ಲಕ್ಷ್ಮೀನರಸಿಂಹ ಸ್ವಾಮಿಯೇ, ಚರಣಾಬ್ಜ - ಪಾದ ಸರೋವರದಲ್ಲಿ, ಮಧುವ್ರತೇನ - ಸಿಹಿಯಾದ ಸ್ಮರಣೆಯಿಂದ, ಒಂದು ವಿಧದ ವ್ರತ, ಸ್ತೋತ್ರಂ - ಸ್ತೋತ್ರವು, ಹೊಗಳಿಕೆಯ ಶ್ಲೋಕ ಸಮೂಹವು, ಕೃತಂ - ಮಾಡಲ್ಪಟ್ಟಿತು, ಶುಭಕರಂ - ಒಳ್ಳೆಯದನ್ನೇ

ಮಾಡತಕ್ಕವುಗಳು, ಭುವಿ - ಈ ಪ್ರಪಂಚದಲ್ಲಿ, ಶಂಕರೇಣ - ಶಂಕರಾಚಾರ್ಯರಿಂದ, ಯೇ ತತ್ - ಯಾರು ಇದನ್ನು, ಪಠಂತಿ - ಓದುತ್ತಾರೆಯೋ, ಮನುಜಾಃ - ಮನುಷ್ಯರುಗಳು, ಹರಿ ಭಕ್ತಿಯುಕ್ತಾಃ - ವಿಷ್ಣುವಿನಲ್ಲಿ ಭಕ್ತಿಯಿಂದ ಕೂಡಿದವರಾಗಿ, ತೇ - ಅವರುಗಳು, ಯಾಂತಿ - ಹೋಗುತ್ತಾರೆ. ತತ್ಪದ ಸರೋಜಂ - ಆ ಸ್ಥಾನವನ್ನು ಸರೋವರದಲ್ಲಿ ಹುಟ್ಟಿದ ಕಮಲವನ್ನು, ಅಖಂಡ - ಒಂದೇ ಒಂದಾದ, ಬೇರೆ ಬೇರೆ ಮಾಡಲಾಗದ, ರೂಪಂ - ರೂಪವನ್ನು,

ಶಂಕರಾಚಾರ್ಯರಿಂದ ಈ ಸ್ತೋತ್ರ ಸಮೂಹವು ಮಾಡಲ್ಪಟ್ಟಿತು, ಲಕ್ಷ್ಮೀನರಸಿಂಹ ಸ್ವಾಮಿಯ ಪಾದ ಪದ್ಮಗಳಲ್ಲಿ ಸಿಹಿಯಾದ ರೀತಿಯಲ್ಲಿ ಸಂತೋಷವನ್ನು ಈ ಸ್ತೋತ್ರಗಳು ಕೊಡುತ್ತವೆ. ಈ ಪ್ರಪಂಚದಲ್ಲಿ ಬೇಕಾದ ಎಲ್ಲ ಒಳ್ಳೆಯನ್ನು ಕೊಡುತ್ತವೆ.

ಮನುಷ್ಯರು ವಿಷ್ಣುವಿನಲ್ಲಿ ಭಕ್ತಿಯಿಂದ ಈ ಶ್ಲೋಕಗಳನ್ನು ಓದಬೇಕು, ಯಾರು ಹಾಗೆ ಓದುತ್ತಾರೋ ಅವರುಗಳು ಪರಮಾತ್ಮನನ್ನೇ ಸೇರುತ್ತಾರೆ. ನಿರ್ಮಲವಾದ ಕಮಲದಲ್ಲಿ ಇರತಕ್ಕ ಒಂದೇ ಆಗಿರುವ ಅಖಂಡವಾದ ಪರಮಾತ್ಮನ ರೂಪವನ್ನು ಸೇರುತ್ತಾರೆ.

ಹರಿಃ ಓಂ ತತ್ ಸತ್

ಶ್ರೀ ಕೃಷ್ಣಾರ್ಪಣಮಸ್ತು

---

# ಅಥ ಶ್ರೀ ನೃಸಿಂಹಕವಚ ಪ್ರಾರಂಭಃ

ನೃಸಿಂಹ ಕವಚಂ ವಕ್ಷ್ಯೇ ಪ್ರಹ್ಲಾದೇನೋದಿತಂ ಪುರಾ ।
ಸರ್ವರಕ್ಷಾಕರಂ ಪುಣ್ಯಂ ಸರ್ವೋಪದ್ರವನಾಶನಮ್ ॥೧॥

ಸರ್ವಸಂಪತ್ಕರಂ ಚೈವ ಸ್ವರ್ಗಮೋಕ್ಷಪ್ರದಾಯಕಮ್ ।
ಧ್ಯಾತ್ವಾ ನೃಸಿಂಹ ದೇವೇಶಂ ಹೇಮಸಿಂಹಾಸನಸ್ಥಿತಮ್ ॥೨॥

ದಿವ್ಯತಾಸ್ಯಂ ತ್ರಿನಯನಂ ಶರದಿಂದುಸಮಪ್ರಭಮ್ ।
ಲಕ್ಷ್ಮ್ಯಾಲಿಂಗಿತವಾಮಾಂಗಂ ವಿಭೂತಿಭಿರುಪಾಶ್ರಿತಮ್ ॥೩॥

ಚತುರ್ಭುಜಂ ಕೋಮಲಾಂಗಂ ಸ್ವರ್ಣಕುಂಡಲಶೋಭಿತಮ್ ।
ಉರೋಜಶೋಭಿತೋರಸ್ಕಂ ರತ್ನಕೇಯೂರಮುದ್ರಿತಮ್ ॥೪॥

ತಪ್ತಕಾಂಚನಸಂಕಾಶಂ ಪೀತನಿರ್ಮಲವಾಸಸಮ್ ।
ಇಂದ್ರಾದಿ ಸುರಮೌಳಿಸ್ಥಸ್ಫುರನ್ಮಾಣಿಕ್ಯದೀಪ್ತಿಭಿಃ ||೫||

ವಿರಾಜಿತ ಪದದ್ವಂದ್ವಂ ಶಂಖಚಕ್ರಾದಿಹೇತಿಭಿಃ ।
ಗುರುತ್ಮತಾ ಚ ವಿನಯತಾ ಸ್ತೂಯಮಾನಂ ಮುದಾನ್ವಿತಮ್ ||೬||

ಸ್ವಹೃತ್ಕಮಲಸಂವಾಸಂ ಕೃತ್ವಾ ತು ಕವಚಂ ಪಠೇತ್ ।
ನೃಸಿಂಹೋ ಮೇ ಶಿರಃಪಾತು ಲೋಕರಕ್ಷಾರ್ಥಸಂಭವಃ ||೭||

ಸರ್ವಗೋಽಪಿ ಸ್ತಂಭವಾಸಃ ಫಾಲಂ ಮೇ ರಕ್ಷತು ಧ್ವನಿಮ್ ।
ನೃಸಿಂಹೋ ಮೇ ದೃಶೌ ಪಾತು ಸೋಮಸೂರ್ಯಾಗ್ನಿಲೋಚನಃ ||೮||

ಸ್ಮೃತಂ ಮೇ ಪಾತು ನೃಹರಿಃ ಮುನಿವರ್ಯ ಸ್ತುತಿಪ್ರಿಯಃ ।
ನಾಸಾಂ ಮೇ ಸಿಂಹನಾದಸ್ತು ಮುಖಂ ಲಕ್ಷ್ಮಿಮುಖಪ್ರಿಯಃ ||೯||

ಸರ್ವವಿದ್ಯಾಧಿಪಃ ಪಾತು ನೃಸಿಂಹೋ ರಸನಾಂ ಮಮ ।
ವಕ್ತ್ರಂ ಪಾಂತ್ವಿಂದುವದನ ಸದಾ ಪ್ರಹ್ಲಾದ ವಂದಿತಃ ||೧೦||

ನೃಸಿಂಹಃ ಪಾತು ಮೇ ಕಂಠಂ ಸ್ಕಂಧೌ ಭೂಭರಣಾಂತಕೃತ್ ।
ದಿವ್ಯಾಸ್ತ್ರಶೋಭಿತಭುಜೋ ನೃಸಿಂಹಃ ಪಾತು ಮೇ ಭುಜೌ ||೧೧||

ಕರೌ ಮೇ ದೇವವರದೋ ನೃಸಿಂಹಃ ಪಾತು ಸರ್ವತಃ ।
ಹೃದಯಂ ಯೋಗಿಸಾಧ್ಯಶ್ಚ ನಿವಾಸಂ ಪಾತು ಮೇ ಹರಿಃ ||೧೨||

ಮಧ್ಯಂ ಪಾತು ಹಿರಣ್ಯಾಕ್ಷವಕ್ಷಃ ಕುಕ್ಷಿವಿದಾರಣಃ ।
ನಾಭಿಂ ಮೇ ಪಾತು ನೃಹರಿಃ ಸ್ವನಾಭಬ್ರಹ್ಮಸಂಸ್ತುತಃ ||೧೩||

ಬ್ರಹ್ಮಾಂಡಕೋಟಿಯಃ ಕಟ್ಯಾಂ ಯಸ್ಯಾಸೌ ಪಾತು ಮೇ ಕಟಿಮ್ ।
ಗುಹ್ಯಂ ಮೇ ಪಾತು ಗುಹ್ಯಾನಾಂ ಮಂತ್ರಾಣಾಂ ಗುಹ್ಯರೂಪದೃಕ್ ||೧೪||

ಊರೂ ಮನೋಭವಃ ಪಾತು ಜಾನುನೀ ನರರೂಪಧೃತ್ ।
ಜಂಘೇ ಪಾತು ಧರಾಭಾರಹರ್ತಾ ಯೋಽಸೌ ನೃಕೇಸರೀ ||೧೫||

ಸುರರಾಜ್ಯಪ್ರದಃ ಪಾತು ಪಾದೌ ಮೇ ನೃಹರೀಶ್ವರಃ ।
ಸಹಸ್ರಶೀರ್ಷಾ ಪುರುಷಃ ಪಾತು ಮೇ ಸರ್ವಶಸ್ತನುಮ್ ||೧೬||

ಮಹೋಗ್ರಃ ಪೂರ್ವತಃ ಪಾತು ಮಹಾವೀರಾಗ್ರಜೋಽಗ್ನಿತಃ ।
ಮಹಾವಿಷ್ಣುರ್ದಕ್ಷಿಣೇ ಪಾತು ಮಹಾಜ್ವಾಲಸ್ತು ನೈಋತೌ ||೧೭||

ಪಶ್ಚಿಮೆ ಪಾತು ಸರ್ವೇಶೋ ದಿಶಿ ಮೇ ಸರ್ವತೋಮುಖಃ ।
ನೃಸಿಂಹಃ ಪಾತು ವಾಯವ್ಯಾಂ ಸೌಮ್ಯಾಂ ಭೂಷಣವಿಗ್ರಹಃ ||೧೮||

ಈಶಾನ್ಯಾಂ ಪಾತು ಭದ್ರೋ ಮೇ ಸರ್ವಮಂಗಳದಾಯಕಃ ।
ಸಂಸಾರಭಯದಃ ಪಾತು ಮೃತ್ಯೋರ್ಮೃತ್ಯುರ್ನೃಕೇಸರೀ ||೧೯||

ಇದಂ ನೃಸಿಂಹ ಕವಚಂ ಪ್ರಹ್ಲಾದಮುಖಮಂಡಿತಮ್ ।
ಭಕ್ತಿಮಾನ್ ಯಃ ಪಠೇನ್ನಿತ್ಯಂ ಸರ್ವಪಾಪೈಃ ಪ್ರಮುಚ್ಯತೇ ||೨೦||

ಪುತ್ರವಾನ್ ಧನವಾನ್ ಲೋಕೇ ದೀರ್ಘಾಯುರುಪಜಾಯತೇ ।
ಯಂ ಯಂ ಕಾಮಯತೇ ಕಾಮಂ ತಂ ತಂ ಪ್ರಾಪ್ನೋತ್ಯಸಂಶಯಮ್||೨೧||

ಸರ್ವತ್ರ ಜಯಮಾಪ್ನೋತಿ ಸರ್ವತ್ರ ವಿಜಯಾ ಭವೇತ್ ।
ಭೂಮ್ಯಂತರಿಕ್ಷದಿವ್ಯಾನಾಂ ಗ್ರಹಾಣಾಂ ವಿನಿವಾರಣಮ್ ||೨೨||

ವೃಶ್ಚಿಕೋರಗಸಂಭೂತವಿಷಾಪಹರಣಂ ಪರಮ್ ।
ಬ್ರಹ್ಮರಾಕ್ಷಸ ಯಕ್ಷಾಣಾಂ ದೂರೋತ್ಸಾರಣ ಕಾರಣಮ್ ||೨೩||

ಭೂರ್ಜೇ ವಾ ತಾಳಪತ್ರೇ ವಾ ಕವಚಂ ಲಿಖಿತಂ ಶುಭಮ್ ।
ಕರಮೂಲೇ ಧೃತಂ ಯೇನ ಸಿಧ್ಯೇಯುಃ ಕರ್ಮಸಿದ್ಧಯಃ ||೨೪||

ದೇವಾಸುರ ಮನುಷ್ಯೇಷು ಸ್ವಂ ಸ್ವಮೇವ ಜಯಂ ಲಭೇತ್ ।
ಏಕಸಂಧ್ಯಂ ತ್ರಿಸಂಧ್ಯಂ ವಾ ಯಃ ಪಠೇನ್ನಿಯತೋ ನರಃ ||೨೫||

ಸರ್ವಮಂಗಳ ಮಾಂಗಲ್ಯಂ ಭುಕ್ತಿಂ ಮುಕ್ತಿಂ ಚ ವಿಂದತಿ ।
ದ್ವಾತ್ರಿಂಶತಿ ಸಹಸ್ರಾಣಿ ಪಠೇಚ್ಛುದ್ಧಾತ್ಮನಾಂ ನೃಣಾಮ್ ||೨೬||

ಕವಚಸ್ಯಾಸ್ಯ ಮಂತ್ರಸ್ಯ ಮಂತ್ರಸಿದ್ಧಿಃ ಪ್ರಜಾಯತೇ ।
ಅನೇನ ಮಂತ್ರರಾಜೇನ ಕೃತ್ವಾ ಭಸ್ಮಾಭಿಮಂತ್ರಣಮ್ ||೨೭||

ತಿಲಕಂ ವಿನ್ಯಸೇದ್ಯಸ್ತು ತಸ್ಯ ಗ್ರಹಭಯಂ ಹರೇತ್ ।
ತ್ರಿವಾರಂ ಜಪಮಾನಸ್ತು ದತ್ತಂ ವಾರ್ಯಭಿಮಂತ್ರ್ಯ ಚ ||೨೮||

ಪ್ರಾಶಯೋದ್ಯೋ ನರೋ ಮಂತ್ರಂ ನೃಸಿಂಹಧ್ಯಾನಮಾಚರೇತ್ ।
ತಸ್ಯ ರೋಗಾಃ ಪ್ರಣಶ್ಯಂತಿ ಯೇ ಚಸ್ಯುಃ ಕುಕ್ಷಿಸಂಭವಾಃ ॥೨೯॥

ಗರ್ಜನ್ತಂ ಗರ್ಜಯನ್ತಂ ನಿಜಭುಜಪಟಲಂ ಸ್ಫೋಟಯನ್ತಂ ಹಟನ್ತಂ ।
ರೂಪ್ಯನ್ತಂ ತಾಪಯನ್ತಂ ದಿವಿಭುವಿ ದಿತಿಜಂ ಕ್ಷೇಪಯನ್ತಂ ಕ್ಷಿಪನ್ತಂ ।
ಕ್ರನಂದನ್ತಂ ರೋಷಯನ್ತಂ ದಿಶಿ ದಿಶಿ ಸಂಹರನ್ತಂ ಭರನ್ತಂ ।
ವೀಕ್ಷನ್ತಂ ಪೂರ್ಣಯನ್ತಂ ಕರನಿಕರಶತೈರ್ದಿವ್ಯಸಿಂಹಂ ನಮಾಮಿ ॥೩೦॥

ಇತಿ ಬ್ರಹ್ಮಾಂಡ ಪುರಾಣೇ ಪ್ರಹ್ಲಾದೋಕ್ತಂ
ಶ್ರೀ ನೃಸಿಂಹ ಕವಚಂ ಸಂಪೂರ್ಣಂ

---

# ಋಣ ವಿಮೋಚನ
# ಶ್ರೀ ಲಕ್ಷ್ಮೀನೃಸಿಂಹ ಸ್ತೋತ್ರ

ದೇವತಾಕಾರ್ಯಸಿದ್ಧ್ಯರ್ಥಂ ಸಭಾಸ್ತಮ್ಭಸಮುದ್ಭವಮ್ ।
ಶ್ರೀ ನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ ॥ ೧

ಲಕ್ಷ್ಮ್ಯಾಲಿಂಗಿತವಾಮಾಙ್ಗಂ ಭಕ್ತಾನಾಂ ವರದಾಯಕಮ್ ।
ಶ್ರೀ ನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ ॥ ೨

ಅನ್ತ್ರಮಾಲಾಧರಂ ಶಙ್ಖಚಕ್ರಾಬ್ಜಾಯುಧಧಾರಿಣಮ್ ।
ಶ್ರೀ ನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ ॥ ೩

ಸ್ಮರಣಾತ್ಸರ್ವಪಾಪಘ್ನಂ ಕದ್ರೂಜವಿಷನಾಶನಮ್ ।
ಶ್ರೀ ನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ ॥ ೪

ಸಿಂಹನಾದೇನ ಮಹತಾ ದಿಗ್ದನ್ತಿ ಭಯನಾಶನಮ್ ।
ಶ್ರೀ ನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ ॥ ೫

ಪ್ರಹ್ಲಾದ ವರದಂ ಶ್ರೀಶಂ ದೈತ್ಯೇಶ್ವರ ವಿದಾರಣಮ್ ।
ಶ್ರೀ ನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ ॥ ೬

ಕ್ರೂರಗ್ರಹೈಃ ಪೀಡಿತಾನಾಂ ಭಕ್ತಾನಾಂ ವರದಾಯಕಮ್ ।
ಶ್ರೀ ನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ ॥ ೭

ವೇದವೇದಾಂತಯಜ್ಞೇಶಂ ಬ್ರಹ್ಮರುದ್ರಾದಿವಂದಿತಮ್ ।
ಶ್ರೀ ನೃಸಿಂಹಂ ಮಹಾವೀರಂ ನಮಾಮಿ ಋಣಮುಕ್ತಯೇ ॥ ೮

ಯ ಇದಂ ಪಠೇನ್ನಿತ್ಯಂ ಋಣಮೋಚನಸಂಜ್ಞಕಮ್ ।
ಅನೃಣೋ ಜಾಯತೇ ಸದ್ಯೋ ಧನಂ ಶೀಘ್ರಮವಾಪ್ನುಯಾತ್ ॥ ೯

ಬೆಳಿಗ್ಗೆ ಮತ್ತು ಸಂಜೆ ಈ ಶ್ಲೋಕಗಳನ್ನು ಭಕ್ತಿಯಿಂದ ಪಠಿಸಿದರೆ ಸಕಲ ವಿಧವಾದ ಋಣಬಾಧೆಗಳೂ ಪರಿಹಾರವಾಗಿ ಪರಮಾತ್ಮನಲ್ಲಿ ನಿಶ್ಚಲವಾದ ಜ್ಞಾನ-ಭಕ್ತಿ-ವೈರಾಗ್ಯಗಳು ಸುಲಭವಾಗಿ ಲಭಿಸುವುವು.

# ಶ್ರೀ ನರಸಿಂಹ ಹಂಸ ಗಾಯತ್ರಿ ಮಂತ್ರ

ಸಹಸ್ರನಾಮಾವಳಿಯ ಅನೇಕ ನಾಮಗಳ ವ್ಯಾಖ್ಯಾನಗಳಲ್ಲಿ ಬಂದಿರುವಂತೆ ಈ ದೇಹದಲ್ಲಿ ವಾಸಮಾಡಿ ಜಗತ್ತಿನೊಡನೆ ಸಂಪರ್ಕವಿಟ್ಟುಕೊಂಡು ಪರಮಾತ್ಮನ ಇಚ್ಛೆಯಂತೆ ಮತ್ತು ತಮ್ಮ ತಮ್ಮ ಕರ್ಮದಂತೆ ಕಾಲಚಕ್ರದಲ್ಲಿ ಮುಂದುವರಿಯುತ್ತಿರುವ ತೇಜಸ್ಸು, ಆತ್ಮ ಎಂಬ ವೇದಾಂತ ಭಾವದಲ್ಲಿ ಕರೆಯಲ್ಪಡುತ್ತಿದೆ. ಈ ತೇಜಸ್ಸು ಎಂಬ ಶಕ್ತಿಯೇ ಆತ್ಮ. ಇದು ಪರಮಾತ್ಮನಲ್ಲಿ ಸೇರಿದರೆ ಮೂಲವನ್ನು ಸೇರಿದಂತಾಗುತ್ತದೆ.

ಜಗತ್ತಿನಲ್ಲಿದ್ದೂ ಅದಕ್ಕೆ ಅಂಟಿಕೊಳ್ಳದೆ ಪರಮಾತ್ಮನನ್ನು ಸೇರಬೇಕಾದರೆ ಹಂತ ಹಂತದಲ್ಲಿ ಜೀವನ ಉದಾತ್ತ ಭಾವದಲ್ಲಿ ಮುಂದುವರಿಯಬೇಕು. ಇದಕ್ಕೆ ಪರಮಾತ್ಮನೊಡನೆ ಅನವರತ ಅವಿಚ್ಛಿನ್ನ ಸಂಪರ್ಕ ಇರಲೇಬೇಕು. ಇದಕ್ಕೆ ಅವನ ಬಗ್ಗೆ ಯಾವಾಗಲೂ ಚಿಂತನೆ ನಡೆಯಬೇಕು. ಇದಕ್ಕೆ ನಮ್ಮನ್ನು ನಡೆಸುವವನು ಬೇರೊಬ್ಬನಿದ್ದಾನೆಂದು ತಿಳಿವಳಿಕೆ ಬರಬೇಕು. ಈ ನಿಟ್ಟಿನಲ್ಲಿ ಕ್ರಮ ಕ್ರಮವಾಗಿ ಚಿಂತನೆ, ಪೂಜೆ, ಧ್ಯಾನ, ಜಪ, ಅಂತರ್ಮುಖ ಚಿಂತನೆ ನಡೆಸಬೇಕು. ಇದಕ್ಕಾಗಿ ಯಾವ ದೇವರ ರೂಪವನ್ನೇ ಆಗಲಿ ಮನ ಮೆಚ್ಚಿದ ರೂಪ, ರಕ್ತಗತವಾಗಿ ಬಂದ ರೂಪ, ಮೂಲ ಹಿಂದಿನವರು ನಡೆಸಿಕೊಂಡ ಬಂದ ಕುಲ ದೈವ, ಯಾವುದಾದರೂ ಸರಿ - ಆ ರೂಪದ ಚಿಂತನೆಯಲ್ಲಿ ಸುಲಭವಾಗಿ ಮುಳುಗಬಹುದು.

ಇದಕ್ಕೆ ಪ್ರತಿ ದೇವ / ದೇವತೆಗೂ ಒಂದು ಮಂತ್ರವಿರುತ್ತದೆ. ಅದರ ಧ್ಯಾನ, ಜಪ, ಚಿಂತನೆ ಆಳವಾಗಿ ನಡೆದರೆ ಪರಮಾತ್ಮನು ನಮ್ಮಲ್ಲಿ ಆವಿರ್ಭವಿಸುತ್ತಾನೆ ಅಥವಾ ಮಾಯೆಯ ಮತ್ತು ಅಜ್ಞಾನದ ತೆರೆ ಮರೆಯಾಗುತ್ತದೆ.

ಇದಕ್ಕಾಗಿ ಬಹಳ ಸುಲಭವಾದ ಮಂತ್ರವೆಂದರೆ ಆಯಾ ದೇವತೆಗೆ ಸಂಬಂಧ ಪಟ್ಟ ಗಾಯತ್ರಿ ಮಂತ್ರ.

ಶ್ರೀ ನರಸಿಂಹ ದೇವರಿಗೆ ಸಂಬಂಧಪಟ್ಟ ಗಾಯತ್ರಿ ಮಂತ್ರ ಹೀಗಿದೆ.

*"ವಜ್ರನಖಾಯ ವಿದ್ಮಹೇ ತೀಕ್ಷ್ಣದಂಷ್ಟ್ರಾಯ ಧೀಮಹಿ /*
*ತನ್ನೋ ನಾರಸಿಂಹಃ ಪ್ರಚೋದಯಾತ್ //"*

ಈ ಮಂತ್ರವನ್ನು ಸಂಸ್ಕೃತದಲ್ಲಿ ಹೀಗೆಯೂ ತಿಳಿಯಬಹುದು ಏನೆಂದರೆ -

*ವಜ್ರನಖಂ ಜಾನೀಮ / ತದರ್ಥಂ ತೀಕ್ಷ್ಣ ದಂಷ್ಟ್ರಂ ಧ್ಯಾಯೇಮ /*
*ತಸ್ಮಿನ್ ಧ್ಯಾನೇ ನಾರಸಿಂಹಃ ಅಸ್ಮಾನ್ ಪ್ರೇರಯತು //*

ಈಗ ಈ ಮಂತ್ರದ ಅರ್ಥವನ್ನು ತಿಳಿಯುವುದು ಸುಲಭ, ಏನೆಂದರೆ -

ವಜ್ರನಖನನ್ನು ತಿಳಿಯೋಣ, ಅದಕ್ಕಾಗಿ ತೀಕ್ಷ್ಣದಂಷ್ಟ್ರನನ್ನು ಧ್ಯಾನಿಸೋಣ, ಈ ಧ್ಯಾನದಲ್ಲಿ ನರಸಿಂಹ ಸ್ವಾಮಿಯು ನಮ್ಮನ್ನು ಪ್ರೇರೇಪಿಸಲಿ (ಹುರಿದುಂಬಿಸಲಿ, ಮಾರ್ಗದರ್ಶಕನಾಗಲಿ).

ಈ ಅರ್ಥವನ್ನು ತಿಳಿದು ಮತ್ತೆ ಮತ್ತೆ ಮನನ ಮಾಡುತ್ತಾ ಜಪವನ್ನು ಸಂಖ್ಯೆಯ ಗುರಿಯನ್ನು ಮೊದ ಮೊದಲು ಪ್ರಾರಂಭದಲ್ಲಿ ನಿರ್ದಿಷ್ಟಮಾಡಿಕೊಂಡು ನಡೆಸಿ ನಂತರ ಸಂಖ್ಯೆಯನ್ನು ಇಷ್ಟೇ ಇಂತಿಷ್ಟೇ ಎಂದು ಲೆಕ್ಕ ಮಾಡುವುದನ್ನು ಬಿಟ್ಟು ನಡೆಸುತ್ತಿದ್ದರೆ, ಆ ಪರಮಾತ್ಮನ ರೂಪ ಮನಸ್ಸಿನಲ್ಲಿ ನಿರಂತರ ನಿಲ್ಲುವುದರಲ್ಲಿ ಅನುಮಾನವಿಲ್ಲ. ಹಾಗೆ ನಿಂತಾಗ ಜಪವು ತಾನಾಗಿಯೇ ನಡೆಯುತ್ತಾ ಮನಸ್ಸು ಸುಲಭವಾಗಿ ಅವನಲ್ಲಿ ನಿಲ್ಲುತ್ತದೆ. ಮತ್ತು ಅಪರಿಮಿತ ಫಲವನ್ನು ಪಡೆಯಲು ಸಹಾಯವಾಗುತ್ತೆ. ಮೊದ ಮೊದಲು ಪ್ರಾಪಂಚಿಕ ಫಲಗಳಲ್ಲಿ ನೆಲಸಿದ್ದ ಮನಸ್ಸು, ಕಾಲ ಮುಂದುವರಿದಂತೆ ಪರಮಾತ್ಮನು ಇಚ್ಛಿಸಿದ್ದನ್ನು ಕೊಡಲಿ ಎಂದು ಅನ್ನಿಸುತ್ತದೆ. ನಂತರ ಅದೂ ಅವನ ಕೈಯಲ್ಲಿರುವುದರಿಂದ ಈ ಇಚ್ಛೆಯೂ ಬೇಡ ಎಂದು ಅನ್ನಿಸಿ ಅವನ ಪ್ರೀತ್ಯರ್ಥಕ್ಕಾಗಿ, ಲೋಕ ಕಲ್ಯಾಣಕ್ಕಾಗಿ ಎಂಬ ಭಾವನೆ ಮಾತ್ರ ಹುಟ್ಟುತ್ತದೆ. ಆದರೆ ಇದೂ ಸಹ ಕಾಮನೆಯೋ ಏನೋ ಅಂತ ಅನ್ನಿಸುತ್ತದೆ. ಆದರೆ ಈ ಕಾಮನೆಯು ಸಕಲ ಕಾಮನೆಗಳಿಗೂ ಮೀರಿನಿಂತು ಉನ್ನತ ಸ್ಥಾನವನ್ನು ಅಲಂಕರಿಸುತ್ತದೆ.

ಈಗ ಈ ಗಾಯತ್ರಿ ಮಂತ್ರದ ಅರ್ಥ ಮತ್ತು ಭಾವನೆಗಳನ್ನು ಯೋಚಿಸೋಣ.

ವಜ್ರನಖ - ಎಂದರೆ ವಜ್ರ - ವಜ್ರದಷ್ಟು ಕಠಿಣವಾದ ಶಕ್ತಿಯುತವಾದ ನಖ - ಎಂದರೆ ಉಗುರುಗಳುಳ್ಳವನು - ವಜ್ರನಖ.

ನರಸಿಂಹ ಸ್ವಾಮಿಯು ಹಿರಣ್ಯಕಶಿಪುವನ್ನು ಸಂಹರಿಸಲು ಅಂದರೆ ಅವನ ಒಳಗಿದ್ದ ತೇಜಶ್ಶಕ್ತಿಯನ್ನು ದೇಹದಿಂದ ಬೇರ್ಪಡಿಸುವಾಗ ಬ್ರಹ್ಮ ದೇವರು ಹಿರಣ್ಯಕಶಿಪುವಿಗೆ ಕೊಟ್ಟಿದ್ದ ವರವನ್ನು ಸುಳ್ಳು ಮಾಡದಿರುವುದಕ್ಕಾಗಿ ಉಗುರುಗಳನ್ನೇ ಆಯುಧವನ್ನಾಗಿ ಉಪಯೋಗಿಸಬೇಕಾಯಿತು. ಆದ ಕಾರಣ ಮನುಷ್ಯ ದೇಹದಲ್ಲಿದ್ದ ತನ್ನ ಕೈಗಳ ಉಗುರುಗಳನ್ನು ವಜ್ರದಷ್ಟು ಕಠಿಣವಾಗಿ ಅಂದರೆ ಶಕ್ತಿಯುತವಾಗಿ ಮಾಡಬೇಕಾಯಿತು. ಅಂತಹ ಶಕ್ತಿಯಿದ್ದದ್ದರಿಂದ ಹಿರಣ್ಯಕಶಿಪುವಿನ ದೈತ್ಯ ವಜ್ರ ಸಮಾನವಾದ ಶರೀರವನ್ನು ಬಗೆದು ಕರುಳಿನ ಮಾಲೆಯನ್ನು ಹಾಕಿಕೊಳ್ಳಲು ಸಾಧ್ಯವಾಯಿತು. ಆದರಿಂದ ಈ ನರಸಿಂಹನಲ್ಲಿ ವಜ್ರನಖವನ್ನೇ ಪ್ರಧಾನವಾಗಿಟ್ಟುಕೊಂಡು ಅವನನ್ನು ಜಪಿಸಿದರೆ ನಮ್ಮಲ್ಲಿರುವ ಸಂಸಾರ ಸಾಗರದ ವ್ಯಾಮೋಹವನ್ನು ಮತ್ತು ವಜ್ರದ ರೂಪದಲ್ಲಿರುವ ಅನೇಕ ಜನ್ಮಗಳ ಸಂಸ್ಕಾರಗಳನ್ನು ಆಮೂಲಾಗ್ರವಾಗಿ ಬಗೆಯಲು ಅವನ ವಜ್ರನಖಗಳೇ ಬೇಕು. ಆದರಿಂದ ಈ ನಾಮವೇ ಸಹಾಯವಾಗುತ್ತದೆ. ಆದರಿಂದ ಈ ವಜ್ರನಖನನ್ನು ಮೊದಲು ವಜ್ರನಖಗಳ ಮೇಲೆ ಮನಸ್ಸಿಟ್ಟು ಧ್ಯಾನದಲ್ಲಿ ಮುಂದುವರಿಯುವುದು ಮೇಲು

ಮತ್ತು ಸಮಂಜಸ. ಎಂದರೆ ವಜ್ರನಖಗಳನ್ನು ತಿಳಿದ ಮೇಲೆ ವಜ್ರನಖನನ್ನು ಮೊದಲು ತಿಳಿಯೋಣ. (ನರರೂಪದ ಶರೀರದ ಭಾಗ) - ''ವಜ್ರನಖಾಯ ವಿದ್ಮಹೇ''

ತೀಕ್ಷ್ಣದಂಷ್ಟ್ರ - ಚೂಪಾದ ಕೋರೆದಾಡೆಗಳು ಉಳ್ಳವನು. ಇದು ಸಿಂಹದ ಶರೀರದ ತಲೆಯ ಭಾಗ - ಅಥವಾ ನರಸಿಂಹನ ಸಿಂಹದ ತಲೆಯ ಭಾಗವನ್ನು ನಿರ್ದೇಶಿಸುತ್ತದೆ. ಸಿಂಹದ ಭಾಗವಾದ ಚೂಪಾದ ಕೋರೆದಾಡೆಗಳಿಂದ ನರಸಿಂಹನು ಸಿಂಹ ಸದೃಶವಾದ ಸ್ವಭಾವಕ್ಕೆ ತಕ್ಕಂತೆ ಕರುಳುಗಳನ್ನು ತನ್ನ ಕೊರಳಿಗೆ ಮಾಲೆಯಾಗಿ ಹಾಕಿಕೊಂಡನು. ರಕ್ತಪಾನ ಮಾಡಿದನು. ದೈತ್ಯನ ಶರೀರದ ಮಾಂಸಗಳನ್ನು ತೆಗೆದು ಸೇವಿಸಿದನು, ಎಂದ ಮೇಲೆ ಸಿಂಹದ ಬಾಯಿಯಲ್ಲಿದ್ದ ಹರಿತವಾದ ಕೋರೆದಾಡೆಗಳು ಕೆಲಸಕ್ಕೆ ಬಂದವು ಮತ್ತು ದೈತ್ಯ ಶರೀರದ ಭಾಗಗಳೂ ಸಹ ಈ ರೀತಿ ವಿನಿಯೋಗವಾದವು ಎಂದು ಭಾವಿಸಬಹುದು. ಕಣ ಕಣದಲ್ಲಿಯೂ ಪರಮಾತ್ಮನೇ ಇರುವುದರಿಂದ ಆ ಕಣಕ್ಕೆ ತಕ್ಕಂತೆ ತನ್ನ ರೂಪವನ್ನು ಮಾರ್ಪಡಿಸಕೊಂಡನು ಎಂದೂ ಸಹ ಭಾವಿಸಬಹುದು. ಎಂದ ಮೇಲೆ ಈಗ ನಾವು ಇಂತಹ ತೀಕ್ಷ್ಣದಂಷ್ಟ್ರನನ್ನು ಕುರಿತು ಯೋಚಿಸಬೇಕು. ಇಂತಹ ಕೆಲಸವನ್ನು ಮಾಡಿದ ಸಿಂಹದ ಮುಖವನ್ನು ಸೌಮ್ಯ ಭಾವದಿಂದ ನಾವು ಮನನ ಮಾಡಬೇಕು, ಧ್ಯಾನಿಸಬೇಕು. ಎಂದರೆ ಆ ನರಸಿಂಹನ ತೀಕ್ಷ್ಣ ದಂಷ್ಟ್ರವನ್ನೇ ಧ್ಯಾನ ಮಾಡಬೇಕು, ಧ್ಯಾನ ಮಾಡೋಣ - ''ತೀಕ್ಷ್ಣ ದಂಷ್ಟ್ರಾಯ ಧೀಮಹಿ''.

ನಂತರ - ''ತನ್ನೋ ನಾರಸಿಂಹಃ ಪ್ರಚೋದಯಾತ್'' -

ತತ್ - ಎಂದರೆ ಅಂತಹ ಆ ರೂಪದ, ನಾರಸಿಂಹಃ - ನರಸಿಂಹನು, ನಃ - ನಮ್ಮನ್ನು, ಪ್ರಚೋದಯಾತ್ - ಪ್ರೇರೇಪಿಸಲಿ, ಅಥವಾ ತಿಳಿಯಲು ಮತ್ತು ಧ್ಯಾನಿಸಲು ಅವನಲ್ಲಿ ಮನಸ್ಸನ್ನು ನಿಲ್ಲಿಸಲು ಬೆನ್ನೆಲುಬಾಗಿ ನಿಲ್ಲಲಿ. (ಅಂತಹ ಧ್ಯಾನದಲ್ಲಿ ನರಸಿಂಹನು ನಮ್ಮ ಹುರಿದುಂಬಿಸಲಿ, ಪ್ರೇರೇಪಿಸಲಿ ಎಂದೂ ಅರ್ಥ ಮಾಡಬಹುದು). ನರನ ದೇಹವನ್ನು ನಿರ್ದೇಶಿಸುವ ವಜ್ರನಖವೂ ಸಿಂಹದ ದೇಹವನ್ನು ನಿರ್ದೇಶಿಸುವ ತೀಕ್ಷ್ಣದಂಷ್ಟ್ರವೂ ನಮ್ಮ ಮನಸ್ಸಿನಲ್ಲಿ ನಿಲ್ಲುವಂತೆ ಆ ಶ್ರೀ ನರಸಿಂಹ ಸ್ವಾಮಿಯು ನಮ್ಮ ಮನ ಬುದ್ಧಿ ಅಹಂಕಾರ ಚಿತ್ತಗಳನ್ನು ಹುರಿದುಂಬಿಸಲಿ ಮತ್ತು ಪ್ರೋತ್ಸಾಹಿಸಲಿ ಎಂಬುದೇ ಈ ಗಾಯತ್ರಿ ಮಂತ್ರದ ಅಂತರಾರ್ಥ.

ಈ ಅಂತರಾರ್ಥವನ್ನು ಮನನ ಮಾಡುತ್ತಾ ಈ ಗಾಯತ್ರಿ ಮಂತ್ರ ಜಪವನ್ನು ಮಾಡಿದರೆ ನರಸಿಂಹನು ಒಲಿದು ಅವನ ಇಚ್ಛೆಯಂತೆ ಫಲ ನೀಡುವುದರಲ್ಲಿ ಸಂದೇಹವಿಲ್ಲ. ನಡೆಸಿಯೇ ನಡೆಸುತ್ತಾನೆ. ಆ ಕರುಣಾಳುವಾದ ಲಕ್ಷ್ಮೀನರಸಿಂಹನು ಭಕ್ತ ಬಾಂಧವ, ಭಕ್ತಪರಿಪಾಲಕ, ದಯಾಮಯ. ಅಂತಹ ಪ್ರಬಲ ದುಷ್ಟ ಕೃತ್ಯಗಳನ್ನು ನಡೆಸಿ ಶ್ರೀ ಹರಿಯ ಪರಮ ಭಕ್ತನನ್ನು ವಿಚಿತ್ರ ವಿಚಿತ್ರ ರೀತಿಯಲ್ಲಿ ಹಿಂಸಿಸಿದಂತಹ ಹಿರಣ್ಯಕಶಿಪುವನ್ನೇ ತಾನೇ ಸ್ಪರ್ಶಮಾಡಿ ಮುಕ್ತಿ ಕೊಟ್ಟಿರುವಾಗ, ಯಾವ ರೀತಿಯಲ್ಲಿಯೂ ಯಾವ ಗುಣ,

ಕಾರ್ಯಗಳಲ್ಲಿಯೂ ಹಿರಣ್ಯಕಶಿಪುವಿನ ಸಮೀಪವಿರಲಿ ದೂರವೂ ಸಹ ನಿಲ್ಲದ ನಮ್ಮಂತಹವರನ್ನು ನರಸಿಂಹನು ಕಾಪಾಡುವುದರಲ್ಲಿ ಲವಲೇಶವೂ ಸಂಶಯಪಡಲು ಕಾರಣವಿಲ್ಲ. ಎಂದರೆ ನಮ್ಮನ್ನು ಕಾಪಾಡಿ ಕೈ ಹಿಡಿದು ಅವನಲ್ಲಿಗೆ ಅವನ ಅಂತರಾತ್ಮದೊಳಗೆ ಈ ಆತ್ಮಕ್ಕೆ ಸ್ಥಳ ನೀಡಿಯೇ ತೀರುತ್ತಾನೆ, ಪರಿಗ್ರಹಿಸುತ್ತಾನೆ. ಈ ಬಲವಾದ ನಂಬಿಕೆಯೇ ಅವನ ಕರುಣೆ, ಕೃಪೆ ದಯೆಗೆ ಪಾತ್ರಮಾಡುತ್ತಿದೆ ಆದರಿಂದ ಈ ಗಾಯತ್ರಿ ಮಂತ್ರವನ್ನು-

*"ವಜ್ರನಖಾಯ ವಿದ್ಮಹೇ ತೀಕ್ಷ್ಣದಂಷ್ಟ್ರಾಯ ಧೀಮಹಿ ।*
*ತನ್ನೋ ನಾರಸಿಂಹಃ ಪ್ರಚೋದಯಾತ್ ॥"*

ಅಸಂಖ್ಯ ಬಲದಲ್ಲಿ ನಡೆಸಲು ಮನಸ್ಸನ್ನು ಪರಮಾತ್ಮನು - ಪರಬ್ರಹ್ಮ ಸ್ವರೂಪಿ ನರಸಿಂಹನು ಅಥವಾ ನರಸಿಂಹ ರೂಪಿ ಪರಬ್ರಹ್ಮನು ಅನವರತ, ನಿರಂತರ ಕರುಣಿಸಲಿ",

ಇತಿ ಶ್ರೀ ನರಸಿಂಹನ / ಲಕ್ಷ್ಮೀ ನರಸಿಂಹನ ಕಿಂಕರ ಭಕ್ತ ಪಾದರೇಣು ಎಂಬ ಭಾವನೆಯಿಂದ ಪ್ರಾರ್ಥಿಸೋಣ.

★ ★ ★

ಇದೇ ರೀತಿ ಅನೇಕ ದೇವ ದೇವತೆಗಳಿಗೆ ಗಾಯತ್ರಿ ಮಂತ್ರಗಳಿವೆ. ಇದರ ಮನನ ಜಪದಿಂದ ಅನೇಕರು ಪರಮಾನಂದವನ್ನು ಹೊಂದಿದ್ದಾರೆ. ಎಲ್ಲರೂ (ಯಾರನ್ನು ಬಿಡದೆ) ಹೊಂದಬಹುದು, ಭಗವತ್ಸಾಕ್ಷಾತ್ಕಾರವನ್ನು ಪಡೆಯಬಹುದು - ಏಕೆ, ಅದೇ ಈ ಜನ್ಮದ ಪರಮ ಗುರಿಯಾಗಿರಲಿ - ಎಂಬುದೇ ಈ ಗ್ರಂಥದ ಪ್ರತಿ ಪಾದನೆ .............!!! ಯಾಕಾಗಬಾರದು!

೧. *ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ ।*
*ತನ್ನೋ ರುದ್ರಃ ಪ್ರಚೋದಯಾತ್ ॥*

೨. *ತತ್ಪುರುಷಾಯ ವಿದ್ಮಹೇ ವಕ್ರತುಂಡಾಯ ಧೀಮಹಿ ।*
*ತನ್ನೋ ದಂತಿಃ ಪ್ರಚೋದಯಾತ್ ॥*

೩. *ತತ್ಪುರುಷಾಯ ವಿದ್ಮಹೇ ಚಕ್ರತುಂಡಾಯ ಧೀಮಹಿ ।*
*ತನ್ನೋ ನಂದಿಃ ಪ್ರಚೋದಯಾತ್ ॥*

೪. *ತತ್ಪುರುಷಾಯ ವಿದ್ಮಹೇ ಮಹಾಸೇನಾಯ ಧೀಮಹಿ ।*
*ತನ್ನೋ ಷಣ್ಮುಖಃ ಪ್ರಚೋದಯಾತ್ ॥*

೫. *ತತ್ಪುರುಷಾಯ ವಿದ್ಮಹೇ ಸುವರ್ಣಪಂಖಾಯ ಧೀಮಹಿ ।*
*ತನ್ನೋ ಗರುಡ ಪ್ರಚೋದಯಾತ್ ॥*

೬. ವೇದಾತ್ಮಾನಾಯ ವಿದ್ಮಹೇ ಹಿರಣ್ಯಗರ್ಭಾಯ ಧೀಮಹಿ ।
ತನ್ನೋ ಬ್ರಹ್ಮ ಪ್ರಚೋದಯಾತ್ ॥

೭ ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ ॥

೮. ವಜ್ರನಖಾಯ ವಿದ್ಮಹೇ ತೀಕ್ಷ್ಣದಂಷ್ಟ್ರಾಯ ಧೀಮಹಿ ।
ತನ್ನೋ ನಾರಸಿಂಹಃ ಪ್ರಚೋದಯಾತ್ ॥

೯. ಭಾಸ್ಕರಾಯ ವಿದ್ಮಹೇ ಮಹದ್ದ್ಯುತಿಕರಾಯ ಧೀಮಹಿ ।
ತನ್ನೋ ಆದಿತ್ಯಃ ಪ್ರಚೋದಯಾತ್ ॥

೧೦. ವೈಶ್ವಾನರಾಯ ವಿದ್ಮಹೇ ಲಾಲೀಲಾಯ ಧೀಮಹಿ ।
ತನ್ನೋ ಅಗ್ನಿಃ ಪ್ರಚೋದಯಾತ್ ॥

೧೧. ಕಾತ್ಯಾಯನಾಯ ವಿದ್ಮಹೇ ಕನ್ಯಕುಮಾರಿ ಧೀಮಹೀ ।
ತನ್ನೋ ದುರ್ಗಿಃ ಪ್ರಚೋದಯಾತ್ ॥

---

# ನಿವೇದನೆ ಮತ್ತು
# ಪುನಃ ಸಮರ್ಪಣೆ

''ಇಂತು ಇಲ್ಲಿಯವರೆಗೂ ನಡೆಸಿಕೊಂಡು ಬಂದ
ಪರಮ ಕೃಪಾಳುವಾದ ಪರಬ್ರಹ್ಮ ಸ್ವರೂಪಿ
ಶ್ರೀ ಲಕ್ಷ್ಮೀನರಸಿಂಹಸ್ವಾಮಿಯ ಅನಂತ ನಿರಂತರ
ಮನನ ಮಾಡಲು ಮತ್ತು ಅವನ ಸ್ವರೂಪವನ್ನು
(ಸಾಕಾರವಾಗಲೀ, ನಿರಾಕಾರವಾಗಲೀ) ಸಕಲ ಜೀವಿಗಳ ಮನಸ್ಸಿನಲ್ಲಿ
ನಿಲ್ಲಿಸಿ ಸಂಸಾರ ಸಾಗರದಿಂದ ಬಿಡುಗಡೆ
ಮಾಡಿ ತನ್ನಲ್ಲಿ ಆಶ್ರಯ ನೀಡಲಿ ಎಂದು
ಪ್ರಾರ್ಥಿಸುವ ಈ ಅವಕಾಶವನ್ನು ಕಲ್ಪಿಸಿದ
ಆ ಪರಮಾತ್ಮನಲ್ಲಿ ಈ ಆತ್ಮವು
ಭಗವದಿಚ್ಛೆಯಂತೆ ವಿರಮಿಸಲಿ''